ಪುರಂದರ ಸಾಹಿತ್ಯ ದರ್ಶನ–ಸಂಪುಟ ೧

# ಜೀವನ ದರ್ಶನ

ಸಂಪಾದಕರು

ವಿದ್ಯಾಲಂಕಾರ ಪ್ರೊ॥ ಸಾ ಕೃ ರಾಮಚಂದ್ರರಾವ್

ಸಹಾಯಕ ಸಂಪಾದಕರು

ಪ್ರಕಾಶನ

ಶ್ರೀ ಪುರಂದರದಾಸರ ಐದನೆಯ ಶತಮಾನೋತ್ಸವದ ಸಂದರ್ಭದಲ್ಲಿ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
೧೪-೩ಎ, ನೃಪತುಂಗ ರಸ್ತೆ, ಬೆಂಗಳೂರು ೫೬೦ ೦೦೨

PURANDARA SAHITYA DARSHANA (in 4 Volumes)—Collection of Purandaradasa s compositions with Annotations and a Critical Estimate of his Personality Times and Works Vol 1 Jivana-Darshana (Compositions pertaining to his life and travel) Vol 2 Adhyatma Darshana (Philosophical compositions) Vol 3 Samaja-Darshana (Compositions dealing with social and ethical problems) Vol 4 Kirtana-Darshana (Compositions dealing with Krishna Suladis Ugabhogas and Udayaragas) Edited by Prof S K Ramachandra Rao and Associate Editors Prof A R Mitra and Smt Ratna Shivashankar Published by Sri A R Chandrahasa Gupta I A S for The Directorate of Kannada and Culture Government of Karnataka 14-3A Nrupathunga Road Bangalore 560002 on the occasion of the 500th Birth Anniversary of Sri Purandaradasa 1985

Pp. 435 + viii

© ಕರ್ನಾಟಕ ಸರ್ಕಾರ

ನಾಲ್ಕು ಸಂಪುಟಗಳ ಬೆಲೆ : ರೂ. 65-00

ಛಾಯಾ ಚಿತ್ರಗಳು ಬಿ ಕೇಸರ್‌ಸಿಂಗ್

ಮೊದಲ ಮುದ್ರಣ 1985, ಶ್ರೀ ಪುರಂದರದಾಸರ ಐದನೆಯ ಶತಮಾನೋತ್ಸವ ಸಂದರ್ಭದಲ್ಲಿ ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ಪರವಾಗಿ, ಶ್ರೀ ಅ ರಾ ಚಂದ್ರಹಾಸಗುಪ್ತ, ಐ ಎ ಎಸ್, ಅವರಿಂದ ಪ್ರಕಟಿತ ಐಬಿಎಚ್ ಪ್ರಕಾಶನ ಪ್ರಿಂಟರಿ, ರಾಮಯ್ಯ ಇಂಡಸ್ಟ್ರಿಯಲ್ ಎಸ್ಟೇಟ್, ಬೆಂಗಳೂರು 560 054ರ ಪರವಾಗಿ ಎಚ್ ಎಸ್ ಎನ್. ರಾವ್, ಅವರಿಂದ ಮುದ್ರಣವಾದದ್ದು

ರಾಮಕೃಷ್ಣ ಹೆಗಡೆ
ಮುಖ್ಯಮಂತ್ರಿ



ವಿಧಾನಸೌಧ,
ಬೆಂಗಳೂರು

ದಿನಾಂಕ 16–11–1985

## ಮುನ್ನುಡಿ

ಭಾರತೀಯ ಸಂಸ್ಕೃತಿಗೆ ಕನ್ನಡನಾಡು ಕೊಟ್ಟಿರುವ ಕೊಡುಗೆಗಳಲ್ಲಿ ಹರಿದಾಸರ ಸಾಹಿತ್ಯ ವಿಶಿಷ್ಟವಾದುದು ದಾಸರಲ್ಲಿ ಪುರಂದರದಾಸರು ಅಗ್ರಗಣ್ಯರು ವಿಜಯ ನಗರ ಸಾಮ್ರಾಜ್ಯದ ಕಡೆಯ ದಿನಗಳಲ್ಲಿ ಬಾಳಿ ಬದುಕಿದ ಅವರು ಜನಜೀವನದಲ್ಲಿ ಒಂದು ಕ್ರಾಂತಿಯನ್ನೇ ಮಾಡಿದರು ಭಕ್ತಿಯ ದಾರಿಯಲ್ಲಿ ಜಾತಿಮತಗಳ ಕಟ್ಟು ಪಾಡು ಇರದೆಂದು, ಸಮಾಜದ ಸುಭದ್ರತೆಯಲ್ಲಿ ವ್ಯಕ್ತಿಜೀವನದ ಸದಾಚಾರ ನಿಷ್ಠೆ ಮುಖ್ಯವಾದುದೆಂದು, ವಾದವಿವಾದಗಳಿಗಿಂತ ಸಮನ್ವಯವೇ ಹಿತಕರವಾದುದೆಂದು ಅವರು ಊರೂರು, ಕೇರಿ ಕೇರಿ ತಿರುಗಾಡಿ ಪ್ರಚಾರ ಮಾಡಿದರು ವಿಜಯನಗರದ ಚಕ್ರವರ್ತಿ ಕೃಷ್ಣದೇವರಾಯನೇ ಅವರಲ್ಲಿ ಸ್ನೇಹಭಾವದಿಂದ ಇದ್ದರೂ, ಅವರು ರಾಜಾಶ್ರಯವನ್ನು ತಿರಸ್ಕರಿಸಿ ಊಂಛವೃತ್ತಿಯನ್ನು ಹಿಡಿದು ಸ್ವತಂತ್ರವಾಗಿ ಬಾಳಿದರು ದಕ್ಷಿಣ ದೇಶದಲ್ಲೆಲ್ಲಾ ಬಳಕೆಯಲ್ಲಿರುವ ಕರ್ನಾಟಕ ಸಂಗೀತಕ್ಕೆ ಅವರು ಪಿತಾಮಹರೆಂಬುದನ್ನಂತೂ ಎಲ್ಲರೂ ಬಲ್ಲರು ಪುರಂದರದಾಸರ ಪ್ರಭಾವವನ್ನು ಕನ್ನಡನಾಡು ಮಾತ್ರವಲ್ಲದೆ ಮಹಾರಾಷ್ಟ್ರ, ಆಂಧ್ರ, ತಮಿಳುನಾಡು ಈ ಪ್ರದೇಶಗಳಲ್ಲೂ ಗುರುತಿಸಬಹುದು

ಇಂಥ ಮಹನೀಯರು ಹುಟ್ಟಿ ಈ ವರ್ಷಕ್ಕೆ ಐದು ನೂರು ವರ್ಷಗಳಾಗುವುದೆಂದು ಎಣಿಕೆ ಕನ್ನಡಿಗರೆಲ್ಲರೂ ಉತ್ಸಾಹದಿಂದ ದಾಸರ ಐದನೆಯ ಜನ್ಮಶತಮಾನೋತ್ಸವವನ್ನು ಆಚರಿಸಬೇಕಾದುದು ಸಹಜವೇ ಈ ಸಂದರ್ಭದಲ್ಲಿ ಕರ್ನಾಟಕ ಸರ್ಕಾರವೂ ಪುರಂದರದಾಸರ ನೆನಪನ್ನು ಉಳಿಸಲು, ಅವರ ಕೊಡುಗೆಯನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳಲು ಕೆಲವೊಂದು ಯೋಜನೆಗಳನ್ನು ಹಾಕಿಕೊಂಡಿದೆ

ಅವುಗಳಲ್ಲಿ ಅವರ ಕೃತಿಗಳನ್ನೆಲ್ಲಾ ಸಂಗ್ರಹಮಾಡಿ ಪ್ರಕಟಿಸುವುದೊಂದು ಈಗಾಗಲೇ ಹಲವಾರು ಸಂಗ್ರಹಗಳು ಹೊರಬಿದ್ದಿದ್ದರೂ ಜನಸಾಮಾನ್ಯರಿಗೂ ಪಂಡಿತರಿಗೂ ಉಪಯುಕ್ತವಾಗುವ ಪ್ರಕಟಣೆ ಈವರೆಗೆ ಆಗಿಲ್ಲ

ಇದನ್ನು ಕೈಗೊಳ್ಳಲು ಸರ್ಕಾರ ನಿರ್ದರಿಸಿ ದಾಸರ ಉಪಲಬ್ಧವಾಗಿರುವ ಎಲ್ಲ ಕೃತಿಗಳನ್ನೂ ವಿಮರ್ಶೆ ಮಾಡಿ, ಪ್ರಸ್ತಾವನೆ, ವಿವರಣೆಗಳೊಂದಿಗೆ, ನಾಲ್ಕು ಸಂಪುಟಗಳಲ್ಲಿ ಪ್ರಕಟಿಸುತ್ತಿದೆ ಈ ಕೆಲಸವನ್ನು ನಾಡಿನ ವಿದ್ವಾಂಸರೂ ಈ ಕ್ಷೇತ್ರದಲ್ಲಿ ತಜ್ಞರೂ ಆದ ಪ್ರೊ॥ ಎಸ್ ಕೆ ರಾಮಚಂದ್ರರಾಯರು ಒಪ್ಪಿ ನಾಲ್ಕು ಸಂಪುಟಗಳನ್ನು ಅತ್ಯಲ್ಪ ಕಾಲದಲ್ಲಿ ಬಹುಶ್ರಮದಿಂದ ಸಿದ್ಧಪಡಿಸಿಕೊಟ್ಟಿದ್ದಾರೆ ಐಬಿಎಚ್ ಪ್ರಕಾಶನದವರು ಸಕಾಲದಲ್ಲಿ ಸುಂದರವಾಗಿ ಮುದ್ರಿಸಿಕೊಟ್ಟಿದ್ದಾರೆ

ಈ ಪ್ರಕಟಣೆಯಿಂದ ಜನರಲ್ಲಿ ದಾಸರ ಸಾಹಿತ್ಯದ ಪರಿಚಯು ಹೆಚ್ಚುವುದೆಂದು, ದಾಸರು ಉಪದೇಶಿಸಿದ ಜೀವನಮೌಲ್ಯಗಳು ಬೇರೂರುವುದೆಂದು ಆಶಿಸುತ್ತೇನೆ

(ರಾಮಕೃಷ್ಣ ಹೆಗಡೆ)

## ಸಂಪಾದಕನ ಮೊದಲ ಮಾತು

ಕರ್ನಾಟಕ ಸರ್ಕಾರದ ಕಾರ್ಯದರ್ಶಿಗಳಲ್ಲೊಬ್ಬರಾದ ಸನ್ಮಾನ್ಯ ಶ್ರೀ ಚಿರಂಜೀವಿ ಸಿಂಗ್ ಅವರು ಈ ವರ್ಷದ ಸೆಪ್ಟೆಂಬರ್ ತಿಂಗಳ ಎರಡನೇ ವಾರದಲ್ಲಿ ನನ್ನೊಂದಿಗೆ ಮಾತನಾಡುತ್ತ, ಈ ವರ್ಷ ಸರ್ಕಾರವು ಪುರಂದರದಾಸರ ಐದನೆಯ ಜನ್ಮ ಶತಮಾನೋತ್ಸವವನ್ನು ವಿಶಿಷ್ಟರೀತಿಯಲ್ಲಿ ಆಚರಿಸಬೇಕೆಂದು ಬಯಸಿದೆ ಯೆಂದೂ, ಆ ಸಂದರ್ಭದಲ್ಲಿ ಪುರಂದರದಾಸರ ಸಮಗ್ರಸಾಹಿತ್ಯವನ್ನು ನಾಲ್ಕು ಸಂಪುಟ ಗಳಲ್ಲಿ ಪ್ರಕಟಿಸುವ ಯೋಜನೆಯನ್ನು ಹಾಕಿಕೊಂಡಿದೆಯೆಂದೂ ಹೇಳಿ, ನಾನು ಈ ಸಂಪುಟಗಳ ಸಂಪಾದಕನಾಗಿರಬೇಕೆಂದು ಕೇಳಿಕೊಂಡರು ಅವರ ಸೌಜನ್ಯಕ್ಕೂ ಉತ್ಸಾಹಕ್ಕೂ ಮಣಿದು ಒಪ್ಪಿಕೊಂಡೆನಾದರೂ, ಮೂರು ತಿಂಗಳುಗಳಲ್ಲಿ ನಾಲ್ಕು ಸಂಪುಟಗಳನ್ನು ಸಿದ್ಧಪಡಿಸುವ ಹೊಣೆಗಾರಿಕೆಗೆ ಅಂಜದಿರಲಿಲ್ಲ ಆದರೆ ನನ್ನ ಸ್ನೇಹಿತ ರಾದ, ಐಬಿಎಚ್ ಪ್ರಕಾಶನದ ನಿರ್ದೇಶಕರಾದ ಸನ್ಮಾನ್ಯ ಶ್ರಿ ಜಿ ಕೆ ಅನಂತರಾಮ್ ರವರೇ ಮುದ್ರಣದ ಭಾರವನ್ನು ಹೊತ್ತು ನನ್ನೊಂದಿಗೆ ಇದ್ದರಾಗಿ ನಾನು ಧೈರ್ಯ ತಾಳಿದೆ ಮತ್ತೆ ಈ ಕೆಲಸಕ್ಕೆ ಸರ್ಕಾರದ ಕಡೆಯಿಂದ ನೇರವಾಗಿ ಸಂಬಂಧಪಟ್ಟಂತೆ ಇರುವ ಸನ್ಮಾನ್ಯ ಶ್ರೀ ಕೆ ಸಿ ಶಿವಪ್ಪನವರೂ (ಕನ್ನಡ ಸಂಸ್ಕೃತಿ ಇಲಾಖೆಯ ಸಹ ನಿರ್ದೇಶಕರು) ಕೂಡ ನನ್ನ ಬಹುಕಾಲದ ಮಿತ್ರರೇ, ಹಿತೈಷಿಗಳೇ ಎಂದಮೇಲೆ ಅಂಜಿಕೆಗೆ ಅವಕಾಶವೆಲ್ಲಿ ? ಈ ಇಲಾಖೆಯ ನಿರ್ದೇಶಕರಾದ ಸನ್ಮಾನ್ಯ ಚಂದ್ರಹಾಸ ಗುಪ್ತರವರೂ ನನ್ನ ಕೆಲಸಕ್ಕೆ ಎಲ್ಲ ವಿಧದಿಂದಲೂ ನೆರವನ್ನು ನೀಡುವುದಾಗಿ ಭರವಸೆ ಯಿತ್ತರು

ಇಷ್ಟೆಲ್ಲ ಒತ್ತಾಸೆಯಿದ್ದಮೇಲೆ ಕೆಲಸಕ್ಕೇನು ಅಡ್ಡಿ ? ಈಗ ಕೆಲಸವನ್ನು ಸಕಾಲ ದಲ್ಲಿ ಮುಗಿಸಿದ್ದೇನೆ 'ಮುಗಿಸಿದ್ದೇನೆ' ಎಂದರೆ ವ್ಯವಹಾರದ ಮಾತಷ್ಟೆ , ದಿಟ ವಾಗಿ 'ಮುಗಿಸಿದ್ದೇವೆ' ಎನ್ನಬೇಕು ಮೇಲೆ ಕಾಣಿಸಿದ ಎಲ್ಲರೂ ಅಂತರಂಗದಲ್ಲಿ ನಿಂತು ನನ್ನ ಸಂಪಾದನೆಯ ಕೆಲಸವನ್ನು ಕೈಗೂಡಿಸಿದರು ಅವರೆಲ್ಲರಿಗೆ ನನ್ನ ಕೃತಜ್ಞತೆಯನ್ನು ಮನಸಾರೆ ಸಲ್ಲಿಸುತ್ತೇನೆ ವಿಶೇಷವಾಗಿ ನನ್ನ ಮಿತ್ರರಾದ ಅನಂತರಾಮ್ ಮತ್ತು ಶಿವಪ್ಪನವರೇ ಈ ಕೆಲಸವನ್ನು ನಡೆಸಿದವರು , ಅವರಿಬ್ಬರೂ ನನಗೆ ತುಂಬ ಹತ್ತಿರದವರಾದುದರಿಂದ ಪ್ರಕಟವಾಗಿ ಧನ್ಯವಾದವನ್ನು ಸಲ್ಲಿಸಲಾರೆ !

ಈ ಅವಕಾಶವನ್ನು ನನಗೆ ಒದಗಿಸಿದುದಕ್ಕಾಗಿ ಕರ್ನಾಟಕ ಸರ್ಕಾರಕ್ಕೆ ಋಣಿಯಾಗಿದ್ದೇನೆ

ಈ ಸಂದರ್ಭದಲ್ಲಿ ಇದೊಂದು ಮಾತನ್ನೂ ಹೇಳಿದರೆ ತಪ್ಪಾಗದು ಪುರಂದರದಾಸರ ಚತುರ್ಥ ಶತಮಾನೋತ್ಸವವನ್ನು ೧೯೬೪ರಲ್ಲಿ ಆಚರಿಸಲು ಬೆಂಗಳೂರಿನಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ನೇತೃತ್ವದಲ್ಲಿ ಸಮಿತಿಯೊಂದು ವ್ಯವಸ್ಥಿತವಾಗಿ, ನನ್ನಿಂದ ಪುರಂದರದಾಸರನ್ನು ಕುರಿತಂತೆ ಗ್ರಂಥವೊಂದನ್ನು ಬರೆಯಿಸಿ ಪ್ರಕಟಿಸಿತು , ಪುರಂದರದಾಸರ ಒಂದು ನೂರು ಕೃತಿಗಳಿಗೆ ಸ್ವರಸಂಯೋಜನೆಯನ್ನೂ ಅಳವಡಿಸಿ ಪ್ರಕಟಿಸುವುದಾಯಿತು ಆ ಸಂದರ್ಭದಲ್ಲಿ ಪುರಂದರದಾಸರ ಉಪಲಬ್ಧಸಾಹಿತ್ಯವನ್ನೆಲ್ಲ ವಿವರಣೆಯೊಂದಿಗೆ ಪ್ರಕಟಿಸುವ ಉದ್ದೇಶವೂ ಇದ್ದಿತು ಆದರೆ ಯಾವ ಆರ್ಥಿಕ ನೆರವೂ ಇಲ್ಲದೆ ಸಮಿತಿ ಈ ಕೆಲಸವನ್ನು ಮಾಡಲಾಗಲಿಲ್ಲ. ಈಗ, ಇಪ್ಪತ್ತು ವರ್ಷಗಳನಂತರ ಇದೇ ಕೆಲಸವನ್ನು ನನ್ನಿಂದಲೇ ಮಾಡಿಸುತ್ತಿರುವುದು ವಿಧಿಯೆಂದೇ ನನ್ನ ಎಣಿಕೆ

ಇನ್ನು ಸಂಪಾದನೆಗೆ ಅಗತ್ಯವಾದ ಸಾಹಿತ್ಯವನ್ನು ಒದಗಿಸಿ ಉಪಕಾರ ಮಾಡಿದವರು ಸನ್ಮಾನ್ಯ ಶ್ರೀ ಜಿ ಅಶ್ವತ್ಥನಾರಾಯಣ ಅವರು ಶುದ್ಧವಾದ ಪಾಠವನ್ನು ನಿರ್ಧರಿಸುವಲ್ಲಿ, ಹಲವು ಪದಗಳ ಮತ್ತು ಉಗಾಭೋಗಗಳ ಪ್ರತಿಮಾಡಿಕೊಡುವಲ್ಲಿ ನೆರವಾದವರು ಮಿತ್ರರಾದ ಶ್ರೀ ಸಿ ಎಲ್ ಪುರುಷೋತ್ತಮರಾಯರು , ಹಲವಾರು ದಿನಗಳಲ್ಲಿ ನನ್ನೊಂದಿಗೆ ಕೂತು, ಕೆಲಸವನ್ನು ಹಗುರಮಾಡಿದರು ಅವರಿಬ್ಬರನ್ನೂ ಈ ಸಂದರ್ಭದಲ್ಲಿ ಕೃತಜ್ಞತೆಯಿಂದ ನೆನೆದುಕೊಳ್ಳುತ್ತೇನೆ ಕಡೆಯದಾಗಿ, ತುರ್ತುಪರಿಸ್ಥಿತಿಯಂತೆ ಮುದ್ರಣ ಕಾರ್ಯದಲ್ಲಿ ತಮ್ಮ ಎಚ್ಚರದಿಂದ, ಪ್ರೀತಿಯಿಂದ ನೆರವಾದವರು ಐಬಿಎಚ್ ಮುದ್ರಣಾಲಯದ ಶ್ರೀ ಎಚ್ ಎಸ್ ನಾರಾಯಣರಾಯರು ಅವರನ್ನು ನೆನೆಯದೆ ಇರಲು ಸಾಧ್ಯವೆ ?

ಹೀಗೆ ಹಲವಾರು ಚೇತನಗಳು ಸೇರಿ ಈ ನಾಲ್ಕು ಸಂಪುಟಗಳು ಸಿದ್ಧವಾಗಿ ಹೊರಬಂದಿವೆ ಜನ ಅವನ್ನು ಮೆಚ್ಚಿಕೊಂಡರೆ ನಾವೆಲ್ಲ ಕೃತಾರ್ಥರು

**ಸಾಲಿಗ್ರಾಮ ಕೃಷ್ಣ ರಾಮಚಂದ್ರರಾವ್**

# ನೆನಕೆ

ಕರ್ನಾಟಕ ಸರಕಾರವು ಪುರಂದರದಾಸರ ಐದುನೂರನೆಯ ಹುಟ್ಟುಹಬ್ಬದ ಉತ್ಸವವನ್ನು ನಡೆಸಲು ಸನ್ಮಾನ್ಯ ಡಾ॥ ಜೀವರಾಜ ಆಳ್ವ (ವಾರ್ತಾ, ಕನ್ನಡ ಮತ್ತು ಸಂಸ್ಕೃತಿ ಸಚಿವರು) ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿತು ಉತ್ಸವದ ಅಂಗವಾಗಿ ಪುರಂದರದಾಸರ ಸಮಗ್ರ ಸಾಹಿತ್ಯವನ್ನು ಪ್ರಕಟಿಸುವ ನಿರ್ಧಾರವನ್ನು ಸಮಿತಿ ಕೈಗೊಂಡಿತು ಡಾ॥ ಆಳ್ವರವರ ಸಾಹಿತ್ಯಾಭಿಮಾನ, ಸಂಸ್ಕೃತಿ ಪಕ್ಷಪಾತ ಮತ್ತು ಕರ್ತವ್ಯ ನಿಷ್ಠೆ ಈಗ ಎಲ್ಲರಿಗೂ ತಿಳಿದದ್ದೇ ಅವರ ಆದರದ ಫಲವಾಗಿ ನಾವು ಕೈಗೊಂಡ ಕೆಲಸ ಸುಸೂತ್ರವಾಗಿ ಸಾಗಿತು ಸಮಿತಿಯ ಕಾರ್ಯದರ್ಶಿಯವರಾದ ಸನ್ಮಾನ್ಯ ಮಿತ್ರರು ಶ್ರೀ ಕೆ ಸಿ ಶಿವಪ್ಪನವರು ಡಾ॥ ಆಳ್ವರ ಸಂಕಲ್ಪಕ್ಕೆ ನೆರವಾಗಿ ನಿಂತರು ಹಿನ್ನೆಲೆಯಲ್ಲಿ ಸನ್ಮಾನ್ಯ ಶ್ರೀ ರಾಮಕೃಷ್ಣ ಹೆಗಡೆ (ರಾಜ್ಯದ ಮುಖ್ಯಮಂತ್ರಿಗಳು) ಅವರ ಪ್ರೋತ್ಸಾಹ, ಶ್ರೀ ಚಿರಂಜೀವಿ ಸಿಂಗ್ (ರಾಜ್ಯದ ವಾರ್ತಾ, ಕನ್ನಡ ಸಂಸ್ಕೃತಿ ಕಾರ್ಯದರ್ಶಿಯವರು) ಅವರ ಕನ್ನಡಾಭಿಮಾನ, ಸಜ್ಜನಿಕೆ, ಸಂಸ್ಕೃತಿ ನಿಷ್ಠೆ ಇವು ಒತ್ತಾಸೆಯಾಗಿ ನಿಂತುವು

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಸನ್ಮಾನ್ಯ ಶ್ರೀ ಅ ರಾ ಚಂದ್ರಹಾಸಗುಪ್ತರವರ ಮತ್ತು ಅಧಿಕ ನಿರ್ದೇಶಕರಾದ ಸನ್ಮಾನ್ಯ ಶ್ರೀ ಎಂ ಜಿ ಹಾಲಪ್ಪನವರ್ ಅವರ ಸಂಪೂರ್ಣ ಸಹಕಾರ ದೊರಕಿತು ಮತ್ತು ಸಮಿತಿಯ ಸದಸ್ಯರು ನೆರವಾಗಿದ್ದಾರೆ

| | | |
|---|---|---|
| 1 | ಡಾ॥ ಜೀವರಾಜ ಆಳ್ವ<br>(ಕನ್ನಡ ಮತ್ತು ಸಂಸ್ಕೃತಿ ಸಚಿವರು) | ಅಧ್ಯಕ್ಷರು |
| 2 | ಶ್ರೀ ಚಿರಂಜೀವಿ ಸಿಂಗ್<br>(ಕಾರ್ಯದರ್ಶಿಗಳು, ವಾರ್ತಾ ಇಲಾಖೆ) | ಉಪಾಧ್ಯಕ್ಷರು |
| 3 | ಶ್ರೀ ಬಿ ನರಸಿಂಹಯ್ಯ<br>(ಸೂಪರಿಂಟೆಂಡೆಂಟಿಂಗ್ ಆರ್ಕಾಲಜಿಸ್ಟ್) | ಸದಸ್ಯರು |
| 4 | ಶ್ರೀ ಪಿ ಎ ನಜರತ್<br>(ಮಹಾ ನಿರ್ದೇಶಕರು, ಐ ಸಿ ಸಿ ಆರ್ ) | " |
| 5 | ಜಿಲ್ಲಾಧಿಕಾರಿಗಳು<br>ಬಳ್ಳಾರಿ | " |

| | | |
|---|---|---|
| 6 | ಶ್ರೀ ಶ್ರೀನಿವಾಸನ್<br>(ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ) | ಸದಸ್ಯರು |
| 7 | ಶ್ರೀ ಎಂ ಆರ್ ಶ್ರೀನಿವಾಸಮೂರ್ತಿ<br>(ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ) | " |
| 8 | ಶ್ರೀ ಅ ಸುಂದರ<br>(ನಿರ್ದೇಶಕರು, ಪ್ರಾಚ್ಯ ಮತ್ತು ವಸ್ತು ಸಂಗ್ರಹಾಲಯ ಇಲಾಖೆ) | " |
| 9 | ನಿರ್ದೇಶಕರು<br>ಆಕಾಶವಾಣಿ ಬೆಂಗಳೂರು | |
| 10 | ನಿರ್ದೇಶಕು,<br>ದೂರದರ್ಶನ ಕೇಂದ್ರ ಬೆಂಗಳೂರು | " |
| 11 | ಶ್ರೀ ಅ ರಾ ಚಂದ್ರಹಾಸಗುಪ್ತ<br>(ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ) | " |
| 12 | ಡಾ॥ ವಿ ದೊರೆಸ್ವಾಮಿ ಆಯ್ಯಂಗಾರ್ | " |
| 13 | ಶ್ರೀ ಬಿ ವಿ ಕೆ ಶಾಸ್ತ್ರಿ | " |
| 14 | ಶ್ರೀ ಹೆಚ್ ಕೆ ರಂಗನಾಥ್<br>(ನಿರ್ದೇಶಕರು, ಭಾರತೀಯ ವಿದ್ಯಾಭವನ) | " |
| 15 | ಶ್ರೀ ಅಪ್ಪಣ್ಣಾಚಾರ್ (ತಿರುಪತಿ) | " |
| 16 | ಶ್ರೀ ಡಿ ಗೋಪಿನಾಥ್‌ರಾವ್ (ಬಳ್ಳಾರಿ) | " |
| 17 | ಶ್ರೀ ಸಿ ಗೋಪಾಲರೆಡ್ಡಿ<br>(ಕಾರ್ಯದರ್ಶಿಗಳು, ಹಣಕಾಸು) | " |
| 18 | ಶ್ರೀ ಹೆಚ್ ಕೆ ಪಾಟೀಲ್<br>(ಕಮಿಷನರ್, ದತ್ತಿ ಮತ್ತು ಧಾರ್ಮಿಕ ಇಲಾಖೆ) | " |
| 19 | ಡಾ॥ ಆರ್ ಸತ್ಯನಾರಾಯಣ (ಮೈಸೂರು) | " |
| 20 | ಶ್ರೀ ಕೆ ಸಿ ಶಿವಪ್ಪ<br>(ಸಹನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ) | ಕಾರ್ಯದರ್ಶಿ |

ಇವರೆಲ್ಲರಿಗೆ ಸಂಪಾದಕನೂ, ಸಹಾಯಕ ಸಂಪಾದಕರೂ ಕೃತಜ್ಞರಾಗಿದ್ದಾರೆ

# ಪರಿವಿಡಿ

## ಪುರಂದರದಾಸರನ್ನು ಕುರಿತು

### 1

ದಕ್ಷಿಣದೇಶದ ಇತಿಹಾಸದಲ್ಲಿ ವಿಜಯನಗರ ಸಾಮ್ರಾಜ್ಯ ಮೂಡಿ ಕೊಂಡದ್ದು, ಬೆಳೆದು ಬಂದದ್ದು, ಮುಳುಗಿ ಮರೆಯಾದದ್ದು ಪ್ರಮುಖ ಘಟ್ಟಗಳು ಎಲ್ಲ ಸಾಮ್ರಾಜ್ಯಗಳಂತೆ ಈ ಸಾಮ್ರಾಜ್ಯದಲ್ಲಿಯೂ ಅರಸೊತ್ತಿಗೆಗಳ ಏರಾಟವಿದ್ದಿತು, ಅಧಿಕಾರಿಗಳ ಒಳಸಂಚಿದ್ದಿತು, ಕದನದ ಕುತೂಹಲವಿದ್ದಿತು, ದಾಳಿದಂಗೆಗಳ ಬೆದರಿಕೆ ಯಿದ್ದಿತು, ಆಡಳಿತದ ಒಡಕು–ಬಿರುಕುಗಳಿದ್ದುವು ಆದರೆ ಇವೆಲ್ಲ ಮುಖ್ಯವಾದ ವಿವರಗಳೆನಿಸುವುದಿಲ್ಲ ಈ ಸಾಮ್ರಾಜ್ಯದ ಉನ್ನತಿ–ಅವನತಿಗಳು ಜನಜೀವನದ ಮೇಲೆ ಬೀರಿದ ಪ್ರಭಾವ ಮುಖ್ಯವಾದುದು ಹೆಚ್ಚೂ ಕಡಮೆ, ಇಡೀ ದಕ್ಷಿಣ ಭೂಭಾಗವೆಲ್ಲ ಸಾಂಸ್ಕೃತಿಕವೆಂದು ಗುರುತಿಸಬಹುದಾದ ನೆಲೆಯಲ್ಲಿ ಒಂದುಗೂಡಿದುದು ಈ ಸಾಮ್ರಾಜ್ಯದ ಆಸರೆಯಲ್ಲೇ ವಿಜಯನಗರ ಸಾಮ್ರಾಜ್ಯವೇನೋ ಪ್ರಬಲವಾದ, ವ್ಯಾಪಿಯಾದ ರಾಜ್ಯವೇ ಆದರೆ ಅಲ್ಲಲ್ಲಿ ಸಣ್ಣಪುಟ್ಟ ಪಾಳೆಯಪಟ್ಟುಗಳೂ, 'ನಾಯಂಕರ'ಗಳೂ (ನಾಯಕರ ಆಡಳಿತಕ್ಕೆ ಒಳಪಟ್ಟ ಪ್ರದೇಶಗಳು), ಮಂಡಳೇಶ್ವರರ ಸಂಸ್ಥಾನಗಳೂ, ದುರ್ಗಾಧಿಪತಿಗಳ ಬೀಡು ಬತೇರಿಗಳೂ ಇದ್ದವು , ಇವುಗಳ ನಡುವೆ ಹಗರಣಗಳೂ ಇದ್ದುವು ಆದರೂ ಇವನ್ನೆಲ್ಲ ಮೀರಿ ಜನರಲ್ಲಿ ಸಂಸ್ಕೃತಿಯ ಹರವಿಗೆ ನೆರವಾದುದು ಸಾಮ್ರಾಜ್ಯದ ಅರಸರ ವಿಶೇಷಗುಣ ಸಾಹಿತ್ಯ, ಸಂಗೀತ, ಶಿಲ್ಪ, ವಾಸ್ತು, ಚಿತ್ರ, ಕರಕುಶಲಕಲೆ, ಶಾಸ್ತ್ರ, ಶಿಕ್ಷಣ, ಧರ್ಮ, ಆಚಾರ, ವಿಚಾರ ಇವಕ್ಕೆಲ್ಲ ಒಂದು ಗೊತ್ತುಗುರಿ ಒದಗಿಬಂದುದು ಈ ಅರಸರ ಒತ್ತಾಸೆಯಿಂದ , ಇಡೀ ದಕ್ಷಿಣದೇಶದ ಜನರಿಗೆಲ್ಲ ಈ ವಿವರಗಳ ಅನ್ವಯವಾದುದೂ ಅವರ ಹಂಬಲ ದಿಂದಲೇ 'ಮಾರ್ಗೀ' ಸಂಸ್ಕೃತಿಯು 'ದೇಸೀ' ಸಂಸ್ಕೃತಿಯಾದದ್ದು ಈ ಸಾಮ್ರಾಜ್ಯದ ವಿಶಿಷ್ಟಸಾಧನೆ

ಪುರಂದರದಾಸರ ಕಾಲ, ದೇಶಗಳಿಗೂ ವಿಜಯನಗರ ಸಾಮ್ರಾಜ್ಯದ ಉನ್ನತಿ, ಅವನತಿಗಳಿಗೂ ಗಂಟು ಪುರಂದರದಾಸರ ಕಾಲಮಾನ (ಸ್ವಾಮಿಕಣ್ಣುಪಿಳ್ಳೆಯವರ ಗುಣಿತದಂತೆ) 1485 ರಿಂದ 1565 ರ ನಡುವೆ , ಅವರಿದ್ದುದು ಬಹುಮಟ್ಟಿಗೆ

ಹಂಪಿಯಲ್ಲೇ ವಿಜಯನಗರ ಸಾಮ್ರಾಜ್ಯ ಮೈದಳೆದದ್ದು ಮೊದಲನೆಯ ಬುಕ್ಕ ಮಹಾರಾಯನ ಕಾಲದಲ್ಲಿ, ಎಂದರೆ 1355–1377ರ ಸುಮಾರಿಗೆ ದಾಸರು ಹುಟ್ಟುವ ಕಾಲಕ್ಕೇ ಸಾಮ್ರಾಜ್ಯ ಸುಭದ್ರವಾಗಿ ನಿಂತು, ಬೆಳೆಯುತ್ತಿತ್ತು , ಆದರೆ ಅದರ ವೈಭವ ಇನ್ನೂ ಮುಗಿಲು ಮುಟ್ಟಿರಲಿಲ್ಲ ಸಾಳುವ ನರಸಿಂಹದೇವ ಪಟ್ಟಕ್ಕೆ ಬಂದುದೂ, ಪುರಂದರದಾಸರು ಹುಟ್ಟಿದುದೂ ಸುಮಾರು ಒಂದೇ ಕಾಲದಲ್ಲಿ ಸಾಮ್ರಾಜ್ಯದ ಹಿರಿಮೆಯನ್ನು ಗಗನಕ್ಕೇರಿಸಿದ ಕೃಷ್ಣದೇವರಾಯ ಮಹಾರಾಯನು ಪಟ್ಟವನ್ನೇರಿದಾಗ (1509 ರಲ್ಲಿ) ಪುರಂದರದಾಸರು ಹರೆಯವನ್ನು ಮುಟ್ಟಿದ್ದರು ಅವರ ಪ್ರಖ್ಯಾತಿಯೂ ಅರಸನ ಗಮನಕ್ಕೆ ಬಂದಿದ್ದಿತು ಕೃಷ್ಣದೇವರಾಯ ಮಹಾರಾಯನು ಸಾಧಿಸಿದ ಸುವರ್ಣಯುಗದುದ್ದಕ್ಕೂ ದಾಸರು ಬದುಕಿಬಾಳಿದರು ಈ ಅರಸನು 1530ರಲ್ಲಿ ಕಣ್ಣುಮುಚ್ಚಿಕೊಂಡು ವೈಭವದ ಪರ್ವಕ್ಕೆ ತೆರೆ ಸರಿಸಿದಾಗ ದಾಸರು ಮುಪ್ಪಿಗೆ ಸಮ್ಮುಖರಾಗಿದ್ದರು ಮುಂದೆ ಅಚ್ಯುತರಾಯನ ಕಾಲದಿಂದ ಅರವೀಡು ಮನೆತನದ ಅಳಿಯ ರಾಮರಾಯನ ಕಾಲದವರೆಗೆ ಸಾಮ್ರಾಜ್ಯದ ಕಳೆ ಕೆಳಮುಖವಾಗಿ, ಜನಜೀವನದಲ್ಲಿ ನೆಮ್ಮದಿ ತಪ್ಪಿ, ಆಡಳಿತದಲ್ಲಿ ಆತಂಕ ಕಾಡುತ್ತಿದ್ದಾಗ ದಾಸರು ಮುದುಕರು ಅವರು ತೀರಿಕೊಂಡ ವರ್ಷವೇ, ಎಂದರೆ 1565 ರಲ್ಲಿ, ವಿಜಯನಗರ ಸಾಮ್ರಾಜ್ಯವನ್ನು ಮಣ್ಣುಗೂಡಿಸಿದ ರಕ್ಕಸತಂಗಡಿ–ಕದನ (ಮುಸಲ್ಮಾನ ಬರಹಗಾರರ ಮಾತಿನಲ್ಲಿ ತಾಳಿಕೋಟೆ ಕದನ) ನಡೆದುದು !

ಹೀಗೆ ಸಾಮ್ರಾಜ್ಯದ ಉನ್ನತಿ, ಅವನತಿಗಳೆನ್ನು ಕಂಡವರು ಪುರಂದರದಾಸರು ಬಾಳುವೆಯ ಬೆಳಗಿನ ಹೊತ್ತು ಅವರ ಅರಿವಿಗೆ ಬಂದುದು ಆಳರಸರಿಂದ ಊಳಿಗದವರವರೆಗೆ, ನಗರದಿಂದ ಗ್ರಾಮದವರೆಗೆ, ಕೇರಿಕೇರಿಗಳಲ್ಲಿ, ದಿನನಿತ್ಯದ ಬದುಕಿನಲ್ಲಿ ಹರಡಿಕೊಳ್ಳುತ್ತಿದ್ದ ಸಂಸ್ಕೃತಿಯ ಹರವು ಅವರಿಗೆ ಮನದಟ್ಟಾದುದು ಇದರ ಸ್ವಾರಸ್ಯ ನಿತ್ಯಜೀವನದಲ್ಲಿ ನೆಲೆಗೊಂಡಿದ್ದ ನೆಮ್ಮದಿಯನ್ನು ಕೊಚ್ಚಿಕೊಂಡು ಹೋದ ರಾಜಕಾರಣ ವಿಪ್ಲವದ ನೆರೆ ನುಗ್ಗಿ ಬರುವಾಗಲೂ ದಾಸರ ಬಾಳಕತೆಯಿನ್ನೂ ಮುಗಿದಿರಲಿಲ್ಲ , ಬಾಳುವೆಯ ಇಳಿಹೊತ್ತನ್ನು ಮುಟ್ಟಿದ್ದರು ಅಷ್ಟೆ ಅರಸರ ಆಸರೆ ತಪ್ಪಿದ ಸಂಸ್ಕೃತಿಗೆ ತಮ್ಮ ಹರಿದಾಸ್ಯದ ಊರುಗೋಲನ್ನು ಕೊಟ್ಟು ನಿಲ್ಲಿಸುವ ಸಾಹಸದಲ್ಲಿ ತಮ್ಮ ಕಡೆಗಾಲವನ್ನು ಸವೆಸಿದರು ಸುಭದ್ರವಾಗಿ, ವೈಭವದಿಂದ ಮೆರೆದ ಮಹಾಸಾಮ್ರಾಜ್ಯದ ತಳ ಕುಸಿದುಬಿದ್ದುದನ್ನು ಕಣ್ಣಾರೆ ಕಂಡರು ಇಂಥ ಸೌಭಾಗ್ಯದ ಭ್ರಮೆಯನ್ನು ನೆಚ್ಚಬೇಡಿರೆಂದು ಜನರನ್ನು ಎಚ್ಚರಿಸುವ ಕೆಲಸವನ್ನೇ ಕೈಗೊಂಡರು

ವಿಜಯನಗರ ಸಾಮ್ರಾಜ್ಯ ಕಂಗಾಲಾಗಿ, ಅದರ ವೈಭವ ಕಾಡುಪಾಲಾದಮೇಲೆ ಸುಮಾರು ಒಂದುನೂರು ವರ್ಷಗಳು ದಕ್ಷಿಣದೇಶಕ್ಕೆ ಕಷ್ಟದ ಕಾಲವೇ ಸಾಳುವ–ತುಳುವ–ಅಳಿಯ ಅರಸೊತ್ತಿಗೆಗಳು ಮರೆಯಾದುವೆಂದಲ್ಲ , ಇತಿಹಾಸದಲ್ಲಿ ಯಾವ ಅರಸೊತ್ತಿಗೆಗೂ ಉಳಿಗಾಲವಿಲ್ಲ ಆದರೆ ಜನಜೀವನದಲ್ಲಿ ಒದಗಿದ್ದ ನೆಮ್ಮದಿ

ತಪ್ಪಿತು , ವ್ಯಾಪಕವಾಗಿ ಹರಡಿಕೊಳ್ಳುತ್ತಿದ್ದ ಸಂಸ್ಕೃತಿಗೆ ತೊಡರುಗಳು ಒದಗಿ ಬಂದುವು ಆಡಳಿತದಲ್ಲಿ ಅವ್ಯವಸ್ಥೆ, ಆರ್ಥಿಕವಾಗಿ ಅತಂತ್ರ, ಧರ್ಮದಲ್ಲಿ ಗೊಂದಲ, ವ್ಯವಹಾರದಲ್ಲಿ ಅನೀತಿ ಇವೆಲ್ಲವನ್ನೂ ದಾಸರು ಸಾಮ್ರಾಜ್ಯದ ಅವನತಿಯ ದಿನ ಗಳಲ್ಲೇ ಕಂಡಿದ್ದರು ಈಗಂತೂ ಅದು ದಡ ಕುಸಿದ ನದಿಯ ಪ್ರವಾಹದಂತೆ ಹುಚ್ಚೆದ್ದು ಹರಿಯತೊಡಗಿತು ಸಾಮ್ರಾಜ್ಯದ ವೈಭವ ಮಣ್ಣುಪಾಲಾದಾಗಲೇ ದಾಸರ ಸೇವೆಯೂ ಕಣ್ಮರೆಯಾಯಿತು ಸಾಮ್ರಾಜ್ಯದ ಉತ್ತರಾದಿಕಾರಿಗಳಾದ ಅರಸರೇನೋ ತಲೆತಪ್ಪಿಸಿಕೊಂಡು ದೂರ ದೂರ ಓಡಿ ಉಳಿದುಕೊಂಡರು ದಾಸರ ಸೇವೆಯ ಉತ್ತರಾಧಿಕಾರಿಗಳು ಏನಾದರೋ, ಎಲ್ಲಿ ಹೋದರೋ ತಿಳಿಯದು

ಪುರಂದರದಾಸರ ಹೆಸರು ಮೊಟ್ಟಮೊದಲಿಗೆ ನಮ್ಮ ಗಮನಕ್ಕೆ ಬರುವುದು ಬಳ್ಳಾರಿ ಜಿಲ್ಲೆಯ ಕಮಲಾಪುರದ (ಕಂಪಲಿಯ) ತಾಮ್ರ ಶಾಸನದಲ್ಲಿ ಪಾಂಡು ರಂಗರಾವ್ ದೇಸಾಯಿಯವರಿಂದ ಪತ್ತೆಯಾದ ಈ ಶಾಸನ ಎಪಿಗ್ರಾಫಿಯ ಇಂಡಿಕ ದಲ್ಲಿ (ಸಂ 21, ಪುಟಗಳು 139 ಮುಂದೆ) ಪ್ರಕಟವಾಗಿದೆ ಈ ಶಾಸನ ಹೊರಟಿದ್ದು ಶಾಲಿವಾಹನ ಶಕ 1447 ಪಾರ್ಥಿವ ಸಂವತ್ಸರದ ಫಾಲ್ಗುಣಮಾಸದ ಶುದ್ಧ ದ್ವಾದಶಿಯಂದು, ಎಂದರೆ 1526ರ ಫೆಬ್ರವರಿ 24ರಂದು ಪುರಂದರದಾಸರು ಬದುಕಿ ದ್ದಾಗಲೇ ಹೊರಟ ಶಾಸನ ಇದು ಆಗ ವಿಜಯನಗರದ ಅರಸನಾಗಿದ್ದ ಕೃಷ್ಣ ದೇವರಾಯನು ತುಂಗಭದ್ರಾ ತೀರದ ಹಂಪಿಯ ವಿಟ್ಠಲೇಶ್ವರ ಸನ್ನಿಧಿಯಲ್ಲಿ ರಾಜ ಗುರುಗಳಾಗಿದ್ದ ವ್ಯಾಸತೀರ್ಥರಿಗೆ (ಎಂದರೆ ಪುರಂದರದಾಸರ ದೀಕ್ಷಾಗುರುಗಳಿಗೆ) 'ವ್ಯಾಸಸಮುದ್ರ' ಎಂಬ ನಾಮಾಂಕಿತದ ಬೆಟ್ಟಕೊಂಡಗ್ರಾಮವನ್ನು ಸರ್ವಮಾನ್ಯ ಏಕಭೋಗ್ಯ ದತ್ತಿಯನ್ನಾಗಿ ಕೊಟ್ಟಿದ್ದನು ಈ ದತ್ತಿಯನ್ನು ಪಡೆದುಕೊಂಡ ವ್ಯಾಸ ತೀರ್ಥರು ಅದನ್ನು ಮುನ್ನೂರ ಎಂಟು ವಿದ್ವಾಂಸರಿಗೆ ವೃತ್ತಿಗಳನ್ನಾಗಿ (ವಿದ್ಯಾದಾನ) ಹಂಚಿಕೊಟ್ಟಿದ್ದನ್ನು ಈ ಶಾಸನ ತಿಳಿಸುತ್ತದೆ ಹೀಗೆ ವ್ಯಾಸತೀರ್ಥರಿಂದ ವೃತ್ತಿ ಗಳನ್ನು ಪಡೆದುಕೊಂಡ ವಿದ್ವಾಂಸರಲ್ಲಿ "ಶ್ರೀ ಪುರಂದರದಾಸಜ"ರಾದ (ಎಂದರೆ ಪುರಂದರದಾಸರ ಮಕ್ಕಳಾದ) ಮೂವರ ಹೆಸರುಗಳಿವೆ ಲಕ್ಷ್ಮಣದಾಸ (175), ಹೇಬ(ವ)ಣದಾಸ (291) ಮತ್ತು ಮಧ್ವಪದಾಸ (292) ಇವರು ಮೂವರನ್ನೂ ವಸಿಷ್ಠಗೋತ್ರದವರೆಂದೂ ಯಾಜುಷಶಾಖೆಯವರೆಂದೂ ವಿದ್ವಾಂಸರೆಂದೂ ಶಾಸನ ಒಕ್ಕಣಿಸುತ್ತದೆ ಪುರಂದರದಾಸರು ಬದುಕಿದ್ದರೂ, ವ್ಯಾಸತೀರ್ಥರಿಂದ ಆ ವೇಳೆ ಗಾಗಲೆ ಹರಿದಾಸ ದೀಕ್ಷೆಯನ್ನು ತಳೆದಿದ್ದರೂ (ಶಾಸನದಲ್ಲಿ "ಶ್ರೀ ಪುರಂದರದಾಸಜ" ರೆಂದೇ ಪದವಿದ), ಪ್ರಖ್ಯಾತರಾಗಿದ್ದರೂ ಅವರಿಗೆ ವೃತ್ತಿಯನ್ನೇನೂ ಒದಗಿಸಿಲ್ಲ , ಅವರು ತೀರ ವಿರಕ್ತರಾಗಿದ್ದರೆಂದು ತೋರುತ್ತದೆ ಅವರ ಮೂವರು ಮಕ್ಕಳನ್ನೂ ದಾಸರೆಂದೇ ವಿಶೇಷಣ ಹಚ್ಚಿ ಕರೆದಿರುವುದರಿಂದ ಅವರಿಗೂ ಹರಿದಾಸದೀಕ್ಷೆ ಆಗಲೇ ಒದಗಿದ್ದಿರಬೇಕು ಈ ಶಾಸನವನ್ನು ಬಿಟ್ಟರೆ ಪುರಂದರದಾಸರನ್ನು ಉಲ್ಲೇಖಿಸುವ ಮತ್ತೊಂದು ಶಾಸನ ದೊರೆಯುವುದಿಲ್ಲ ಈ ಶಾಸನವೂ ಅವರ ಕಾಲನಿರ್ಣಯಕ್ಕೆ

ನೆರವಾಗುತ್ತದೆ ಅಷ್ಟೆ , ಮತ್ತೇನು ಅದರಿಂದ ಬೆಳಕು ದೊರೆಯಲಾರದು ಕೃಷ್ಣ ದೇವರಾಯನು ಆಳುತ್ತಿದ್ದಾಗ (1509–1530) ಪುರಂದರದಾಸರ ಮೂವರು ಮಕ್ಕಳು ಹಂಪಿಯಲ್ಲೇ ಇರುತ್ತಿದ್ದು ವೃತ್ತಿದಾನಕ್ಕೆ ಯೋಗ್ಯತೆಯನ್ನು ಪಡೆದು ಕೊಂಡಿದ್ದರೆಂಬುದು ಶಾಸನದಿಂದ ಸ್ಪಷ್ಟವಾಗುವ ವಿವರ ಈ ವಯಸ್ಸಿನ ಮೂವರು ಮಕ್ಕಳ ತಂದೆಯಾದ ಪುರಂದರದಾಸರು ಆ ವೇಳೆಗೆ ನಡುವಯಸ್ಸಿನವರಾದರೂ ಆಗಿರಬೇಕು , ಆ ವೇಳೆಗೆ ಬಹುಶಃ ಹಂಪಿಯಲ್ಲಿರದೆ, ಕ್ಷೇತ್ರ ಪರ್ಯಟನ ಮಾಡು ತ್ತಿದ್ದಿರಬಹುದು ವ್ಯಾಸತೀರ್ಥರಿಂದಲೇ ಪುರಂದರದಾಸರ ಮಕ್ಕಳಿಗೂ ದಾಸದೀಕ್ಷೆ ದೊರಕಿರಬಹುದು

ಇತಿಹಾಸದ ಎಳೆಗಳಲ್ಲಿ ಪುರಂದರದಾಸರ ಪ್ರಸ್ತಾಪವನ್ನು ಎರಡನೆಯ ಬಾರಿ ನಾವು ಕಾಣುವುದು, ಅವರ ಕಾಲದಲ್ಲೇ ಬದುಕಿದ್ದ ತೆಲುಗು ಕವಿ ತಾಳ್ಲಪಾಕಂ ಚಿನ್ನ ತಿರುವೇಂಗಳನಾಥನು ತನ್ನ ಅಜ್ಜ ಅಣ್ಣಮಾಚಾರ್ಯರನ್ನು ಕುರಿತು ಬರೆದ ದ್ವಿಪದ ಪ್ರಬಂಧವೊಂದರಲ್ಲಿ ಇಲ್ಲಿ ಬರುವ ಒಕ್ಕಣೆಯಂತೆ, ತಿರುಮಲೆ–ತಿರುಪತಿಯ ದೇವಾಲಯದಲ್ಲಿ ಪುರಂದರದಾಸರು ಅಣ್ಣಮಾಚಾರ್ಯರನ್ನು ಕಂಡು ಮಾತುಕತೆ ನಡೆಸಿದರು ತಾಳ್ಲಪಾಕಂ ಅಣ್ಣಮಾಚಾರ್ಯರು (1408–1507) ತಿರುಮಲೆಯ ವೇಂಕಟೇಶ್ವರನ ಗುಡಿಯಲ್ಲಿ ಸಂಕೀರ್ತನಸೇವೆ ಮಾಡಿಕೊಂಡು ಇರುತ್ತಿದ್ದವರು ವೇಂಕಟೇಶ್ವರನ ಅಂಕಿತದಲ್ಲೇ ಸಾವಿರಾರು ಕೃತಿಗಳನ್ನು ರಚಿಸಿದರು ಮುಂದೆ ಅವರ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು ಎಲ್ಲರೂ ಇದೇ ಸೇವೆಯನ್ನು ಮುಂದುವರಿಸಿಕೊಂಡು ಬಂದರು , ಸ್ವತಃ ಕವಿಗಳಾಗಿ ಕೃತಿಗಳನ್ನೂ ರಚಿಸಿದರು ಅಣ್ಣಮಾಚಾರ್ಯರ ಮಗ ಪೆದತಿರುಮಲಾಚಾರ್ಯ ಎಂಬುವರ ನಾಲ್ಕನೆಯ ಮಗನೇ ಮೇಲೆ ಹೇಳಿದ ಚಿನ್ನತಿರುವೇಂಗಳನಾಥ (ಚಿನ್ನನ್ನ) ಇವನು ಹುಟ್ಟಿದ ವರ್ಷ 1498 ಎಂದು ತಿಳಿದುಬರುತ್ತದೆ ಇವನಿಗೆ ಬ್ರಹ್ಮೋಪದೇಶವನ್ನೂ, ಮೊದಲ ಸಂಸ್ಕೃತ ಶಿಕ್ಷಣವನ್ನೂ, ಅಜ್ಜ ಅಣ್ಣಮಾಚಾರ್ಯರೇ ಒದಗಿಸಿದರೆಂದು ಹೇಳಿ ಕೊಂಡಿದ್ದಾನೆ ತನ್ನ ಅಜ್ಜನನ್ನು ಕುರಿತು ತೆಲುಗಿನಲ್ಲಿ ನಾಲ್ಕು ದ್ವಿಪದಪ್ರಬಂಧ ಗಳನ್ನು ರಚಿಸಿದ್ದಾನೆ ಅವುಗಳಲ್ಲಿ ಒಂದು ಪ್ರಬಂಧ ತನ್ನ ಅಜ್ಜ ಅಣ್ಣಮಾ ಚಾರ್ಯರಿಗೂ ಹರಿದಾಸರಾದ ಪುರಂದರದಾಸರಿಗೂ ನಡೆದ ಭೇಟಿಯನ್ನು ಉಲ್ಲೇಖಿ ಸಿದೆ ತಿರುಮಲೆಗೆ ಮತ್ತೆ ಮತ್ತೆ ಬರುತ್ತಿದ್ದ ಪುರಂದರದಾಸರು ಒಮ್ಮೆ ಬಂದಾಗ ಅಲ್ಲಿ ಹಣ್ಣುಹಣ್ಣು ಮುದುಕರಾಗಿದ್ದ ಅಣ್ಣಮಾಚಾರ್ಯರನ್ನು ಕಂಡರಂತೆ ಅಣ್ಣಮಾ ಚಾರ್ಯರು ದೇವರೆದುರು ನಿಂತು ಮಾಡಿದ ಸಂಕೀರ್ತನ ಸೇವೆಯನ್ನು ತುಂಬ ಮೆಚ್ಚಿಕೊಂಡು "ಸಾಕ್ಷಾತ್ ವೇಂಕಟೇಶ್ವರನನ್ನೇ ಕಂಡಂತಾಯಿತು" ಎಂದು ಹೇಳಿದ ರಂತೆ ಅನಂತರ, ಅಣ್ಣಮಾಚಾರ್ಯರ ಅಪೇಕ್ಷೆಯಂತೆ ಅವರು ತಮ್ಮ ಕನ್ನಡ ದೇವರ ನಾಮಗಳನ್ನು ಹಾಡಿದಾಗ, ಅಣ್ಣಮಾಚಾರ್ಯರು "ದಿವ್ಯವಾದ ಗಾನ, ಪಾಂಡುರಂಗ ವಿಠಲನೇ ಎದುರಿಗೆ ನಿಂತಂತಿದೆ" ಎಂದು ಹೇಳಿದರಂತೆ

ತಾಳ್ಲಪಾಕಂ ಅಣ್ಣಮಾಚಾರ್ಯರೇನೋ ದೀರ್ಘಜೀವಿ ತಮ್ಮ ಹದಿನಾರನೆಯ ವಯಸ್ಸಿನಲ್ಲಿ ಭಗವಂತನ ಸಾಕ್ಷಾತ್ಕಾರವಾಗಿ ಮುಂದೆ ಎಂಬತ್ತು ವರ್ಷಗಳು ತಿರುಮಲೆಯ ವೇಂಕಟೇಶ್ವರನ ಸನ್ನಿಧಿಯಲ್ಲೇ ನಿಂತು ಸಂಕೀರ್ತನಸೇವೆ ನಡೆಸಿದರೆಂದು ಉಲ್ಲೇಖವಿದೆ ತೀರಿಕೊಂಡಾಗ ಅವರಿಗೆ ತೊಂಬತ್ತೊಂಬತ್ತು ವರ್ಷಗಳು ದೇವಾಲಯದಲ್ಲಿ ಸಂಕೀರ್ತನ ಭಂಡಾರವೊಂದು ಅವರಿಗಾಗಿಯೇ ಸಿದ್ಧವಾಯಿತು, ಅದರ ತಲೆಬಾಗಿಲ ಮೇಲೆ ಅಣ್ಣಮಾಚಾರ್ಯರ ಶಿಲಾ ಪ್ರತಿಕೃತಿಯನ್ನು ಇರಿಸಿದರು ಆ ಕಾಲಕ್ಕೆ, ವಿಜಯನಗರದ ಅರಸರು ಆದರದಿಂದ ನಡೆದುಕೊಳ್ಳುತ್ತಿದ್ದ ದೇವರೆಂದರೆ ತಿರುಮಲೆಯ ವೇಂಕಟೇಶ್ವರ , ದೇವಾಲಯದ ಸಂಪತ್ತಿಗೂ, ವೈಭವಕ್ಕೂ, ಪ್ರಸಿದ್ಧಿಗೂ ಕಾರಣರಾದವರೇ ಅವರು ಅದರಲ್ಲೂ, ಕೃಷ್ಣದೇವರಾಯ ಮಹಾರಾಯನಂತೂ ತನ್ನ ಬಿಡುವಿಲ್ಲದ ಕೆಲಸದಲ್ಲೂ ಅಡಿಗಡಿಗೆ ಬೆಟ್ಟದ ಮೇಲೆ ಬಂದು ದೇವರಿಗೆ ಸೇವೆ ಸಲ್ಲಿಸುತ್ತಿದ್ದ ಬಗೆಗೆ ಶಾಸನಗಳೇ ಇವೆ ವಿಜಯನಗರ ಸಾಮ್ರಾಜ್ಯದ ಸಂಬಂಧವಿದ್ದವರಿಗೆಲ್ಲ ತಿರುಮಲೆ–ತಿರುಪತಿ ಮಿಗಿಲಿಲ್ಲದ ಕ್ಷೇತ್ರ ಪುರಂದರದಾಸರೂ ಇಲ್ಲಿಗೆ ಅಡಿಗಡಿಗೆ ಬರುತ್ತಿದ್ದವರೇ , ಅವರ ದೇವರ ನಾಮಗಳಲ್ಲಿ ವೇಂಕಟೇಶ್ವರನನ್ನು ಕುರಿತವು ಹೇರಳವಾಗಿವೆ ಆದರೆ ಅಣ್ಣಮಾಚಾರ್ಯರೂ ಅವರ ವಂಶದವರೂ (ನಾಲ್ಕು ತಲೆಮಾರುಗಳು) ದೇವಾಲಯದ ಊಳಿಗದಲ್ಲೇ ನೆಲೆನಿಂತರಾಗಿ ಅವರ ರಚನೆಗಳೆಲ್ಲ ಉಳಿದುಕೊಂಡು ಬಂದುವು , ಅದಕ್ಕಾಗಿ ಸಂಕೀರ್ತನ ಭಂಡಾರವೇ ಒಂದು ಇದ್ದಿತಷ್ಟೆ ಪುರಂದರದಾಸರು ಗೊಂದಲದ ಹಂಪಿಯಲ್ಲೇ ಬಹುಕಾಲ ಇದ್ದರಾಗಿ, ರಕ್ಕಸತಂಗಡಿಯ ಕದನದಲ್ಲಿ ಹಂಪಿ ನಿರ್ನಾಮವಾದಾಗ ಅವರ ರಚನೆಗಳೆಲ್ಲ ಬಹುಮಟ್ಟಿಗೆ ನಾಶವಾದುವೆಂದು ತೋರುತ್ತದೆ

## 2

ಪುರಂದರದಾಸರ ಸೊಲ್ಲು ಮತ್ತೆ ನಮ್ಮ ಕಿವಿಗೆ ಬೀಳುವುದು ಅವರು ತೀರಿಕೊಂಡು ನೂರು ವರ್ಷಗಳು ಕಳೆದಮೇಲೇ, ಎರಡು ಆಕರಗಳಿಂದ ಒಂದು ಬಾಗಲಕೋಟೆಯ ಹತ್ತಿರ ಕಾಖಂಡಿ ಎಂಬ ಗ್ರಾಮದ ಹರಿದಾಸರೂ ಕವಿಗಳೂ ಆಗಿದ್ದ ಪ್ರಸನ್ನ ವೇಂಕಟದಾಸರು (ತೀರಿಕೊಂಡ ವರ್ಷ 1674) , ಇನ್ನೊಂದು ಅವರಿಗಿಂತ ಹೆಸರಾದ ವಿಜಯದಾಸರು (1687–1755) ಇವರ ಪದಗಳಲ್ಲಿ ಬರುವ ಉಲ್ಲೇಖಗಳಿಂದ ಪ್ರಸನ್ನ ವೇಂಕಟದಾಸರ 'ತಂದೆ ಪುರಂದರದಾಸರ ಸ್ಮರಿಸುವೆ' ಎಂಬ ಪದದಲ್ಲಿ ಪುರಂದರದಾಸರ ವ್ಯಕ್ತಿತ್ವ ಮತ್ತು ವಾಙ್ಮಯ ಎರಡರ ಉಲ್ಲೇಖವೂ ಇದೆ ಆದರೆ ಪುರಂದರದಾಸರ ಹೆಸರು ಉಳಿದದ್ದು, ಬೆಳೆದದ್ದು ವಿಜಯದಾಸರ ಉಲ್ಲೇಖದಿಂದಲೇ ರಾಯಚೂರು ಜಿಲ್ಲೆಯ ಮಾನ್ವಿ ಹತ್ತಿರ ಚೀಕಲಪರವಿ ಎಂಬುದೊಂದು ಹಳ್ಳಿ ಅಲ್ಲಿಯ ದಾಸಪ್ಪ ಎಂಬ ಗೃಹಸ್ಥ ಉತ್ತರ ಭಾರತಕ್ಕೆ ಯಾತ್ರೆ ಹೊರಟು

ಕಾಶಿಗೆ ಬಂದು ಗಂಗೆಯನ್ನು ದಾಟಿ ವ್ಯಾಸಕಾಶಿಯಲ್ಲಿ ತಂಗಿದ್ದಾಗ ಇರುಳು ಕನಸಿನಲ್ಲಿ ಆತನಿಗೆ ಪುರಂದರದಾಸರು ಕಾಣಿಸಿಕೊಂಡು ಹರಿದಾಸ ದೀಕ್ಷೆಯನ್ನೂ 'ವಿಜಯವಿಠಲ' ನೆಂಬ ಅಂಕಿತವನ್ನೂ ನೀಡಿ ಮರೆಯಾದರಂತೆ ಈ ಪ್ರಸಂಗದಿಂದಾಗಿ ಏನೇನೂ ಅರಿಯದ ದಾಸಪ್ಪ ಎಲ್ಲ ಬಲ್ಲವನಾದ ವಿಜಯದಾಸನಾದ ಮುಂದೆ ವಿಜಯದಾಸರು ಕನ್ನಡನಾಡಿನಲ್ಲಿ ಸುಪ್ರಸಿದ್ಧ ಹರಿದಾಸರಾದರು , ಇಪ್ಪತ್ತೈದು ಸಾವಿರ ಕೃತಿಗಳನ್ನು ರಚಿಸಿದರೆಂದು ಪ್ರತೀತಿ , ದೇಶದಲ್ಲೆಲ್ಲ ತಿರುಗಾಡಿ ಭಾಗವತಧರ್ಮವನ್ನು ಹರಡಿದರು ಅವರ ಶಿಷ್ಯರಾದ ಗೋಪಾಲದಾಸರು, ಮೋಹನದಾಸರು ಮತ್ತು ಜಗನ್ನಾಥದಾಸರಿಂದ ಹರಿದಾಸ ಪಂಥ ಇನ್ನಷ್ಟು ಊರ್ಜಿತವಾಯಿತು ಇಲ್ಲಿ ನಮಗೆ ಪ್ರಸಕ್ತವಾದ ವಿಚಾರ ವಿಜಯದಾಸರಿಗೆ ಹರಿದಾಸ ದೀಕ್ಷೆ ಪುರಂದರದಾಸರಿಂದಲೇ ದೊರಕಿತೆನ್ನುವುದು ಪುರಂದರದಾಸರ ಸಾಹಿತ್ಯವನ್ನು ಉಳಿಸಿದವರು, ಪುರಂದರದಾಸರ ವಿಚಾರವಾಗಿ ಈಗ ಪ್ರಚಲಿತವಾಗಿರುವ ಎಲ್ಲ ವಿವರಗಳಿಗೆ, ಪ್ರಸಂಗಗಳಿಗೆ, ಕತೆಗಳಿಗೆ ಮುಖ್ಯ ಆಕರವಾದವರು ಇವರೇ ಪುರಂದರದಾಸರನ್ನು ಕುರಿತು ಇಪ್ಪತ್ತಕ್ಕೂ ಮಿಾರಿ ಅವರ ಪದಗಳಿವೆ

ಪುರಂದರದಾಸರು ವಿಜಯದಾಸರ ಕನಸಿನಲ್ಲಿ ಕಾಣಿಸಿಕೊಂಡರೆಂದಮಾತ್ರಕ್ಕೆ ಪುರಂದರದಾಸರು ಕೇವಲ ಕಾಲ್ಪನಿಕವ್ಯಕ್ತಿ ಎಂದು ಯಾರೂ ಬಗೆಯಲಾರರು ಅವರ ಐತಿಹಾಸಕತೆ ಬೇರೆ ಆಕರಗಳಿಂದ ಸಿದ್ಧವಾಗುತ್ತದೆ ಆದರೆ ಪುರಂದರದಾಸರು ತೀರಿಕೊಂಡದ್ದು 1564ರಲ್ಲಿ ಅದವಾ 1565ರಲ್ಲಿ , ವಿಜಯದಾಸರು ಹುಟ್ಟಿದ್ದೇ 1687ರಲ್ಲಿ ಎರಡೂ ಪ್ರಸಂಗಗಳ ನಡುವೆ ಒಂದು ನೂರು ಮತ್ತೆ ಇಪ್ಪತ್ತು ವರ್ಷಗಳಿಗೂ ಮಿಾರಿ ಅಂತರವಿದೆ ಈ ಅಂತರದಲ್ಲಿ ಪುರಂದರದಾಸರ ಪ್ರಖ್ಯಾತಿ, ಅವರ ಸಾಹಿತ್ಯ ಉಳಿದಿದ್ದವೆ ? ಹಾಗೆ ಹೇಳಲು ಬೇರೆ ಪುರಾವೆಗಳೇನೂ ದೊರಕುವುದಿಲ್ಲ, ದಿಟ ಆದರೆ ಹಾಗೆ ಹೇಳದೆ ವಿಧಿಯಿಲ್ಲ ಕಣ್ಮರೆಯಾಗಿದ್ದ ಪುರಂದರ ಸಾಹಿತ್ಯವನ್ನೆಲ್ಲ ಮತ್ತೆ ಪಡೆದುಕೊಂಡದ್ದಕ್ಕೆ ಲೆಕ್ಕವಿಲ್ಲದಷ್ಟು ಇತರ ಕನಸುಗಳನ್ನೂ ಕಲ್ಪಿಸಿಕೊಳ್ಳಬೇಕಾದೀತು ! ಹಂಪಿ ಹಾಳಾದರೇನು, ಅಲ್ಲಿ ಬೆಳೆದ ಹರಿದಾಸ ಪಂಥವೂ ಹೇಳಹೆಸರಿಲ್ಲದೆ ಹೋಯಿತೆ ? ಹರಿದಾಸರು ದೂರ ದೂರ ಚೆಲ್ಲಾಪಿಲ್ಲಿಯಾಗಿ ಸರಿದರು, ಅಲ್ಲಲ್ಲಿ ತಮ್ಮ ದೀಕ್ಷೆಯನ್ನು ನಡೆಸಿಕೊಂಡು ಬಂದರು , ಇದರ ಅಂಗವಾಗಿ ಪುರಂದರದಾಸರ ಸಾಹಿತ್ಯವನ್ನೂ ತಮಗೆ ಶಕ್ಯವಿದ್ದಷ್ಟು ಉಳಿಸಿಕೊಂಡರು ಚೀಕಲಪರಿವೆಯ ದಾಸಪ್ಪನಿಗೆ ಪುರಂದರದಾಸರು ಕನಸಿನಲ್ಲಿ ಕಾಣಿಸಿಕೊಂಡದ್ದು ಹರಿದಾಸದೀಕ್ಷೆಯನ್ನು ಕೊಡಲೆಂದು ಅಷ್ಟೆ ಅದಕ್ಕೆ ಮುಂಚೆ ಆತನಿಗೆ ಪುರಂದರದಾಸರ ವಿಚಾರವೇ ತಿಳಿದಿರಲಿಲ್ಲ ಎಂದಾಗಲೀ, ಹರಿದಾಸಪಂಥದ ಕ್ರಮ ಆತನಿಗೆ ಪರಿಚಯವಿರಲಿಲ್ಲ ಎಂದಾಗಲೀ ಹೇಳಲಾಗದು ಪುರಂದರದಾಸರ ಸಾಹಿತ್ಯಕ್ಕೆ ಅಷ್ಟು ಪ್ರಚಾರ ಸಿಕ್ಕಿರಲಿಲ್ಲವೆಂದರೆ ತಡೆದೀತು . ವಿಜಯದಾಸರ ಪ್ರತಿಭೆಯಿಂದ, ಪ್ರಭಾವದಿಂದ ಪುರಂದರದಾಸರ ಭಾಗ್ಯವೂ ಬದಲಾಯಿಸಿತು ಎಂದರೂ ತಪ್ಪಲ್ಲ

ಮುಂದೆ ವಿಜಯದಾಸರೆಂದಾದ ದಾಸಪ್ಪನೂ ಹರಿದಾಸ ಮನೆತನಕ್ಕೇ ಸೇರಿದ್ದಿರ ಬಹುದು, ಎಳೆತನದಿಂದ ಪುರಂದರದಾಸರ ಕೃತಿಗಳ ಪರಿಚಯವನ್ನು ಪಡೆದಿದ್ದಿರ ಬಹುದು, ಪುರಂದರದಾಸರ ವಿಚಾರವಾಗಿ ತುಂಬ ಆದರವನ್ನೂ ತಳೆದಿದ್ದಿರಬಹುದು ಅನಂತರ ಶ್ರಮ ವಹಿಸಿ ಹರಿದು ಹಂಚಿಹೋಗಿದ್ದ ಪುರಂದರ ಕೃತಿಗಳನ್ನೆಲ್ಲ ತಮಗೆ ಸಾಧ್ಯವಾದಷ್ಟು ಸಂಗ್ರಹಿಸಿ ತಮ್ಮ ಶಿಷ್ಯಕೋಟಿಯಲ್ಲಿ ಅದನ್ನು ಹೆಚ್ಚು ಪ್ರಚಾರಕ್ಕೆ ತಂದಿರಬಹುದು

ತಮಿಳುಭಾಷೆಯಲ್ಲಿ ವೈಷ್ಣವ ಸಾಹಿತ್ಯಕ್ಕೆ ಸಂಬಂಧಪಟ್ಟಂತೆ ಇದೇ ಬಗೆಯ ಪ್ರಸಂಗವೊಂದು ನಡೆದುದನ್ನು ನೆನಪಿಗೆ ತಂದುಕೊಳ್ಳಬಹುದು ಅದು ನಮ್ಮಾಳ್ವಾರರ 'ತಿರುವಾಯ್‌ಮೊಳಿ' ಎಂಬ ಪಾಶುರ ಸಂಗ್ರಹವನ್ನು ಕುರಿತದ್ದು ಕ್ರಿಸ್ತಾಬ್ದ ಮೊದಲ ಶತಮಾನಗಳಲ್ಲಿ ಬದುಕಿ ಬಾಳಿದ ಹತ್ತು ಮಂದಿ ಆಳ್ವಾರರು ಹಾಡಿದ ಕವಿತೆ ಗಳನ್ನೆಲ್ಲ ಸೇರಿಸಿ 'ನಾಲ್ಕು ಸಾವಿರ ಪ್ರಬಂಧಗಳು' (ನಾಲಾಯಿರ ಪ್ರಬಂದಂ) ಎಂದು ಕರೆಯುವ ವಾಡಿಕೆಯಿದೆ ಈ ಸಂಗ್ರಹದಲ್ಲಿ ಕಡೆಯ ಆಳ್ವಾರರು, ನಮ್ಮಾಳ್ವಾರೆಂದು ಹೆಸರಾದವರು, ರಚಿಸಿದ ಪ್ರಬಂಧಗಳು 'ತಿರುವಾಯ್ ಮೊಳಿ' ("ಸಿರಿಬಾಯನುಡಿ") ಎಂದು ತುಂಬ ಪ್ರಚಲಿತವಾಗಿವೆ ಆದರೆ ಒಂಬತ್ತನೆಯ ಶತಮಾನದಲ್ಲಿದ್ದ ವೈಷ್ಣವ ಆಚಾರ್ಯರಾದ ನಾಥಮುನಿಗಳ ಕಾಲಕ್ಕೆ ಈ ಪ್ರಬಂದಗಳೆಲ್ಲವೂ ಕಣ್ಮರೆಯಾಗಿದ್ದವು ನಾಥಮುನಿಗಳು ತೀರ್ಥಯಾತ್ರೆ ಮಾಡುತ್ತ ಈಗಿನ ದಕ್ಷಿಣ ಆರ್ಕಾಡು ಜಿಲ್ಲೆಯಲ್ಲಿರುವ ವೀರನಾರಾಯಣಪುರವೆಂಬ ಕ್ಷೇತ್ರಕ್ಕೆ ಬಂದಾಗ, ಅಲ್ಲಿನ ಗುಡಿಯಲ್ಲಿ ನೆರೆದಿದ್ದ ಪರ ವೂರಿನ ಕೆಲವರು ಯಾತ್ರಿಕರು ದೇವರೆದುರು ಕೆಲವು ತಮಿಳು ಹಾಡುಗಳನ್ನು ಹಾಡಿ ಸೇವೆ ಸಲ್ಲಿಸುತ್ತಿದ್ದರು ನಾಥಮುನಿಗಳು ಅವರು ಹಾಡಿದ 'ಆರಾವಮುದೇ ಅಡಿಯೇ ನುಡಲಂ ನಿನ್ ಪಾಲನ್ಬಾಯೇ ' ಎಂದು ಮೊದಲಾಗುವ ಒಂದು ಹಾಡನ್ನು ಕೇಳಿ, ಅದರ ಸೊಗಸನ್ನು ಮೆಚ್ಚಿಕೊಂಡರು ಅದೇ ಕವಿಯ ಇನ್ನು ಕೆಲವು ಹಾಡುಗಳನ್ನು ಹಾಡುವಂತೆ ಆ ಯಾತ್ರಿಕರನ್ನು ಕೇಳಿಕೊಂಡರು ಯಾತ್ರಿಕರಾದರೋ ತಮಗೆ ತಿಳಿಯದೆಂದೂ, ಈ ಒಂದು ಹಾಡನ್ನು ತಾವು ತಿರುಕ್ಕುಡಂದ್ಯೆ (ಎಂದರೆ ಈಗಿನ ಕುಂಭಘೋಣಂ) ಕ್ಷೇತ್ರದ ಗುಡಿಯಲ್ಲಿ ಹಾಡುತ್ತಿದ್ದುದನ್ನು ಕೇಳಿ ಕಲಿತರೆಂದೂ ತಿಳಿಸಿದರು ನಾಥಮುನಿಗಳು ಒಡನೆಯೇ ತಿರುಕ್ಕುಡಂದ್ಯೆಗೆ ತೆರಳಿ ಅಲ್ಲಿನ ಗುಡಿ ಯಲ್ಲಿ ವಿಚಾರಿಸಲಾಗಿ ಅಲ್ಲಿ ನಮ್ಮಾಳ್ವಾರರ ಹತ್ತು ಪಾಶುರಗಳು ಬಳಕೆಯಲ್ಲಿದ್ದುದು ತಿಳಿದುಬಂದಿತು ಈ ಹತ್ತು ಪಾಶುರಗಳನ್ನು ನಾಥಮುನಿಗಳು ಸಂಗ್ರಹಿಸಿದುದೇ 'ನಾಲ್ಕು ಸಾವಿರ ಪ್ರಬಂಧ'ಗಳನ್ನು ಮುಂದೆ ಪತ್ತೆಹಚ್ಚುವುದಕ್ಕೆ ಮೊದಲ ಹೆಜ್ಜೆ ಯಾಯಿತು ಆ ಗುಡಿಯಲ್ಲಿ ವಿಚಾರಿಸಿದಾಗ ನಾಥಮುನಿಗಳಿಗೆ ತಿರುಕ್ಕುರುಗೂರಿನಲ್ಲಿ (ಎಂದರೆ ಈಗಿನ ಆಳ್ವಾರ್ ತಿರುನಗರಿಯಲ್ಲಿ) ಹೆಚ್ಚು ಪಾಶುರಗಳ ಬಳಕೆಯಿರುವು ದಾಗಿ ತಿಳಿಯಿತು , ಅವರು ತಿರುಕ್ಕುರುಗೂರಿಗೆ ಹೋಗಿ ಅಲ್ಲಿ ನಮ್ಮಾಳ್ವಾರರ ಇಡೀ

'ತಿರುವಾಯ್‌ಮೊಳಿ'ಯನ್ನು (ಒಂದು ಸಾವಿರ, ನೂರೆರಡು ಪದ್ಯಗಳು) ಪಡೆದು ಕೊಂಡರು

ವಿಜಯದಾಸರು ಪುರಂದರದಾಸರಿಗೆ ಸಲ್ಲಿಸಿದ ಸೇವೆ, ನಾದಮುನಿಗಳು ನಮ್ಮಾಳ್ವಾರರಿಗೆ ಸಲ್ಲಿಸಿದ ಸೇವೆ ಒಂದೇ ಬಗೆಯದು ಜನರಿಂದ ಮರೆಯಾಗಿದ್ದ ಸಾಹಿತ್ಯವನ್ನು ಮತ್ತೆ ಜನರಿಗೆ ಒದಗಿಸಿದುದೇ ಈ ಸೇವೆಯ ಸ್ವಾರಸ್ಯ ಭಾವುಕರ ನಂಬಿಕೆಯಲ್ಲಿ ಪುರಂದರದಾಸರು ವ್ಯಾಸಕಾಶಿಯಲ್ಲಿ ವಿಜಯದಾಸರಿಗೆ ಕನಸಿನಲ್ಲಿ ಕಾಣಿಸಿ ಕೊಂಡಂತೆಯೇ, ನಮ್ಮಾಳ್ವಾರರ ಚೇತನ ತಿರುಕ್ಕುರುಗೂರಿನಲ್ಲಿ ನಾಥಮುನಿಗಳಿಗೆ ಗೋಚರವಾಯಿತು ಈ ನಂಬಿಕೆಯ ವಿಮರ್ಶೆ ನಮಗಿಂದು ಪ್ರಸಕ್ತವಲ್ಲ ಮುಖ್ಯ ವಾದ ವಿಚಾರವೆಂದರೆ ಉತ್ತಮವಾದ ಒಂದು ಸಾಹಿತ್ಯರಾಶಿ ಹಲವು ತಲೆಮಾರುಗಳ ನಂತರ ಮತ್ತೆ ಜನರೆದುರು ತೋರಿಕೊಂಡದ್ದು , ಅದಕ್ಕೆ ಕಾರಣಪುರುಷರೆಂದಾದವರ ಶ್ರದ್ಧೆ, ಸಾಹಸ, ಉದಾತ್ತವಾದ ಆದರ್ಶ ಇವು ಎದ್ದು ಕಾಣುತ್ತವೆ

ವಿಜಯದಾಸರ ಕಾಲದಲ್ಲೂ ಪುರಂದರ ಸಾಹಿತ್ಯ ಸಂಪೂರ್ಣವಾಗಿ ನಶಿಸಿ ಹೋಗಿರಲಿಲ್ಲ , ಬಹುಮಟ್ಟಿಗೆ ಪ್ರಚಾರದಿಂದ ತಪ್ಪಿತ್ತು ಅಷ್ಟೆ ಈ ವಿಚಾರ ನಮಗೆ ಇನ್ನೊಂದು ಕಡೆಯಿಂದ ಸ್ಪಷ್ಟವಾಗುತ್ತದೆ ತಂಜಾವೂರಿನಲ್ಲಿ ಮಹಾರಾಷ್ಟ್ರದ ಭೋಸಲ ವಂಶದ ಅರಸರು 1684 ರಿಂದ ಆಳಲು ತೊಡಗಿದರಷ್ಟೆ ಅವರೆಲ್ಲರೂ ಕಾವ್ಯ, ನಾಟಕ, ಸಂಗೀತ, ನೃತ್ಯ, ಯಕ್ಷಗಾನಗಳನ್ನು ಪ್ರೋತ್ಸಾಹಿಸುತ್ತ ಬಂದು, ದಕ್ಷಿಣ ದೇಶದ ಸಾಹಿತ್ಯ–ಸಂಗೀತಗಳೆರಡಕ್ಕೂ ಸುವರ್ಣಯುಗವೊಂದನ್ನು ಒದಗಿಸಿ ದರು ಅವರಲ್ಲಿ ಪ್ರಸಿದ್ಧನಾದ ತುಳಜೇಂದ್ರ (ಮೊದಲ ತುಳಜಾಜಿ, ಅವನಿಗೆ ತುಕ್ಕೋಜಿಯೆಂದೂ ಹೆಸರಿದ್ದಿತು, 1728–1736) ಸಾಹಿತಿ, ಸಂಗೀತರಸಿಕ, ಶಾಸ್ತ್ರಜ್ಞ, ಬಹುಭಾಷಾವಿಶಾರದ ಇವನು 'ಸಂಗೀತಸಾರಾಮೃತ'ವೆಂಬ ಗ್ರಂಥ ವನ್ನು ಸಂಸ್ಕೃತದಲ್ಲಿ ರಚಿಸಿದ್ದಾನೆ. ಇದರಲ್ಲಿ ಪುರಂದರದಾಸರ ಗುರುಗಳಾದ ವ್ಯಾಸ ತೀರ್ಥರನ್ನು ತನ್ನ ಗುರುಗಳೆಂದೇ ಭಾವಿಸಿರುವುದಲ್ಲದೆ ಪುರಂದರದಾಸರ ಸುಳಾದಿ ಗಳನ್ನೂ ಕೆಲವು ರಾಗಗಳಿಗೆ ಲಕ್ಷ್ಯವಾಗಿ ಉಲ್ಲೇಖಿಸಿದ್ದಾನೆ ತುಳಜಾಜಿ ಪಟ್ಟವೇರಿ ದಾಗ ಪುರಂದರದಾಸರು ತೀರಿಕೊಂಡು ಒಂದುನೂರು ಅರವತ್ತುನಾಲ್ಕು ವರ್ಷಗಳು ಸಂದಿದ್ದುವು ಆದರೂ ಪುರಂದರದಾಸರ ಕೃತಿಗಳ ಪ್ರಖ್ಯಾತಿ ಉಳಿದುಕೊಂಡಿದ್ದಿತು. ತುಳಜಾಜಿಯ ಕಾಲದಲ್ಲೇ ಇದ್ದ ವಿಜಯದಾಸರೇನು ಉಲ್ಲೇಖಕ್ಕೆ ಬಂದಿಲ್ಲ !

ತಂಜಾವೂರಿನಲ್ಲಿ ಈ ಭೋಸಲೆ ವಂಶದ ಅರಸರ ಆಳ್ವಿಕೆ ಮೊದಲಾಗುವ ಮುಂಚೆ ಆಳುತ್ತಿದ್ದ ನಾಯಕ ಅರಸರೂ ಸಂಗೀತ–ಸಾಹಿತ್ಯರಸಿಕರಾಗಿದ್ದವರೇ. ಅವರಲ್ಲಿ ರಘುನಾಥನಾಯಕ (1600–1634) ಎಂಬುವನು 'ಸಂಗೀತಸುಧಾ' ಎಂಬ ಗ್ರಂಥವನ್ನು ರಚಿಸಿದ್ದ , ಅವನು ಸ್ವತಃ ಗಾಯಕ, ವೈಣಿಕ, ವಾಗ್ಗೇಯಕಾರ, ಶಾಸ್ತ್ರಜ್ಞ ಮೇಲಾಗಿ, ಅವನಿಗೆ ಮಾರ್ಗದರ್ಶಿಗಳೂ ಆಪ್ತಸಚಿವರೂ ಆಗಿದ್ದ ಗೋವಿಂದ ದೀಕ್ಷಿತರು ಕರ್ನಾಟಕದವರು, ಭಾಗವತರು, ಸ್ವತಃ ಸಂಗೀತಶಾಸ್ತ್ರಜ್ಞರು

ಅರಸನಿಗೆ ಅಂಕಿತವಾದ 'ಸಂಗೀತಸುಧಾ' ದಿಟವಾಗಿ ಅವರ ರಚನೆಯೇ ಎನ್ನಿ. ಅವರಾಗಲಿ ಪುರಂದರದಾಸರ ಕೃತಿಗಳನ್ನು ಎತ್ತಿ ಕಾಣಿಸಲಿಲ್ಲವಲ್ಲ ? ಇದೊಂದು ಒಗಟು. ಮಹಾರಾಷ್ಟ್ರದಿಂದ ಬಂದ ತುಳಜಾಜಿಗೆ ಪುರಂದರದಾಸರ ಸುಳಾದಿಗಳ ಪರಿಚಯವಿದ್ದಿತು , ಕನ್ನಡನಾಡಿನಿಂದಲೇ ಹೋದ ಗೋವಿಂದದೀಕ್ಷಿತರಿಗೆ ತಿಳಿದಿರಲಿಲ್ಲ! ಎಂದರೆ, ಪುರಂದರದಾಸರ ನಂತರ ಹರಿದಾಸರು ಮಹಾರಾಷ್ಟ್ರ ಮತ್ತು ಉತ್ತರ ಭಾರತದ ಕಡೆ ಹೋದಂತೆ ತೋರುತ್ತದೆ , ಅಲ್ಲೆಲ್ಲ ಪುರಂದರದಾಸರ ಕೃತಿಗಳು ಪ್ರಚಾರದಲ್ಲಿ ಇದ್ದಿರಬೇಕು. ಹಾಗಲ್ಲವಾದರೆ ರಾಯಚೂರಿನ ಕಡೆಯ ವಿಜಯದಾಸರಿಗೆ ಪುರಂದರದಾಸರು, ಕನಸಿನಲ್ಲೇ ಆಗಲಿ, ಕಾಣಿಸಿಕೊಂಡದ್ದು ದೂರದ ವ್ಯಾಸಕಾಶಿಯಲ್ಲಿ ಏಕೆ ? ಪುರಂದರದಾಸರ ಪದಗಳ ಸಂಗ್ರಹ ಮೊಟ್ಟಮೊದಲು ಕಲ್ಲಚ್ಚು ಕಂಡದ್ದು ಮರಾಠೀ ಲಿಪಿಯಲ್ಲೇ ಎಂಬುದನ್ನೂ ನಾವು ಗಮನಿಸಬೇಕು. ಅಬಾಜಿ ರಾಮಚಂದ್ರ ಸಾವಂತರು ಬೆಳಗಾಂವಿಯಲ್ಲಿ 1880 ರಷ್ಟು ಹಿಂದೆ ಈ ಸಂಗ್ರಹವನ್ನು ಹೀಗೆ ಪ್ರಕಟ ಗೊಳಿಸಿದರು. ಈಗ ಉಪಲಬ್ಧವಿರುವ ಪುರಂದರ ಸಾಹಿತ್ಯದ ತುಂಬ ಹಳೆಯ ಕೋರಿಕಾಗದದ ಹಸ್ತಪ್ರತಿಗಳೆಲ್ಲ ಇರುವುದು ದೇವನಾಗರಿ (ಮರಾಠಿಯಲ್ಲಿ ಬಾಳಬಂಧು) ಲಿಪಿಯಲ್ಲೆ. ಧಾರವಾಡದ ಕರ್ನಾಟಕ ವಿಶ್ವವಿದ್ಯಾನಿಲಯದ ಸಂಗ್ರಹದಲ್ಲೇನೋ ಕನ್ನಡಲಿಪಿಯ ಕೆಲವು ಓಲೆಗರಿ ಪುಸ್ತಕಗಳಲ್ಲಿ ಪುರಂದರ ಸಾಹಿತ್ಯ ವಿದೆಯೆನ್ನಿ. ಆದರೆ ಇಂಥವು ತೀರ ವಿರಳ.

ಪುರಂದರದಾಸರಿಂದ ಸ್ಫೂರ್ತಿಯನ್ನೂ ಮಾರ್ಗದರ್ಶನವನ್ನೂ ಪಡೆದುಕೊಂಡ ತ್ಯಾಗರಾಜರು (1767–1847) ಪುರಂದರದಾಸರ ಪದಗಳನ್ನು ಕಲಿತುಕೊಂಡದ್ದು ತಮ್ಮ ತಂದೆಯಿಂದಲೇ , ತಂದೆ ರಾಮಬ್ರಹ್ಮ ತಂಜಾವೂರು ಇಮ್ಮಡಿ ತುಳಜಾಜಿಯ (1763–1787) ಆಸ್ಥಾನದಲ್ಲಿ ರಾಮಾಯಣ ಕಾಲಕ್ಷೇಪ ಮಾಡುತ್ತಿದ್ದವರು , ಅವರಿಗೆ ಪುರಂದರದಾಸರ ಪರಿಚಯವಾದದ್ದು ಮಹಾರಾಷ್ಟ್ರದಿಂದ ಬಂದಿದ್ದ ಗಾಯಕ ರಿಂದಲೇ ಇರಬೇಕು. ಈ ಗಾಯಕರಿಂದಲೇ ಹರಿಕಥೆ, ನಾಮಸಂಕೀರ್ತನ, ಭಜನೆ ಗಳು ಈ ಕಡೆ ವಾಡಿಕೆಗೆ ಬಂದದ್ದು. ಮರಾಠೀ 'ಪದ'ಗಳನ್ನು ಬರೆದವರಲ್ಲೂ ಮೇರುಸ್ವಾಮಿ, ಮಾಧವಸ್ವಾಮಿ, ಆನಂದಬ್ರಹ್ಮಸ್ವಾಮಿ, ಆನಂದತನಯ, ರಾಮಜೋಶಿ ಮೊದಲಾದವರೆಲ್ಲ ತಂಜಾವೂರು ಅರಸರ ಆದರವನ್ನು ಪಡೆದು ಕೊಂಡಿದ್ದವರೇ.

## 3

ಹೀಗಾಗಿ ಮೊದಲಿಂದ ಪುರಂದರದಾಸರಿಗೂ ಮಹಾರಾಷ್ಟ್ರ, ಉತ್ತರ ಕರ್ನಾಟಕ ಭಾಗಗಳಿಗೂ ನಂಟು ಹೆಚ್ಚಿನದು. ಪುರಂದರದಾಸರು ಹುಟ್ಟಿದ್ದು ಪುರಂದರಘಡದಲ್ಲಿ ಎಂದು ಪ್ರತೀತಿಯಿದೆಯಷ್ಟೆ. ಪುರಂದರಘಡವೆನ್ನುವುದು ಮಹಾರಾಷ್ಟ್ರದಲ್ಲಿ ಪುಣೆಯ

ಹತ್ತಿರ ಇರುವ ಊರು ಈ ಊರಿನಲ್ಲಾಗಲಿ ಸುತ್ತಮುತ್ತ ಆಗಲಿ ಪುರಂದರ ದಾಸರನ್ನು ನೆನಪಿಗೆ ತರುವಂಥ ಕತೆಗಳಾಗಲಿ ಇತರ ವಿವರಗಳಾಗಲಿ ದೊರೆಯುವುದಿಲ್ಲ, ಈ ಪ್ರದೇಶವನ್ನು ನೆನಪಿಗೆ ತರುವಂದ ಒಕ್ಕಣೆಯಾಗಲಿ ವಾಗ್ದೋರಣೆಯಾಗಲಿ ಪುರಂದರ ಸಾಹಿತ್ಯದಲ್ಲಿ ದೊರೆಯುವುದಿಲ್ಲ ಪುರಂದರದಾಸರಿಗೂ ಪುರಂದರಘಡಕ್ಕೂ ಗಂಟು ಏರ್ಪಟ್ಟುದು ಪುರಂದರ ಸಾಹಿತ್ಯದ ಪ್ರಚಾರ ಮಹಾರಾಷ್ಟ್ರ ಪ್ರದೇಶದಲ್ಲಿ ಆದಮೇಲೇ ಎಂದು ತೋರುತ್ತದೆ , ಇದು ಪುರಂದರದಾಸರು ಕಾಲವಾದ ಮೇಲೇ ಇರಬೇಕು ಕಪಟರಾಳ ಕೃಷ್ಣರಾಯರು ಈ ವಿಚಾರವಾಗಿ ಸಂಶೋಧನೆ ನಡೆಸಿ ಪುರಂದರದಾಸರ ಜನ್ಮಸ್ಥಳ ಮಹಾರಾಷ್ಟ್ರದ ಪುರಂದರಘಡವಲ್ಲ, ಶಿವಮೊಗ್ಗ ಜಿಲ್ಲೆಯ ಆರಗದ ಹತ್ತಿರ ಪುರಂದರ ಎಂಬ ಹೆಸರಿದ್ದ ಹಳ್ಳಿ ಎಂದು ಸೂಚಿಸಿದ್ದಾರೆ ಇದೂ ಊಹೆಯೇ , ಸಮರ್ಥಿಸುವ ವಿವರಗಳು ಅಷ್ಟಕ್ಕಷ್ಟೇ ಇದು ಹೀಗೇ ಎಂದು ಏನನ್ನು ಹೇಳುವುದೂ ಕಷ್ಟ ಮೇಲಾಗಿ, ಪುರಂದರದಾಸರೆಂಬ ಹೆಸರಿಗೆ ಮೂಲ ವಾಗಿ ಪುರಂದರವೆಂಬ ಹೆಸರನ್ನು ಹೊತ್ತ ಊರೇ ಇರಬೇಕೆ ?

ಪುರಂದರದಾಸರು ಪಂಢರಪುರದಲ್ಲಿ ಹನ್ನೆರಡು ವರ್ಷಗಳು ವಾಸಮಾಡಿದರೆಂದು ಇನ್ನೊಂದು ಪ್ರತೀತಿ ದಾಸರು ಪಂಢರಪುರದ ಅಧಿದೈವವಾದ ಪಾಂಡುರಂಗ ವಿಠಲನ ಭಕ್ತರೇನೋ ಹೌದು , ಹರಿದಾಸಪಂಥದಲ್ಲಿ ವಿಠಲನಿಗೆ ಹೆಗ್ಗಳಿಕೆ ಇರುವುದೂ ಸರಿಯೇ ಇದರ ವಿಚಾರ ಮುಂದೆ ಬರುತ್ತದೆ ಈಗ ಪಂಢರಪುರ ಮಹಾರಾಷ್ಟ್ರದಲ್ಲಿನ ಮುಖ್ಯ ಕ್ಷೇತ್ರ ಸೊಲ್ಲಾಪುರ ಜಿಲ್ಲೆಯಲ್ಲಿ ಭೀಮಾ (ಅಲ್ಲಿನ ಹೆಸರು ಚಂದ್ರಭಾಗ) ನದಿಯ ದಂಡೆಯ ಮೇಲಿರುವ ಈ ಕ್ಷೇತ್ರ ಮಹಾರಾಷ್ಟ್ರದಲ್ಲಿ ಭಕ್ತಿಪಂಥ, ಭಾಗವತ ಧರ್ಮಗಳಿಗೆ ಕೇಂದ್ರಸ್ಥಾನ ಅಲ್ಲಿನ ಪಾಂಡುರಂಗ ಮರಾಠೀ ಸಾಹಿತ್ಯದ ಭಕ್ತಿ ಸ್ರೋತಕ್ಕೆ ಚೇತನಸ್ವರೂಪ , ನಾಮದೇವ, ಜ್ಞಾನೇಶ್ವರ, ತುಕಾರಾಮ, ನಿವೃತ್ತಿ ನಾಥ, ರಾಮದಾಸ ಮೊದಲಾದ ಸಂತರೆಲ್ಲ ಪಂಢರಪುರದ ಗುಡಿಯಿಂದ ಸ್ಫೂರ್ತಿ ಯನ್ನು ತಳೆದವರೇ, ಅಲ್ಲಿನ ದೇವರನ್ನು ಹಾಡಿ ಹೊಗಳಿದವರೇ

ಆದರೆ ಈ ಕ್ಷೇತ್ರವನ್ನು ಕುರಿತ ಅತಿ ಪ್ರಾಚೀನವಾದ ಶಾಸನದಲ್ಲಿ ಇದನ್ನು 'ಪಂಡರಗೆ'ಯೆಂದು ಕನ್ನಡ ಹೆಸರಿನಿಂದಲೇ ಕರೆಯಲಾಗಿದೆ 1236ರ ಹೊಯ್ಸಳ ಸೋಮೇಶ್ವರನ ಈ ಶಾಸನದಲ್ಲಿ (ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ) 'ಭೀಮರಥೀ ನದೀತೀರಸಂನಿವಿಷ್ಟ ಪಂಡರಗೆ ನಾಮಾನಂ ಮಹಾಗ್ರಾಮಮಧಿವಸತೇ ಪುಂಡರೀಕಮನಃ ಕುಮುದವಿಕಸ ಸುಧಾಕರಾಯ ಭಗವತೇ ವಿಟ್ಠಲದೇವಾಯ' ಎಂಬ ಒಕ್ಕಣೆಯಿದೆ ಹೊಯ್ಸಳ ರಾಜನಾದ ವಿಷ್ಣುವರ್ಧನನ (ಬಿಟ್ಟಿಗ, ಬಿಟ್ಟಿದೇವ, 1117–1137) ತಮ್ಮ ವೀರಬಲ್ಲಾಳನು ಈ ಪ್ರದೇಶವನ್ನು ಗೆದ್ದು, ಅಲ್ಲಿ ಪುಂಡಲೀಕನೆಂಬ ಭಕ್ತನನ್ನು ಕಂಡು ಆವನಿಗಾಗಿ ವಿಷ್ಣುದೇವಾಲಯವೊಂದನ್ನು ಕಟ್ಟಿಸಿದನೆಂದೂ, ಅರಸನಾದ ಬಿಟ್ಟಿಗನ ಹೆಸರನ್ನೇ ದೇವರಿಗೆ ಇಟ್ಟದ್ದರಿಂದ 'ವಿಟ್ಠಲ'ನೆಂದಾಯಿತೆಂದೂ ಮಹಾ ರಾಷ್ಟ್ರದಲ್ಲಿಯೇ ಇರುವ ನಂಬಿಕೆ ಇದನ್ನು 'ಟೆಂಪಲ್ಸ್ ಎಂಡ್ ಲೆಜೆಂಡ್ಸ್ ಆಫ್

ಮಹಾರಾಷ್ಟ್ರ' ಗ್ರಂಥವನ್ನು ಬರೆದ ಎಂ ಎಸ್ ಮೋತೆ (ಭಾರತೀಯ ವಿದ್ಯಾಭವನ, ಮುಂಬಯಿ, 1962) ಉಲ್ಲೇಖಿಸಿದ್ದಾರೆ ವಿಟ್ಠಲನು ಕನ್ನಡಿಗರ ದೇವರೆಂದು ಮರಾಠೀ ಸಂತರ ಹೇಳಿಕೆಯೂ ಇದೆ ನಾಮದೇವನ 'ಕಾನಡಾ ವಿಟ್ಠಲ ಹೋ, ಉಭಾ ಭಿವರೇತೀರೀ' ("ಭೀಮಾನದಿಯ ದಂಡೆಯ ಮೇಲೆ ನಿಂತ ವಿಟ್ಠಲನು ಕನ್ನಡದವನು"), 'ನಾಮ ಬರವೇ ರೂಪ ಬರವೇ ದರ್ಶನ ಬರವೇ ಕಾನಡಿಯಾ' ("ಈ ಕನ್ನಡದವನ ಹೆಸರೇ ಸೊಗಸಿನದು, ರೂಪ ಚೆಲುವಾದುದು, ನೋಟವಂತೂ ಮೋಹಕವಾದುದು!") ಎಂಬ ಮಾತುಗಳೂ, ಜ್ಞಾನದೇವನ ಅಭಂಗಮಾಲೆಯಲ್ಲಿ ಬರುವ 'ಕಾನಡಾ ಹೋ ವಿಟ್ಠಲೂ ಕರ್ನಾಟಕೂ' ("ವಿಟ್ಠಲನು ಕನ್ನಡಿಗ, ಕರ್ನಾಟಕದವನು") ಎಂಬ ಮಾತೂ ನಿದರ್ಶನಗಳು

'ವಿಷ್ಣು' ಎಂಬ ಸಂಸ್ಕೃತಪದಕ್ಕೆ 'ವಿಟ್ಠ' ಎಂಬುದು ಅಪಭ್ರಂಶರೂಪ, ಕನ್ನಡದಲ್ಲಿ 'ಬಿಟ್ಟಿಗ'ನೆಂದಾಗುತ್ತದೆ ಆರನೇ ಶತಮಾನದ ರಾಷ್ಟ್ರಕೂಟ ರಾಜ ಅವಿಧೇಯನ ಪಾಂಡುರಂಗಪಲ್ಲಿ (ಎಂದರೆ ಪಂಢರಪುರ) ದತ್ತಿ ಶಾಸನದಲ್ಲಿ 'ಜಯದ್ವಿಟ್ಠ' ಎಂಬ ಒಕ್ಕಣೆಯನ್ನು ಕಾಣುತ್ತೇವೆ ವಿಟ್ಠಲನೆಂಬ ಮಾತಿಗೇನೋ ಈ ಅಪಭ್ರಂಶ ರೂಪವೇ ಮೂಲ, ಹೊಯ್ಸಳ ರಾಜ ಬಿಟ್ಟಿಗನ ಹೆಸರನ್ನೇ ತಳೆದ ದೇವರೆನ್ನುವುದೂ ಸರಿಯೇ ಇದ್ದೀತು ಕನ್ನಡ ಜನರಿಗೂ ಈ ಕ್ಷೇತ್ರ ಆದರಣೀಯವಾಗಿದ್ದಿತೆಂದು ಹಲವಾರು ಆಕರಗಳಿಂದ ಸ್ಪಷ್ಟವಾಗುತ್ತದೆ ಹದಿಮೂರನೆಯ ಶತಮಾನದ ಕನ್ನಡ ಕವಿ ಚೌಂಡರಸ ತನ್ನ 'ಅಭಿನವದಶಕುಮಾರಚರಿತೆ'ಯನ್ನು ಅಭಂಗವಿಟ್ಠಲನಿಗೇ ಅಂಕಿತ ಮಾಡಿದ್ದಾನೆ, ತನ್ನನ್ನು "ಶ್ರೀಮದಭಂಗವಿಟ್ಠಲ ಪದಾಂಭೋಜಮತ್ತಮಧುಕರ" ನೆಂದು ಬಣ್ಣಿಸಿಕೊಂಡಿದ್ದಾನೆ ಪುರಂದರದಾಸರಲ್ಲದೆ ಅವರ ಪೂರ್ವಸೂರಿಗಳಾದ ಶ್ರೀಪಾದರಾಜರೂ ವ್ಯಾಸರಾಯರೂ ವಿಟ್ಠಲನ ಭಕ್ತರೇ ಶ್ರೀಪಾದರಾಜರ ಒಂದು ಕೃತಿಯಲ್ಲಿ 'ಪಂಡರಂಗಿ ಪುರೀ ಪತಿ ಸಿರಿರಾಗ ವಿಠಲ್ಲ'ನೆಂದು ಅಂಕಿತವಿದೆ ಸ್ವಯಂ ಮಧ್ವಾಚಾರ್ಯರೇ ವಿಟ್ಠಲ ಮೂರ್ತಿಗಳನ್ನು ತಾವು ಸ್ಥಾಪಿಸಿದ ಅಷ್ಟಮಠಗಳಲ್ಲಿ ಎರಡು ಮಠಗಳಿಗೆ (ಶೀರೂರು, ಪುತ್ತಿಗೆ) ಕೊಟ್ಟದ್ದಿದೆ ಪುರಂದರದಾಸರ ಕಾಲದಲ್ಲಿ ವಿಜಯನಗರದ ಅರಸ ಕೃಷ್ಣದೇವರಾಯ ಮಹಾರಾಯನು ಹಂಪಿಯಲ್ಲಿ ವಿಜಯ ವಿಟ್ಠಲನ ಗುಡಿಯೊಂದನ್ನು ಕಟ್ಟಿಸಿದ ತಾನು ಉದಯಗಿರಿಯಿಂದ ತಂದ ವಿಟ್ಠಲ ಮೂರ್ತಿಗೆ ಆಲಯವೆಂದು ಈ ಗುಡಿಯನ್ನು ಕಟ್ಟಿಸಿದನಂತೆ, ಉದಯಗಿರಿಯಲ್ಲಿದ್ದುದು ಪಂಢರಪುರದಿಂದ ಕೊಂಡೊಯ್ದ ಮೂರ್ತಿಯೇ ಎಂದೂ, ಮರಾಠೀ ಸಂತ ಏಕನಾಥನ ಅಜ್ಜ ಭಾನುದಾಸನ ಕೋರಿಕೆಯ ಮೇಲೆ ಕೃಷ್ಣದೇವರಾಯನು ವಿಟ್ಠಲಮೂರ್ತಿಯನ್ನು ಪಂಢರಪುರಕ್ಕೆ ಹಿಂದಿರುಗಿಸಿದನೆಂದೂ ಹೇಳುತ್ತಾರೆ ಆದರೆ ಪುರಂದರದಾಸರ ಕಾಲದಲ್ಲಿ ಈ ಮೂರ್ತಿ ಹಂಪಿಯಲ್ಲೇ ಇದ್ದಿರಬೇಕು, ಏಕೆಂದರೆ ಅವರ ಸಮಕಾಲೀನರಾದ, ವ್ಯಾಸರಾಯಸ್ವಾಮಿಗಳ ಶಿಷ್ಯರೇ ಆಗಿದ್ದ, ವಾದಿರಾಜಸ್ವಾಮಿಗಳು ತಮ್ಮ 'ತೀರ್ಥ ಪ್ರಬಂಧ'ದಲ್ಲಿ ಈ ಮೂರ್ತಿಯನ್ನು

ಉಲ್ಲೇಖಿಸಿದ್ದಾರೆ ಇದು ಹೇಗಾದರೂ ಇರಲಿ, ವಿಟ್ಠಲನ ಪ್ರಖ್ಯಾತಿ ವಿಜಯನಗರ ಸಾಮ್ರಾಜ್ಯದಲ್ಲಿದ್ದಿತು ಎನ್ನುವುದು ಸ್ಪಷ್ಟವಾಗುತ್ತದೆ ಪುರಂದರದಾಸರಿಗೂ ವಿಟ್ಠಲನಿಗೂ ನಂಟು ಹೇಗೆ ಒದಗಿತೆಂದು ವಿವರಿಸಲು ದೂರ ಹೋಗಬೇಕಾದುದಿಲ್ಲ

ಇದನ್ನು ಹೇಳುವಾಗಲೇ ಇದಕ್ಕೆ ಸಂಬಂಧಪಟ್ಟ ಇನ್ನೊಂದು ವಿವರವನ್ನೂ ಪರಿಶೀಲಿಸಬೇಕು ಪಂಢರಪುರದ ಗುಡಿಯಲ್ಲಿ 'ಪುರಂದರದಾಸರ ಕಂಬ'ವೆಂದು ಕಾಣಿಸುವ ವಿಚಾರ ಅದು ಅದಕ್ಕೆ ಹಿನ್ನೆಲೆಯಾಗಿ ಕತೆಯೊಂದನ್ನು ಹೇಳಿ, ಪುರಂದರದಾಸರನ್ನು ಯಾವುದೋ ಕಾರಣಕ್ಕಾಗಿ ಆ ಕಂಬಕ್ಕೆ ಕಟ್ಟಿ ಹೊಡೆಸಿದರಂದೂ ಆಗ ಅವರು 'ಮುಯ್ಯಕ್ಕೆ ಮುಯ್ಯ ತೀರಿತು, ಜಗದಯ್ಯ, ವಿಜಯ್ಯ, ಸಹಾಯ್ಯ, ಪಂಢರಿರಾಯ' ಎಂದು ಮೊದಲಾಗುವ ಕೃತಿಯನ್ನು ಹಾಡಿದರೆಂದೂ ಪ್ರತೀತಿಯಿದೆ ಆದರೆ ಈ ಕತೆಯಲ್ಲಿ ಏನೇನೂ ತಿರುಳಿಲ್ಲದಿರುವುದು ಮಾತ್ರವಲ್ಲ, ಸ್ವಾರಸ್ಯವೂ ಇಲ್ಲ, ತಥ್ಯವಂತೂ ಮೊದಲೇ ಇಲ್ಲ ಪಂಢರಪುರದ ವಿಟ್ಠಲನ ಗುಡಿಯಲ್ಲಿ ದೇವರ ಎದುರಿಗೆ 'ಸೋಳಹ ಕಂಭಾ' (ಹದಿನಾರು ಕಂಬಗಳ ಮಂಟಪ) ಎನ್ನುವ ಆವರಣವಿದೆ ಆದರಲ್ಲಿ ಎರಡನೆಯ ಸಾಲಿನಲ್ಲಿರುವ ಎರಡನೆಯ ಕಂಬಕ್ಕೆ ಬೆಳ್ಳಿಯ ತಗಡನ್ನು ಹೊದ್ದಿಸಿ ಕುಂದಣದ ಕೆಲಸವನ್ನು ಮಾಡಿಸಿದ್ದಾರೆ ಭಕ್ತರು ಈ ಕಂಬವನ್ನು ಅಪ್ಪಿಕೊಂಡು, ಕಾಣಿಕೆ ಸಲ್ಲಿಸಿ ಅನಂತರ ವಿಟ್ಠಲನ ದರ್ಶನ ಮಾಡು ವುದು ವಾಡಿಕೆ ಇದನ್ನೇ 'ಪುರಂದರದಾಸರ ಕಂಬ'ವೆಂದು ಉತ್ಸಾಹಿಗಳು ಗುರು ತಿಸುವುದು ಆದರೆ ಆ ಕಂಬಕ್ಕೂ ಪುರಂದರದಾಸರಿಗೂ ಯಾವ ಬಗೆಯ ಸಂಬಂಧ ವಾಗಲಿ ಇದ್ದಂತೆ ಸ್ಥಳಪುರಾಣದಿಂದಾಗಲೀ ಗುಡಿಯ ವಿಚಾರವಾದ ಒಕ್ಕಣೆ ಯಿಂದಾಗಲೀ, ಅಲ್ಲಿ ಬಳಕೆಯಲ್ಲಿರುವ ಕಥೆಗಳಿಂದಾಗಲೀ ಸಿದ್ಧವಾಗುವುದಿಲ್ಲ ಅಲ್ಲಿಯವರು ಅದನ್ನು ಪುರಂದರದಾಸರ ಕಂಬವೆಂದು ಕರೆಯುವುದೂ ಇಲ್ಲ ಅಲ್ಲಿಯ ವರಿಗೆ ಅದು 'ಗರುಡಖಂಭ', ಕಂಬದ ಮೇಲೆ ಕೆತ್ತಿರುವ ಮೂರ್ತಿ ವಿಷ್ಣುವಿನದು ಪಂಢರಪುರದ ಗುಡಿಯ ಇತಿಹಾಸದಲ್ಲಿ ಪುರಂದರದಾಸರ ಉಲ್ಲೇಖ ಎಳ್ಳಷ್ಟೂ ಬರುವುದಿಲ್ಲ

ಪುರಂದರದಾಸರ ಕಾಲಕ್ಕೆ ಕನ್ನಡನಾಡು, ಮಹಾರಾಷ್ಟ್ರ, ಆಂಧ್ರಪ್ರದೇಶ ಎಂದು ಈಗಿರುವಂತೆ ನಿಖರವಾದ ನಿರ್ದೇಶನವಿರಲಿಲ್ಲ , ಜನಜೀವನದಲ್ಲಿ ಆಡುಮಾತುಗಳ ಹರವು ಆಡಳಿತದ ಗಡಿಗಳನ್ನು ಅವಲಂಬಿಸಿರಲಿಲ್ಲ ಈಗ ಮಹಾರಾಷ್ಟ್ರ ಎಂದು ಸ್ಪಷ್ಟವಾಗಿ ಕಾಣಿಸುವ ಪ್ರದೇಶದಲ್ಲಿ ಕೂಡ ಆ ಕಾಲಕ್ಕೆ ಕನ್ನಡ ಮಾತು ವಿಶೇಷ ವಾಗಿಯೇ ವ್ಯವಹಾರದಲ್ಲಿದ್ದಿತು ಮರಾಠಿಯ ಬಾಹುಳ್ಯ ಇದ್ದಲ್ಲೂ ಕನ್ನಡಕ್ಕೆ ಮನ್ನಣೆಯಿದ್ದಿತೆನ್ನುವುದು ಜ್ಞಾನದೇವನ 'ಅಭಂಗಮಾಲೆ'ಯಲ್ಲಿ ಕಾಣಸಿಗುವ ಒಂದು ಕನ್ನಡ ಅಭಂಗದಿಂದ ತಿಳಿಯುತ್ತದೆ (ಅಭಂಗ ಸಂಖ್ಯೆ 345)—

ಆ ಆ ನೀ ಕೇಳೆ ಮಾತು ಕೇಳಲೆ
ಘನಿಗೆ ಮರುಳಾದೆನೆ ೧

ಚೆಲುವಾನೆ ಚೆಲುವಾನೆ ಪಂಢರಿರಾಯ ಚೆಲುವಾನೆ
ಎಲ್ಲೆ ದೊರೆಕ್ಯಾನೆ ಎಲ್ಲೆ ಬಾರನ್ನೆ ಧ್ರು

ಪುಂಡಲೀಕನ ಭಕ್ತಿಗೆ ಬಂದಾ
ರಖುಮಾದೇವೀ ವರವಿಟ್ಠಲುನೇ ೨

(ಈ ಅಭಂಗದ ಪಾಠವನ್ನು ಡಿ ಕೆ ಭೀಮಸೇನರಾಯರು ಉಸ್ಮಾನಿಯ ಯೂನಿವರ್ಸಿಟಿ ರಿಸರ್ಚ್‌ಬೋರ್ಡ್‌ನ ಮೂರನೆಯ ಪ್ರಕಟನೆಯಾಗಿ ಬರೆದ 'ಹದಿಮೂರನೆಯ ಶತಮಾನದ ಕರ್ನಾಟಕಾಂಧ್ರ ಮಹಾರಾಷ್ಟ್ರ ಸಾಹಿತ್ಯಾವಲೋಕನ' ಎಂಬ ಪ್ರಬಂಧ ದಲ್ಲಿ ಕೊಟ್ಟಿದ್ದಾರೆ, 1942, ಪು 99 ಈ ಪಾಠದಲ್ಲಿರುವ ಒಂದರಡು ತಪ್ಪುಗಳನ್ನು ಇಲ್ಲಿ ತಿದ್ದಿದ್ದೇನೆ) ಪುರಂದರದಾಸರು ಪುರಂದರಪಡದವರೋ ಅಲ್ಲವೋ, ಪಂಢರ ಪುರದ ವಿಟ್ಠಲನ ಭಕ್ತರಂತೂ ಹೌದು ಪಂಢರಪುರದ ನೆಂಟನ್ನು ತಮ್ಮ ಬಾಳಿನುದ್ದಕ್ಕೂ ಉಳಿಸಿಕೊಂಡಿದ್ದರೂ ಆಶ್ಚರ್ಯವಲ್ಲ ಮರಾಠೀ ಸಂತ ವಾಙ್ಮಯದ ಪ್ರಭಾವ ಪುರಂದರ ಸಾಹಿತ್ಯದ ಮೇಲೆ ಚೆನ್ನಾಗಿಯೇ ಬಿದ್ದಿದೆ ಪುರಂದರದಾಸರ ಸಾಹಿತ್ಯವೂ ಮರಾಠಿಯಲ್ಲಿ ಬಳಕೆಗೆ ಬಂದಿದೆ ಪುರಂದರದಾಸರು ತಮ್ಮ ತಾಯ್ನುಡಿ ಯಾದ ಕನ್ನಡದಲ್ಲೇ ಕೃತಿರಚನೆ ಮಾಡಿದರೂ ಅದು ಊರ್ಜಿತವಾದದ್ದು ಮೊದಲು ಮಹಾರಾಷ್ಟ್ರದ ಕಡೆಯೇ 'ಮರಾಠೀ ಸಂತಮಾಲೆ'ಯಲ್ಲಿ ಪುರಂದರದಾಸರು ಸೇರು ತ್ತಾರೆ , ಅಜಗಾಂವಕರರ 'ಮಹಾರಾಷ್ಟ್ರ ಕವಿಚರಿತೆ'ಯಲ್ಲಿ ಇವರ ಹೆಸರೂ ಇದೆ

ವಿಜಯದಾಸರು ಪುರಂದರದಾಸರನ್ನು ತಮ್ಮ ದೀಕ್ಷಾಗುರುಗಳೆಂದು ಸ್ವೀಕರಿಸಿದ ನಂತರ ಪುರಂದರಸಾಹಿತ್ಯವನ್ನು ಹೆಚ್ಚು ಬಳಕೆಗೆ ತಂದುದಲ್ಲದೆ ಭಾಗವತಧರ್ಮ ವನ್ನು ಹರಡಲೆಂದು ತಾವೇ ದಾಸಸಾಹಿತ್ಯವನ್ನು ರಚಿಸಿದರು ಅವರ ಕೃತಿಗಳಲ್ಲಿ ತಮ್ಮ ಪ್ರಾಸಾದಿಕ ಗುರುಗಳಾದ ಪುರಂದರದಾಸರ ಹೆಗ್ಗಳಿಕೆಯನ್ನು ಹೇಳುವ, ಅವರಿಗೆ ತಮ್ಮ ಕೃತಜ್ಞತೆಯನ್ನು ಸೂಚಿಸುವ, ಅವರ ಬಾಳಕತೆಯನ್ನು ತಿಳಿಯ ಹೇಳುವ ಅನೇಕ ಕೃತಿಗಳಿವೆ ಇವುಗಳಲ್ಲಿ ಇಪ್ಪತ್ತೆರಡನ್ನು ಲಿಂಗಸೂಗೂರಿನ ಶ್ರೀ ಗೊರಾಬಾಳ ಹನುಮಂತರಾಯರು (ವರದೇಂದ್ರ ಹರಿದಾಸ ಸಾಹಿತ್ಯ ಮಂಡಳ) ಒಂದೆಡೆ ಕಲೆಹಾಕಿ ಕಾಣಿಸಿದ್ದಾರೆ ಈ ಸಂಗ್ರಹದಿಂದ ವ್ಯಕ್ತವಾಗುವ ಅಂಶವೆಂದರೆ ಪುರಂದರದಾಸರ ಬಾಳುವೆಯ ವಿಚಾರವಾಗಿ ನಿಖರವಾದ ಮಾಹಿತಿ ವಿಜಯದಾಸರಿಗೆ ಇರಲಿಲ್ಲವೆಂಬುದು ನಂಬಿಕೆಗಳು, ಪ್ರತೀತಿಗಳು, ಕತೆಗಳು, ಕಲ್ಪನೆಗಳು ಇವನ್ನೆಲ್ಲ ಅವಲಂಬಿಸಿ ಕೆಲವು ಪ್ರಸಂಗಗಳನ್ನು ಅವರು ಹೆಣೆದಿರುವುದು ಎದ್ದು ಕಾಣುತ್ತದೆ ಅವರ ಬೇರೆ ಬೇರೆ ಕೃತಿಗಳಲ್ಲಿ ಬೇರೆ ಬೇರೆ ಒಕ್ಕಣೆಗಳಿವೆ , ಹೊಂದಾಣಿಕೆ ಅಷ್ಟಾಗಿ

ಇರದು ಇನ್ನು, ಅವರ ಜಾಡಿನಲ್ಲಿ ನಡೆದುಬಂದ ಇತರ ಹರಿದಾಸರು ಪುರಂದರ ದಾಸರನ್ನು ಕುರಿತು ತಂತಮ್ಮ ಕಲ್ಪನೆಗಳನ್ನೇ ಮುಂದೆ ಮಾಡಿಕೊಂಡು ರಂಜಕವಾದ, ಆದರೆ ಅಬದ್ಧವಾದ, ಕತೆಗಳನ್ನು ಕಟ್ಟಿದ್ದಾರೆ

ಪುರಂದರದಾಸರ ಕೃತಿಗಳಲ್ಲಿ ಕೆಲವಕ್ಕೆ ಸಂದರ್ಭಗಳನ್ನು ಸೃಷ್ಟಿಸಿ, ಅವನ್ನು ಅವರ ಜೀವನಕ್ಕೆ ಹೊಂದಿಸಿರುವುದೂ ಇದೆ 'ಗಿಳಿಯು ಪಂಜರದೊಳಿಲ್ಲ' ಎಂಬ ಹಾಡು ತಮ್ಮ ಮಗನು ತೀರಿಕೊಂಡಾಗ , 'ಮುಯ್ಯಕ್ಕೆ ಮುಯ್ಯ ತೀರಿತಯ್ಯ' ಎಂಬ ಹಾಡು ಪಂಢರಪುರದಲ್ಲಿ ಅಧಿಕಾರಿಗಳು ತಮ್ಮನ್ನು ಕಂಬಕ್ಕೆ ಕಟ್ಟಿಸಿ ಹೊಡೆಸಿದಾಗ , 'ಹರಿಶರಣರೆನ್ನ ಮನೆಯ ಮೆಟ್ಟಲು' ಎಂಬ ಸುಳಾದಿ ಕುಮಾರವ್ಯಾಸ ಕವಿಯು ಅವರನ್ನು ಕಾಣಲು ಬಂದಾಗ 'ಆದದ್ದೆಲ್ಲ ಒಳಿತೇ ಆಯಿತು' ಎಂದು ಮೊದಲಾಗುವ ಹಾಡು ತಮಗೆ ಹೆಂಡತಿಯ ನೆರವಿನಿಂದ ವಿರಕ್ತಿ ಒದಗಿದಾಗ, 'ಬದುಕಿದೆನು ಬದುಕಿದೆನು ಭವವೆನಗೆ ಹಿಂಗಿತು' ಎಂಬ ಪದ ಅವರಿಗೆ ವ್ಯಾಸತೀರ್ಥರಿಂದ ಹರಿದಾಸ ದೀಕ್ಷೆ ಒದಗಿದಾಗ , 'ಕರೆದರೆ ಓ ಎನ್ನಬಾರದೆ ?' ಎಂದು ಮೊದಲಾಗುವ ಹಾಡು ತಮ್ಮ ಮಲತಾಯಿ ತಮಗೆ ವಿಷವುಣಿಸಿ ಕೊಲ್ಲಲು ಯತ್ನಿಸಿ ವಿಫಲಳಾದಾಗ , 'ತಿಳಿಯದು ಜನರಿಗೆ ಜ್ಞಾನಿಗಳ ಮಹಿಮೆ' ಎಂಬ ಹಾಡು ತಮ್ಮ ಮಗಳು ಅತ್ತೆ ಮಾವಂದಿರಿಂದ ಅವಮಾನಿತಳಾದಾಗ , 'ನಿಮ್ಮ ಭಾಗ್ಯ ದೊಡ್ಡದೋ ನಮ್ಮ ಭಾಗ್ಯ ದೊಡ್ಡದೋ ?' ಎಂಬ ಹಾಡು ಕೃಷ್ಣದೇವರಾಯ ಮಹಾರಾಯನು ತಮ್ಮನ್ನು ಪರೀಕ್ಷೆಗೆ ಒಳಪಡಿಸಿದಾಗ , 'ಕದವನಿಕ್ಕಿದಳಿದೆಕೋ ಗೈಯಾಳಿ' ಎಂಬ ಹಾಡು ತಾವು ನಿತ್ಯಯಾತ್ರೆಯಲ್ಲಿ ಒಬ್ಬಾಕೆಯ ಮನೆಯ ಮುಂದೆ ಬಂದು ನಿಂತಾಗ , 'ಎಂದಪ್ಪಿ ಕೊಂಬೆ ರಂಗಯ್ಯನ' ಎಂಬ ಹಾಡು ತಮ್ಮ ಶಿಷ್ಯ ಅಪ್ಪಣ್ಣ ಭಾಗವತನಂತೆ ವಿಟ್ಠಲನೇ ಮೈವೆತ್ತಿಬಂದು ತುಪ್ಪವನ್ನು ಬಡಿಸಿದಾಗ , ಇತ್ಯಾದಿ ಇತ್ಯಾದಿ ಆದರೆ ಈ ಪ್ರಸಂಗಗಳೆಲ್ಲ ಕೇವಲ ಕಲ್ಪನೆಗಳು , ವಿಚಾರದ ಪಂದರಿಯಲ್ಲಿ ನಿಲ್ಲದೆ ತೂರಿಹೋಗು ವಂಥವು ಇವುಗಳನ್ನು ವಿಜಯದಾಸರೂ ಪ್ರಸ್ತಾಪಿಸಿಲ್ಲವೆನ್ನುವುದು ಸಮಾಧಾನದ ಮಾತು

ಪುರಂದರದಾಸರನ್ನು ಕುರಿತಂತೆ ವಿಜಯದಾಸರ ಬೇರೆಬೇರೆ ಒಕ್ಕಣೆಗಳಲ್ಲಿ ಹೊಂದಾಣಿಕೆಯಿಲ್ಲದ, ವಿಚಾರಕ್ಕೆ ನಿಲ್ಲದ, ಸಂದಿಗ್ಧವೆನಿಸುವ ವಿವರಗಳನ್ನು ಬಿಟ್ಟರೆ ಉಳಿಯುವ ಹಂದರ ಇಷ್ಟೇ—(ವಿಜಯದಾಸರ ಮಾತಿನಲ್ಲೇ) (1) 'ಪುರಂದರವೆಂಬ ನಗರಿಯಲಿ ಜನಿತರಾದರು' (ಒಂದು ಪದದಲ್ಲಿ ಇಷ್ಟೇ ವಿವರ, ಇನ್ನೊಂದು ಪದದಲ್ಲಿ 'ಪುರಂದರಗಡದ ಒಳಗೆ ಹಿರಿಯ ಸಾವುಕಾರರೆನಿಸಿ', ಮತ್ತೊಂದು ಪದದಲ್ಲಿ 'ಪುರಂದರಾಲಯಘಟ್ಟದಲಿ') , 'ಕೆಲವು ದಿನ ಸಂಸಾರವೃತ್ತಿಯಲಿ ಚರಿಸಿದರು' (ಒಂದರಲ್ಲಿ ಇದು ವಿವರ, ಇನ್ನೊಂದರಲ್ಲಿ 'ಪರಿಪರಿಯ ಸೌಖ್ಯಗಳ ಸುರಿಸುತ ಇರುತಿರಲು') , (3) ಅನಂತರ 'ಜರಿದು ವೈರಾಗ್ಯವನ್ನು ತೊಟ್ಟು ದೃಢಮನಸಿನಲಿ, ತರುಣಿಮಕ್ಕಳು ಸಹಿತ ಸೇರಿದರು ಕಿಷ್ಕಿಂಧವರತುಂಗ ಪಂಪದಲ್ಲಿ' (ಎಂದರೆ

ವಿರಕ್ತರಾಗಿ ಹಂಪಿಗೆ ಬಂದರು) , (4) 'ವಾಸವನೆ ಮಾಡಿದರು ವ್ಯಾಸರಾಯರ ಬಳಿ ಮುದ್ರೆ ಗುರುಮಂತ್ರ ಉಪದೇಶವನು ಕೊಂಡು ವೈಷ್ಣವರಾಗಿ ಪುರಂದರ ದಾಸರೆಂಬ ಪೆಸರಲಿ' , (4) 'ದೇಶವನೆ ತಿರುಗಿ ಪುಣ್ಯಕ್ಷೇತ್ರಗಳ ಮೆಟ್ಟಿ, ಲೇಸಾಗಿ ಅಲ್ಲಿದ್ದ ಮಹಿಮೆಗಳ ಪೇಳಿ, ದುರಾಶೆಯನು ತೊರೆದು ವಿಟ್ಠಲನ ಸನ್ನಿಧಿಯಲ್ಲಿ ವಾಸವಾದರು ಧರ್ಮನಡತೆಯಲಿ' (ಇದು ಪಂಢರಪುರವೋ ಹಂಪಿಯ ವಿಜಯ ವಿಟ್ಠಲಾಲಯವೋ ತಿಳಿಯದು) , (5) 'ಅವರಿಂದ ವಚನಗಳು ಎಲ್ಲ ವೇದಾರ್ಥ ವಾಗಿ ಅವನಿಯೊಳು ತುಂಬಿಹವು '

ವಿಜಯದಾಸರು ಪುರಂದರದಾಸರ ದೀಕ್ಷೆಗೆ ಮುಂಚಿನ ಹೆಸರನ್ನಾಗಲಿ, ಅವರ ತಂದೆಯ ಹೆಸರನ್ನಾಗಲಿ ಹೆಂಡತಿಯ ಹೆಸರನ್ನಾಗಲಿ ಹೇಳಿಲ್ಲ ಒಂದು ಸಂದಿಗ್ಧವಾದ ಅವರ ಕೃತಿಯಲ್ಲೇನೋ ತಂದೆಯ ಹೆಸರು ವರದಪ್ಪನಾಯಕನೆಂದಿದೆ , ಜಗನ್ನಾಥ ದಾಸರೂ 'ವರದನಾಮಕಭೂಸುರನ ಮಡದಿಯ ಬಸಿರಿನಲ್ಲಿ ಬಂದ'ವರೆಂದು ಹೇಳಿದ್ದಾರೆ ('ದಾಸರಾಯಾ ಪುರಂದರದಾಸರಾಯಾ' ಎನ್ನುವ ಹಾಡಿನಲ್ಲಿ) 'ಪುರಂದರವಿಠಲ'ನೆಂಬ ಅಂಕಿತ ಅವರಿಗೆ ವ್ಯಾಸತೀರ್ಥರಿಂದ ದೊರೆತ ಮೇಲೆ ಅವರು 'ಪುರಂದರದಾಸ'ರೆನಿಸಿದರೆಂದು ವಿಜಯದಾಸರ ಹೇಳಿಕೆ ಅದಕ್ಕೆ ಮೊದಲು ಅವರ ಹೆಸರು ಸೀನಪ್ಪ (ಶ್ರೀನಿವಾಸ) ನಾಯಕನೆಂದೋ ಕೃಷ್ಣಪ್ಪ ನಾಯಕನೆಂದೋ ಇದ್ದಿತೆಂದು ಸಂಪ್ರದಾಯದ ನಂಬಿಕೆ ನಾಯಕನೆನ್ನುವ ಮಾತು ವೃತ್ತಿಯನ್ನಾಗಲಿ ಅಧಿಕಾರವನ್ನಾಗಲಿ ಕುಲವನ್ನಾಗಲಿ ಸೂಚಿಸುವಂಥದಲ್ಲ ಹಂಪಿ ಯಲ್ಲಿದ್ದರೂ, ಕೃಷ್ಣದೇವರಾಯನ ಪರಿಚಿತರಾದರೂ, ವ್ಯಾಸರಾಯರ ಆಶ್ರಿತರಾದರೂ ಅವರು ಯಾವ ಅಧಿಕಾರವನ್ನೂ ಎಂದೂ ನಿರ್ವಹಿಸಿದವರಲ್ಲ ದಾಸರಾಗುವ ಮೊದಲು ಶ್ರೀಮಂತ ಗೃಹಸ್ಥರಾಗಿದ್ದರೆಂದು ಮಾತ್ರ ಹೇಳಬಹುದು 'ಗುರು ಪುರಂದರದಾಸ'ರೆಂಬುವರ ಹಾಡಿನಲ್ಲಿ ತಂದೆಯ ಹೆಸರು ವಿಟ್ಠಲನೆಂದೂ, ವೃತ್ತಿಯಲ್ಲಿ ಚಿನಿವಾರರೆಂದೂ, 'ಪಟ್ಟೆ ಧನಧಾನ್ಯ ಕೋಟ್ಯಾಧಿಕಾರಿಯು ಆಗಿ, ಅಷ್ಟದಿಕ್ಕಿಲಿ ದ್ರವ್ಯ ಮೆರೆಯುತ್ತಿದ್ದಿ'ತೆಂದೂ ಹೇಳಿದೆ ಸಾಮಾನ್ಯವಾಗಿ ನಂಬಲಾಗಿರುವ ಲೋಭಸ್ವಭಾವ ಪುರಂದರದಾಸರಿಗಿದ್ದಿತೆಂದು ವಿಜಯದಾಸರ ಬಾಯಿಂದ ಬಂದಿಲ್ಲ

ವಿಜಯದಾಸರ ಕಾಲಕ್ಕೆ ಸ್ವಲ್ಪ ಮುಂಚೆ ಬದುಕಿ ಬಾಳಿದ ಪ್ರಸನ್ನವೇಂಕಟ ದಾಸರ (ನಿರ್ಯಾಣ ಸಂವತ್ಸರ 1674) ಪ್ರಸ್ತಾಪ ಆಗಲೇ ಬಂದಿತು ಇವರ ಪದವೊಂದರಲ್ಲಿ ಪುರಂದರದಾಸರನ್ನು ಕುರಿತು ಈ ವಿವರಣೆಗಳನ್ನು ಒದಗಿಸಿದ್ದಾರೆ

ತಂದೆ ಪುರಂದರದಾಸರ ಸ್ಮರಿಸುವೆ—ಎನ್ನ
ಮಂದಮತಿಗಳ ಕಳೆದು ಹರಿಭಟನೆನಿಸುವ

ಗುರು ವ್ಯಾಸರಾಯರ ಚರಣಾಬ್ಜ ಷಟ್ಚರಣ
ವಿರತಿ–ಭಕುತಿ–ಜ್ಞಾನಾರ್ಣವನ
ವರ ಉಪನಿಷದ್ವಾರಿಧಿಗೆ ತಿಮಿಂಗಿಲನಹನ
ಧರೆಯ ಕವಿಕುಲ ಶಿಖಾಮಣಿಯೆನಿಪನ ೧

ದಿನದಿನ ದ್ರವ್ಯಾರ್ಥಿಲಾಭದಲಿ ತುಷ್ಟನ
ಕನಕಲೋಷ್ಟಸಮಾನ ನಿರೀಕ್ಷಿಸುವವನ
ಘನ ಸಿದ್ಧಿಗಳು ತಾವು ಬರಲೊಡಂಬಡದೆ ಹರಿ–
ಗುಣ-ಕೀರ್ತನೆಯಲಿ ಪರವಶನಾಗಿಹನ ೨

ಭವಜಲಧಿಗೋಷ್ಪದಕೆ ಸರಿಮಾಡಿ ಕಾಮಕ್ರೋ–
ಧವ ಮೆಟ್ಟಿ ಭಕ್ತಿಸುಧೆಯುಂಡು ತೇಗಿ
ಭುವಿಯೊಳು ನಿಜಕೀರ್ತಿ ಹರಹಿ ಪವನಮತ–
ದವರೆನಿಪ ದಾಸರಿಗೆ ತವರೂಪ ತೋರಿದವನ ೩

ಕವನೋಕ್ತಿ ಮಳೆಗರೆದು ಹರಿದಾಸವರ್ಗಳಿಗೆ
ಅವಿರಳಾನಂದ ವಿತರ್ಧಿಸುವರ
ನವ ಭಕುತಿಯನು ಕಂಡು ಸವೆಯದಾನಂದಪುರ ಪ–
ಥವನು ತೋರಿಸಿದಂಥ ಬಹುಕೃಪಾಕರನ ೪

ಗೀತ ರಾಯಿ ಸುಳಾದ್ಯುಗಾಭೋಗ ಪದ ಪದ್ಯ–
ವ್ರಾತ ಪ್ರಬಂಧ ರಚಿಸಿ ವಿಟ್ಠಲನ
ಪ್ರೀತಿ ಪಡಿಸಿ ಪ್ರತ್ಯಕ್ಷ ಕಂಡು ನಲಿವ ವೈಷ್ಣವಾಗ್ರ–
ನಾಥ ಪ್ರಸನ್ನವೆಂಕಟ ಕೃಷ್ಣಪ್ರಿಯನ ೫

ಇದರಲ್ಲಿ ಪುರಂದರದಾಸರ ವ್ಯಕ್ತಿತ್ವದ ಹೆಗ್ಗಳಿಕೆ, ಹರಿದಾಸ್ಯದ ಹಿರಿಮೆ, ಬದುಕಿನ ಉತ್ಕೃಷ್ಟ ಮೌಲ್ಯಗಳು ಉಲ್ಲೇಖಗೊಂಡಿವೆಯಷ್ಟೆ. ಅವರ ಬದುಕಿನ ವಿವರಗಳಾಗಲಿ, ಕತೆಗಳಾಗಲಿ, ಪ್ರತೀತಿಗಳಾಗಲಿ ಏನೂ ಕಾಣಸಿಗುವುದಿಲ್ಲ ವಿಜಯದಾಸರ ಕಾಲಕ್ಕೆ ಮುಂಚೆ ಇವು ಯಾವುವೂ ಇನ್ನೂ ಸಿದ್ಧವಾಗಿರಲಿಲ್ಲವೆಂದು ತೋರುತ್ತದೆ ! ವ್ಯಾಸ ತೀರ್ಥರ ಶಿಷ್ಯರೆಂಬುದೇನೋ ಇಲ್ಲಿ ಪ್ರಸ್ತಾಪಕ್ಕೆ ಬಂದಿದೆ

ವಿಜಯದಾಸರ ಸಾಕ್ಷಾತ್ ಶಿಷ್ಯರೂ ಪ್ರಸಿದ್ಧ ವಿದ್ವಾಂಸರೂ ಹರಿದಾಸರೂ ಆಗಿದ್ದ ಜಗನ್ನಾಥದಾಸರು (1727–1809) ವಿಜಯದಾಸರಷ್ಟೇ ಪ್ರಾಚೀನ ಪ್ರಮಾಣವೆಂದು ಬಗೆಯಬಹುದಲ್ಲ ? ಅವರ 'ಹರಿಕಥಾಮೃತಸಾರ' ಹರಿದಾಸ ವಾಙ್ಮಯದಲ್ಲಿ ಮೇರುಕೃತಿ ಮಾತ್ರವಲ್ಲ, ನಿರ್ಣಾಯಕಗ್ರಂಥ ಇಂಥವರು ಪುರಂದರ

ದಾಸರನ್ನು ಕುರಿತು ಮಾಡಿರುವ ಈ ಒಂದು ಹಾಡು ಆ ಕಾಲಕ್ಕೆ ಪುರಂದರದಾಸರನ್ನು ಕುರಿತು ಇದ್ದ ಕಲ್ಪನೆಯನ್ನು ಸ್ಪಷ್ಟಪಡಿಸುತ್ತದೆ ಇದರಲ್ಲಿ ಯಾವ ಅತ್ಯುಕ್ತಿಯಾಗಲಿ, ಆಡಂಬರವಾಗಲಿ, ಅದ್ಭುತಪ್ರಸಂಗಗಳಲ್ಲಿ ಪ್ರೀತಿಯಾಗಲಿ, ಅನಗತ್ಯ ವಿಚಾರವಾಗಲಿ ಇಲ್ಲದಿರುವುದನ್ನು ಗಮನಿಸಬೇಕು

ದಾಸರಾಯಾ ಪುರಂದರ ದಾಸರಾಯಾ

ದಾಸರಾಯ ಪ್ರತಿವಾಸರದಲಿ ಶ್ರೀನಿ–
ವಾಸನ ತೋರೊ ದಯಾಸಾಂದ್ರಮೂರುತಿ

ವರದನಾಮಕ ಭೂಸುರನ ಮಡದಿಯ ಬ–
ಸಿರಲಿ ಬಂದು ನೀ ಮೆರೆದೆ ಧರಣಿಯೊಳು ೧

ಕುಲಿಶಧರಾಹ್ವಯ ಪೊಳಲೊಳು ಮಡದಿಮ–
ಕ್ಕಳ ಕೂಡಿ ಸುಖದಿಂ ಕೆಲಕಾಲವಿರುತಿದ್ದೆ ೨

ಮನೆ ಧನ ಧಾನ್ಯ ವಾಹನ ವಸ್ತುಗಳನೆಲ್ಲ
ತೃಣಕೆ ಬಗೆದು ಕೃಷ್ಣಾರ್ಪಣವೆಂದೆ ಬುಧರಿಗೆ ೩

ವ್ಯಾಸರಾಯರಲಿ ಭಾಸುರಮಂತ್ರೋಪ–
ದೇಶವ ಕೊಂಡು ರಮೇಶನನೊಲಿಸಿದೆ ೪

ಪ್ರಾಕೃತ ಭಾಷೆಯಲಿ ನೀ ಕೃತಿಪೇಳಿ ಅ–
ಪ್ರಾಕೃತ ಹರಿಯಿಂದ ಸ್ವೀಕೃತ ನೀನಾದೆ ೫

ತೀರ್ಥಕ್ಷೇತ್ರಗಳ ಮೂರ್ತಿಮಹಿಮೆಗಳ
ಕೀರ್ತಿಸಿ ಜಗದಿ ಕೃತಾರ್ಥನೆಂದೆನಿಸಿದೆ ೬

ಪಾತಕವನನಿಧಿಪೋತನೆನಿಪ ಜಗ–
ನ್ನಾಥ ವಿಠಲನ ಸಂಪ್ರೀತಿಯ ಪಡೆದೆ ೭

ಪುರಂದರದಾಸರಿಗೆ ಮೂವರು ಗಂಡುಮಕ್ಕಳಿದ್ದ ವಿಚಾರ ಅವರ ಕಾಲದಲ್ಲಿಯೇ ಹೊರಟ ಕಮಲಾಪುರದ ತಾಮ್ರ ಶಾಸನದಲ್ಲಿ ಉಲ್ಲೇಖವಾಗಿರುವುದನ್ನು ಆಗಲೇ ಗಮನಿಸಿದ್ದೇವೆ ಶಾಸನದಲ್ಲಿ ಅವರ ಹೆಸರುಗಳನ್ನೂ ಹೇಳಲಾಗಿದೆ—ಲಕ್ಷ್ಮಣದಾಸ, ಹೇಬ(ವ)ಣದಾಸ ಮತ್ತು ಮಧ್ವಪದಾಸ ಎಂದು ಆದರೆ ವಿಜಯದಾಸರ ಸುಳಾದಿ ಯೊಂದರಲ್ಲಿ ಪುರಂದರದಾಸರಿಗಿದ್ದವರು ನಾಲ್ವರು ಮಕ್ಕಳೆಂದೂ ('ದಾಸರು ದಾಸರ

ಸುತರು ನಾಲ್ವರ ಮುಂದೆ '), ಅವರೊಂದಿಗೆ ಕೂಡಿಕೊಂಡು ಪುರಂದರದಾಸರು 'ಪುರಂದರ', 'ವರದ', 'ಗುರು', 'ಅಭಿನವ', 'ಗುರುಮಧ್ವಪತಿ' ಎಂಬ ಅಂಕಿತ ಗಳಿಂದ ಕೃತಿರಚನೆ ಮಾಡಿದರೆಂದೂ ಹೇಳಿದೆ ಇದರಿಂದ ನಾಲ್ವರು ಮಕ್ಕಳ ಹೆಸರು ಗಳು ವರದಪ್ಪ, ಗುರುರಾಯ, ಅಭಿನವ, ಮಧ್ವಪತಿಯೆಂದು ಸಂಪ್ರದಾಯದ ಎಣಿಕೆ ಈ ಹೆಸರುಗಳು ಮೇಲೆ ಕಾಣಿಸಿದ ಶಾಸನದಲ್ಲಿ ಬರುವ ಹೆಸರುಗಳಿಗಿಂತ ಬೇರೆಯಾಗಿವೆ ಯಲ್ಲವೆ? ಕಡೆಯವನಾದ ಮಧ್ವಪದಾಸನೇ ಮಧ್ವಪತಿದಾಸನೆಂದೇನೋ ಬಗೆಯ ಬಹುದು ಶಾಸನದ ಲಕ್ಷ್ಮಣದಾಸ, ಹೇಬ(ವ)ಣದಾಸರಿಗೇನು ಹೇಳುವುದು? ಹೇಬ(ವ)ಣ ಎಂಬ ಹೆಸರು ಸೋಜಿಗವಾದುದು ಬಹುಶಃ 'ಹಯವದನ' ಎನ್ನುವುದರ ಅಪಭ್ರಂಶವಿದ್ದೀತು, ಹೈವಣ ಎಂದಿದ್ದು ಹೇವ(ಬ)ಣ ಎಂದಾಯಿತೋ ಏನೋ ಇರಲಿ, ಸಂಪ್ರದಾಯದ ನಾಲ್ಕನೆಯವನೆಲ್ಲಿಂದ ಬಂದ? ಸಂಪ್ರದಾಯದಲ್ಲಿ ಇನ್ನೂ ಒಂದು ಎಣಿಕೆಯಿದೆ, ಪುರಂದರದಾಸರು ಬದುಕಿರುವಾಗಲೇ ಮೊದಲ ಮೂವರು ಮಕ್ಕಳು ತೀರಿಕೊಂಡರೆಂಬುದು ಮತ್ತೂ ಒಂದು ವಿವರದ ಸೇರ್ಪಡೆ, ಪುರಂದರದಾಸರಿಗೆ ಮಗಳೂ ಒಬ್ಬಳು ಇದ್ದಳೆಂಬುದು! ಇದಕ್ಕೆ ಎಲ್ಲಿಯ ಆಧಾರವೋ ತಿಳಿಯದು

ದಾಸಕೂಟದವರಲ್ಲಿ ಬಳಕೆಯಲ್ಲಿರುವ ಕೆಲವು ಹಾಡುಗಳಲ್ಲಿ 'ವರದಪುರಂದರ', 'ಗುರುಪುರಂದರ', 'ಅಭಿನವ ಪುರಂದರ', 'ಗುರುಮಧ್ವಪತಿ ವಿಠಲ' ಎಂಬ ಅಂಕಿತ ಗಳಿರುವುದು ಕಂಡುಬರುತ್ತದೆ ಆದರೆ ಅವೆಲ್ಲ ಪುರಂದರದಾಸರ ಮಕ್ಕಳ ಕೃತಿಗಳೆಂದು ಹೇಳಲು ಆಧಾರ ಸಾಲದು 'ಗುರುಮಧ್ವಪತಿ ವಿಠಲ'ನೆಂಬ ಅಂಕಿತವನ್ನು ಹೊತ್ತ ಎರಡು ಹಾಡುಗಳಲ್ಲಿ ಒಂದು ಪುರಂದರದಾಸರ ಬಾಳುವೆಯಲ್ಲಿ ನಡೆದದ್ದೆಂಬ ಪ್ರಸಂಗ ವನ್ನು ಕುರಿತದ್ದು 'ಕಂದಗ್ಹೇಳಿದರು ಪುರಂದರದಾಸರು' ಎಂದು ಮೊದಲಾಗುತ್ತದೆ ಇಲ್ಲಿ ಹಂಪಿಯ ಯಂತ್ರೋದ್ಧಾರ ಪ್ರಾಣದೇವರಿಗೆ ನೈವೇದ್ಯವನ್ನಿಟ್ಟು ಬಾರೆಂದು ಮಗನಾದ ತನ್ನನ್ನು ಕಳುಹಿಸಿದರೆಂದೂ, ತಾನು ಮುಗ್ಧಭಕ್ತಿಯಿಂದ ಇರಿಸಿದ ನೈವೇದ್ಯವನ್ನು ಕಲ್ಲಿನ ಹನುಮಂತನು ತಿಂದನೆಂದೂ ಒಕ್ಕಣೆಯಿದೆ ಪುರಂದರದಾಸರ ಹಿರಿಮೆಯನ್ನು ಸಾರುವುದಕ್ಕಿಂತ ಹೆಚ್ಚಾಗಿ ತನ್ನ ಹೆಗ್ಗಳಿಕೆಯನ್ನೇ ಹಾಡಿ ಹೊಗಳಿ ಕೊಂಡಿರುವ ಈ ಪದ ಎಷ್ಟರಮಟ್ಟಿಗೆ ಅಷ್ಟು ಹಳೆಯದೋ ತಿಳಿಯದು ಮತ್ತೆ ಕೋಳೂರು ಕೊಡಗೂಸಿನ ಕತೆಯ ಪ್ರಭಾವ ಎಷ್ಟರಮಟ್ಟಿಗೆ ಇದೆಯೋ? ಇನ್ನೊಂದು ಹಾಡು ಪುರಂದರದಾಸರ ಮರಣವನ್ನು ಕುರಿತದ್ದು 'ತೆರಳಿದರು ಹರಿಪುರಕಿಂದು' ಎಂದು ಮೊದಲಾಗುತ್ತದೆ ರಕ್ತಾಕ್ಷಿ ಸಂವತ್ಸರದ ಪುಷ್ಯ ಬಹುಳ ಅಮಾವಾಸ್ಯೆ ಭಾನುವಾರದಂದು 'ವಿರೂಪಾಕ್ಷ ಕ್ಷೇತ್ರದಿ' (ಎಂದರೆ ಹಂಪಿಯಲ್ಲಿ) 'ವಿಠಲನ ಸನ್ನಿಧಿಯಲಿ' (ಎಂದರೇನೋ ತಿಳಿಯದು, ವಿಜಯವಿಠಲನ ಗುಡಿಯಲ್ಲೋ?) 'ಶರೀರವನು ಇರಿಸಿ ಅನಾಥರನು ಹರಸಿ ' ಇತ್ಯಾದಿಯಾಗಿ ಶರೀರವಿತ್ತ ತಂದೆಯೂ, ಸ್ವರೂಪೋದ್ಧಾರ ಮಾಡಿದ ದೀಕ್ಷಾಗುರುವೂ, ಸರ್ವಸನ್ಮಾನ್ಯರೂ ಆಗಿದ್ದ ಪುರಂದರ

ದಾಸರು ತೀರಿಕೊಳ್ಳುವಾಗ ಹತ್ತಿರದಲ್ಲೇ ಇದ್ದ ಮಗ, ಕವಿಯೂ ಹರಿದಾಸನೂ ಆಗಿದ್ದವನು, ರಚಿಸಿರುವ ಕವಿತೆಯಂತೆ ಅದೇನು ತೋರುವುದಿಲ್ಲ ಮರಣದ ಉದಾಸೀನ ದಾಖಲೆಯಂತೆ ಸಿದ್ಧವಾದ ಈ ಕೃತಿ ಯಾರದ್ದೋ, ಯಾವಾಗ ಸಿದ್ಧವಾಯಿತೋ ಹೇಳುವುದು ಕಷ್ಟ ಆದರೆ ಪುರಂದರದಾಸರು ತೀರಿಕೊಂಡ ವರ್ಷವನ್ನು ತಿಳಿಸುವುದರಿಂದ ಈ ಹಾಡಿಗೆ ಸ್ವಲ್ಪ ಬೆಲೆಯಿದೆ

## 4

ನಾಯಕರಾಗಿದ್ದು 'ಮಡದಿಮಕ್ಕಳ ಕೂಡಿ ಸುಖದಿಂ' ಇರುತಿದ್ದು, 'ಪರಿಪರಿಯ ಸೌಖ್ಯಗಳ' ಅನುಭವಿಸುತ್ತಿದ್ದವರು 'ಜರಿದು ವೈರಾಗ್ಯವನು' ತಳೆದದ್ದು ಹೇಗೆ ? 'ಮನೆ ಧನ ಧಾನ್ಯ ವಾಹನ ವಸ್ತುಗಳನ್ನೆಲ್ಲ ತೃಣಕೆ ಬಗೆದು ಬುಧರಿಗೆ ಕೃಷ್ಣಾರ್ಪಣ'ವೆಂದದ್ದು ಹೇಗೆ ? ಇದನ್ನು ಹೇಳಲು ಮುತ್ತಿನ ಮೂಗುತಿಯ ಕತೆ ಈಗ ಎಲ್ಲರಿಗೂ ಪರಿಚಿತವಾದದ್ದಷ್ಟೆ ಈ ಕತೆಗೆ ಮೂಲ ಎಲ್ಲಿಯದು ? ದಾಸರ ಪದಗಳಲ್ಲೇನೋ ಇದರ ಸೂಚನೆಯೂ ಇಲ್ಲ, ಧ್ವನಿಯೂ ಇಲ್ಲ ಇದು ಮೊಟ್ಟ ಮೊದಲು ನಮ್ಮ ಕಣ್ಣಿಗೆ ಬೀಳುವುದು ವಿಜಯದಾಸರದ್ದೆಂದು ಹೇಳುವ 'ಬೇಸರದೆ ಭಜಿಸಿರೋ ಪುರಂದರದಾಸರ' ಎಂಬ ಹಾಡಿನಲ್ಲಿ ಇದರ ವಿಚಾರವಾಗಿ ಆಗಲಿ ಪುರಂದರದಾಸರು ಪರಮಲೋಭಿಗಳಾಗಿದ್ದರೆಂಬ ವಿಚಾರವಾಗಲಿ ವಿಜಯದಾಸರ ಇನ್ನಾವ ಕೃತಿಯಲ್ಲಿ, ಅದೇ ಕಾಲದ ಪ್ರಸನ್ನವೇಂಕಟದಾಸರ, ಜಗನ್ನಾಥದಾಸರ ಕೃತಿಗಳಲ್ಲಿ ಕಂಡುಬರುವುದಿಲ್ಲ ಈ ಕತೆ ಮೂಡಿಕೊಂಡು ಬಂದಿರುವ ಹಾಡೂ ವಿಜಯದಾಸರದ್ದೇ ಎಂದು ಖಚಿತವಲ್ಲ ಈ ಹಾಡಿನ ಹಳೆಯ ಒಂದೆರಡು ಹಸ್ತಪ್ರತಿಗಳಲ್ಲಿ 'ಕೇಶವವಿಠಲ' ಎಂಬ ಅಂಕಿತವಿರುವುದನ್ನು ಧಾರವಾಡದ ಶ್ರೀಪುರಂದರದಾಸರ 400ನೇ ಉತ್ಸವ ಸಮಿತಿಯ ಸಂಪಾದಕರು ಗಮನಿಸಿದ್ದಾರೆ (ಶ್ರೀ ಪುರಂದರದಾಸರ ಸಾಹಿತ್ಯ–6, 'ಸಂಕೀರ್ಣಸಂಗ್ರಹ', 1966, ಪು 28) ಈ ಅಂಕಿತದ ದಾಸರು 19ನೆಯ ಶತಮಾನದಲ್ಲಿದ್ದವರು , 'ಅಭಿನವಜನಾರ್ದನವಿಠಲ'ನೆಂಬ ಅಂಕಿತವುಳ್ಳ ದಾಸರ ಶಿಷ್ಯರು ಮುತ್ತಿನ ಮೂಗುತಿಯ ಕತೆಯ ಪ್ರಾಚೀನತೆ ಇಷ್ಟೇ !

ಕತೆಗೆ ಕಾಲಬಲ ಇಲ್ಲದಿದ್ದರೂ, ಅದರಲ್ಲಿ ಸ್ವಾರಸ್ಯ ಸಾಲದಾದರೂ ಪುರಂದರದಾಸರ ಹೆಸರಿನೊಂದಿಗೆ ಎಡೆಬಿಡದೆ ಹೊಂದಿಕೊಂಡು ಬಂದಿರುವುದರಿಂದ ಅದರ ಮೂಲಸ್ವರೂಪವನ್ನು ಇಲ್ಲಿ ಕಾಣಿಸಿದರೆ ತಪ್ಪಾಗದು ಮೇಲೆ ಉಲ್ಲೇಖಿಸಿದ ವಿಜಯದಾಸರದ್ದೆಂಬ ಹಾಡಿನಲ್ಲಿ ಬಂದಿರುವ ಒಕ್ಕಣೆ ಹೀಗೆ

ಪುರಂದರ ಗಡದೊಳಗೆ ಹಿರಿಯ ಸಾವುಕಾರನೆನಿಸಿ
ಪರಮ ಸೌಖ್ಯಗಳ ಸುರಿಸುತ ಇರುತಿರಲು
ನರಹರಿ ತ್ವರಿತ ಬ್ರಾಹ್ಮಣನಾಗುತ ಕರುಣದಲ್ಲಿ ಅವರನು–
ದ್ಧರಿಸಲೋಸುಗ ಮನೆಗೆ ಪೋಗುತ ಯಜಮಾನನ ಕಂಡ
ಜರಿದು ಬ್ರಾಹ್ಮಣನ ಹೊರಗೆ ಹಾಕಲು ಮರುದಿವಸ ಮತ್ತೋಗಿ
ನಿಂತ ೧

ಬಾರಿಬಾರಿಗೆ ಸಾಹುಕಾರನ ಮೋರೆಗ್ನೃತ್ತಿ ಮೋರೆಯಿಲ್ಲದೆ
ಆರು ತಿಂಗಳು ಬೆನ್ನಬೀಳಲು ನಾಯಕರೀತನ
ಆರುಬಿಟ್ಟಾರೆಂದು ಬೈಯುತ ಬೇಸತ್ತು ಎರಡು
ಹೇರು ರೊಕ್ಕ ಮುಂದೆ ಸುರಿಯುತ 'ಅದರೊಳಗೊಂದು ದಂ–
ಡ್ಡಾರಿಸಿಕೊ' ಎಂದು ಪೇಳಲು ನಾರಾಯಣ ಬಿಟ್ಹೋದ
ನಗುತ ೨

ಹಿತ್ತಲಾ ಬಾಗಿಲಿಗೆ ಹೋಗಿ ಮತ್ತವನ ಮಡದಿಗಾಗಿ
ಹತ್ತಿಬಿದ್ದನು 'ವಿತ್ತ ತಾ' ಎನುತ ತನ ಮಗನ ಮುಂಜೆಂ–
ದೆತ್ತಿ ಕರವನು ಬಾಯಿ ತೆರೆಯುತಲಾ ಪ್ರಾಣಿ ನುಡಿದಳು
'ಎತ್ತಣ ದ್ರವ್ಯವು ತನಗೆ'ನುತ 'ನಿನ್ನ ಮೂಗಿನ
ಮುತ್ತಿನಾ ಮೂಗುತಿಯ ಕೊಡು' ಎನೆ ಉತ್ತಮಳು
ತೆಗೆದಿತ್ತಳಾಕ್ಷಣ ೩

ಜೋಕೆಯಿಂ ಮೂಗುತಿಯನೊಯ್ದು ಆಕೆ ಗಂಡನ ಕಣ್ಣೆದುರಿ–
ಗ್ಹಾಕಿದನು 'ತಾಪಾಕಿ ಕೊಡು' ಎನುತ, ಅದ ಕಂಡು 'ಇದು ನ–
ಮ್ಮಾಕೆಯದೆಂ'ದು ಈತ ನುಡಿಯುತ್ತ 'ಅನ್ಯರದು ಇಂಥಾ–
ದ್ದಾಕಿರಬಾರದೇ' ಎನ್ನುತ್ತ 'ಬೆಲೆ ಹೇಳು' ಎನಲು
'ನಾಕು ನೂರಕು ಪಾಕಿ ಕೊಡು' ಎಂದ್ಹಾಕೆ ಹೋದನು ತಿರುಗಿ
ಬಾರದಲೆ ೪

ತಿರುಗಿ ಬ್ರಾಹ್ಮಣ ಬಾರದಿರಲು ಕರೆದು ತನ್ಹೆಂಡತಿಯ
ಬರಿಯ ನಾಸಿಕವನ್ನೆ ಕಂಡನು 'ಮೂಗುತಿಯು ಎಲ್ಲೆ'ನೆ
'ಮುರಿದಿಹುದೆಂ'ದಾಕೆ ಪೇಳಲು 'ಒಳಗ್ಹೋಗಿ ನೀ ತಾರದಿರೆ
ಅರೆವೆ ನಿನ್ನಯ ಜೀವವನೆ'ನ್ನಲು 'ವಿಷ ಕೊಂಬೆನೆಂ'ದು
ಕರದಿ ಬಟ್ಟಲ ಧರಿಸಲಾಕ್ಷಣ ತ್ವರಿತ ಹರಿ ಅದರೊಳ್ಹಾಕಿದ ೫

ಹರುಷದಿ ಮೂಗುತಿಯನೊಯ್ದು ಪುರುಷನ ಕೈಯೊಳಗೆ ಇಡಲು
ತರಿಸಿ ತನ್ನಲಿದ್ದ ಪೆಟ್ಟಿಗೆಯ, ಅದರಲಿ ಕಾಣದಿರಲು
ಬೆರಗಾಗಿ ನೋಡಿದನು ಮಡದಿಯ 'ನಿಜ ಪೇಳು' ಎಂದೆನಲು
ಅರಸಿ ಪೇಳ್ದಳು ಕೊಟ್ಟ ಸುದ್ದಿಯ, ಅಭಿಮಾನಕಂಜಿ
ಅರೆದು ವಿಷವ ಕುಡಿವೆನೆನಲು ಸಿರಿರಮಣ ತಾ ಕೊಟ್ಟ ಖರೆಯು ೬

'ದೇವದೇವನು ಎನ್ನ ಮನದ ಭಾವವನು ತಿಳಿವುದಕೆ
ತಾ ವೃದ್ಧಬ್ರಾಹ್ಮಣನಾಗಿ ಬಂದಿದ್ದ, ಪರಿಪಕ್ವವೆನಗಿ–
ನ್ನ್ಯಾವ ಕಾಲಕೆ ಆಗಬೇಕೆಂ'ದು ವೈರಾಗ್ಯಭಾವದಿ
ಜೀವಿಸಿಕೊಂಡಿರುವುದೇ ಚಂದ' ಹೀಗೆನುತ ಮನೆ ಧನ
ಕೋವಿದರ ಕರೆದಿತ್ತ ಹರುಷದಿ ಕಾವನಯ್ಯನ ದಾಸನಾದ ೭

ಕತೆಯಲ್ಲಿರಬಹುದಾದ(!) ಸ್ವಾರಸ್ಯವನ್ನೂ ಹಾಡಿನಲ್ಲಿರಬಹುದಾದ ಸೊಗಸನ್ನೂ ನಿರೂಪಣೆಯಲ್ಲಿರಬಹುದಾದ ಸೌಂದರ್ಯವನ್ನೂ ಭಾವುಕರಾದ ವಿಮರ್ಶಕರು ಪರಿಶೀಲಿಸಬೇಕು ! ಈ ಹಾಡನ್ನು ವಿಜಯದಾಸರ ಮಡಿಲಿಗೆ ಹಾಕಿದರೆ ವಿಜಯದಾಸರ ಕವಿತಾಚಾತುರ್ಯಕ್ಕೆ ಬೆಲೆ ಬಾರದು ! ಇರಲಿ, ಇದು ಕತೆಯ ಮೂಲಪಾಠ ಮುಂದೆ ಇದು ಬಗೆಬಗೆಯಾಗಿ ಮಾರ್ಪಟ್ಟುದೂ ಉಂಟು , ಪವಾಡಕ್ಕೆ ಮನಸೋಲದ ಬುದ್ಧಿವಂತರು ಅದಕ್ಕೆ ಯುಕ್ತಿಯುಕ್ತವಾದ ಕವಚವನ್ನು ತೊಡಿಸಿರುವುದೂ ಉಂಟು ಕತೆಗೆ ದಿಕ್ಕು ಕಾಣಿಸಲು ಪುರಂದರದಾಸರ ಅಂಕಿತದಿಂದ 'ಎತ್ತ ಹೋದನಮ್ಮಾ, ವಿಪ್ರನ ಎತ್ತ ಹುಡುಕಲಮ್ಮಾ ?' ಎಂಬ ಪದವನ್ನು ಹೊರಡಿಸಿರುವುದೂ ಇದೆ !

ಈ ವಿಚಾರವನ್ನು ಇಷ್ಟಕ್ಕೆ ಕೈಬಿಡೋಣ ಕತೆಯ ವಾಸ್ತವಿಕತೆ ಏನೇ ಇರಲಿ, ದಾಸರ ವಿರಕ್ತಿಗೆ ಕಾರಣ ತಮ್ಮ ಹೆಂಡತಿಯ ವ್ಯಕ್ತಿತ್ವದ ಹಿರಿಮೆ ಎಂಬುದನ್ನು ದಾಸರೇ ನಿರೂಪಿಸಿರುವುದಿದೆ ವಿರಕ್ತಿಗೆ ಮೊದಲು ದಾಸರು ಜಿಪುಣರಾಗಿದ್ದರೋ ಇಲ್ಲವೋ, ಅವರಲ್ಲಿ ದೈವಭಕ್ತಿ ಇದ್ದಿತೋ ಇಲ್ಲವೋ, ಆಧ್ಯಾತ್ಮಿಕ ಪ್ರವೃತ್ತಿಯಂತೂ ಇರಲಿಲ್ಲವೆಂದು ವಿಜಯದಾಸರ ಹೇಳಿಕೆಯೇ ಇದೆ ಪ್ರಾಪಂಚಿಕಭೋಗದಲ್ಲೇ ತೊಡಗಿದ್ದವರು ಇದ್ದಕ್ಕಿದ್ದಂತೆ ಪಾರಮಾರ್ಥಿಕ ಹಂಬಲವನ್ನು ಹಿಡಿದರು ಈ ಪರಿವರ್ತನೆ ಅವರ ಮನಸ್ಸಿಗೇ ಸೋಜಿಗವೆನಿಸಿದ್ದಿರಬೇಕು ಅದನ್ನು ವಿಶ್ಲೇಷಣೆ ಮಾಡಿದಾಗ ಹೆಂಡತಿಯ ಪ್ರಭಾವ ಮನದಟ್ಟಾಯಿತೆಂದು ತೋರುತ್ತದೆ 'ಆದದ್ದೆಲ್ಲ ಒಳಿತೇ ಆಯಿತು' ಎಂದು ಮೊದಲಾಗುವ ಪೂರ್ವೀರಾಗದ ಪದವೊಂದರಲ್ಲಿ ಇದನ್ನು ಕಾಣಬಹುದು—

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾಸಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ ೧

ಗೋಪಾಳ ಬುಟ್ಟಿ ಹಿಡಿಯುವುದಕ್ಕೆ
ಭೂಪತಿಯಂತೆ ನಾಚುತಲಿದ್ದೆ
ಆ ಪತ್ನಿಯು ತಾ ಪ್ರೀತಿಯಿಂದಲಿ
ಗೋಪಾಳಬುಟ್ಟಿಯ ಹಿಡಿಸಿದಳಯ್ಯ ೨

ತುಳಸೀಮಾಲೆಯ ಹಾಕುವುದಕ್ಕೆ
ಅಲಸಿಕೊಂಡು ನಡೆಯುತಲಿದ್ದೆ
ಜಲಜಾಕ್ಷಿಯು ಶ್ರೀ ಪುರಂದರ ವಿಠಲನ
ತುಳಸೀಮಾಲೆಯ ಹಾಕಿಸಿದಳಯ್ಯ ೩

ದಂಡಿಗೆ-ಬೆತ್ತವೆಂದರೆ ಹರಿದಾಸರು ಬಳಸುತ್ತಿದ್ದ ತಂತೀವಾದ್ಯ ಅದನ್ನು ನುಡಿಸುತ್ತ, ಹಾಡುತ್ತ ನಡೆಯುವರು ಗೋಪಾಳಬುಟ್ಟಿಯೆಂದರೆ ಎಡಭುಜದಿಂದ ಇಳಿಬಿದ್ದ ಭಿಕ್ಷಾಪಾತ್ರೆ (ಬಿದಿರಿನ ಬುಟ್ಟಿ), ಹಾಡುತ್ತ ಬೀದಿಯಲ್ಲಿ ನಡೆಯುತ್ತಿರುವಾಗ, ಮನೆಗಳ ಮುಂದೆ ಹೆಂಗಸರು ಹಿಡಿ ಅಕ್ಕಿಯನ್ನು ಆ ಪಾತ್ರೆಯೊಳಗೆ ಸುರಿಯುವರು ತುಳಸೀ ಮಾಲೆ ಹರಿದಾಸದೀಕ್ಷೆಯ ಪ್ರತೀಕ ಬಡತನದಲ್ಲೇ ಉಳಿದು, ಅಂದಂದಿನ ಕೂಳನ್ನು ಆಗಾಗ ಗಳಿಸಿ, ನಾಳೆಗೆಂದು ಏನನ್ನೂ ಇಡದೆ, ಸಾಲದೆಂದು ಕರುಬದೆ, ಬಂದದ್ದರಲ್ಲಿ ತೃಪ್ತರಾಗಿ, ಸಂತೋಷದಿಂದ ಹರಿಭಜನೆ ಮಾಡುತ್ತ ಬಾಳನ್ನು ಕಳೆಯುವುದೇ ಹರಿದಾಸ ದೀಕ್ಷೆ ದಾಸರು ವಿರಕ್ತರಾದ ಮೇಲೆ ಒಲಿದು ನಡೆಸಿಕೊಂಡು ಬಂದ ಬದುಕಿನ ಬಗೆಯ ಚಿತ್ರಣವೂ ಇಲ್ಲಿದೆ

ವಿರಕ್ತಿ ಒದಗಿದಮೇಲೆ ಹಂಪಿಗೆ ಬಂದದ್ದು, ಅಲ್ಲಿ ವ್ಯಾಸರಾಯಸ್ವಾಮಿಗಳ ದರ್ಶನವಾದದ್ದು, ಅವರಿಂದ ಹರಿದಾಸದೀಕ್ಷೆ ಪಡೆದುಕೊಂಡದ್ದು ಗಟ್ಟಿಯಾದ ವಿವರ ಗಳು ಪ್ರಾಚೀನ ಆಕರಗಳೆಲ್ಲ ಇವನ್ನು ಸಮರ್ಥಿಸುತ್ತವೆ , ಪುರಂದರದಾಸರ ಪದ ಗಳಲ್ಲಿಯೂ ಇವು ಸ್ಪಷ್ಟವಾಗಿಯೇ ಮೂಡಿಬಂದಿವೆ ಸುಳಾದಿಯೊಂದರಲ್ಲಿ

ವ್ಯಾಸರಾಯರ ಚರಣಕಮಲ ದರುಶನವೆನಗೆ
ಏಸುಜನ್ಮದ ಸುಕೃತಫಲದಿ ದೊರಕಿತೋ
ಎನ್ನ ಸಾಸಿರ ಕುಲಕೋಟಿ ಪಾವನ್ನವಾಯಿತು

ಶ್ರೀಶನ ಭಜಿಸುವುದಕಧಿಕಾರಿ ನಾನಾದೆ
ದೋಷರಹಿತನಾದ ಪುರಂದರ ವಿಠಲನ
ದಾಸರ ಕರುಣವು ಎನ್ನ ಮೇಲೆ ಇರಲಾಗಿ

ಮತ್ತು

ಗುರುವ್ಯಾಸರಾಯರ ಚರಣವೆನಗೆ ಗತಿ
ಪುರಂದರವಿಠಲನ ಅರಿತೆ ಇವರಿಂದ

ಎನ್ನುವ ಒಕ್ಕಣೆಗಳಿವೆ ಮತ್ತೆ ತಮಗೆ 'ಪುರಂದರ ವಿಠಲ'ನೆಂಬ ಅಂಕಿತವು ಅವರಿಂದ ದೊರೆತದ್ದನ್ನೂ ಇದೇ ಸುಳಾದಿಯಲ್ಲಿ ಕಾಣಿಸಿದ್ದಾರೆ

ಅಂಕಿತವಿಲ್ಲದ ದೇಹ ನಿಷೇಧ
ಅಂಕಿತವಿಲ್ಲದ ಕಾವ್ಯ ಶೋಭಿಸದು
ಅಂಕಿತವಿಲ್ಲದೆ ಇರಬಾರದೆಂದು ಚ
ಕ್ರಾಂಕಿತವನು ಮಾಡಿ ಎನ್ನಂಗಕೆ
ಪಂಕಜನಾಭ ಶ್ರೀಪುರಂದರ ವಿಠಲನ
ಅಂಕಿತವೆನಗಿತ್ತ ಗುರುವ್ಯಾಸಮುನಿರಾಯ

ದಾಸರು ಮೊದಲಿಗೆ ಭಾಗವತ ಸಂಪ್ರದಾಯದ ವೈಷ್ಣವರಾಗಿದ್ದರೆಂದೂ, ವ್ಯಾಸರಾಯರಿಂದ ಅವರಿಗೆ ತಪ್ತಮುದ್ರಾಂಕನ, ಮೂಲಮಂತ್ರೋಪದೇಶ, ಹರಿ ದೀಕ್ಷೆ, ಕಾವ್ಯಾಂಕಿತಗಳು ದೊರೆತು ಮಾಧ್ವವೈಷ್ಣವ ಗೃಹಸ್ಥರಾದರೆಂದೂ ಹರಿದಾಸ ಪಂಥದಲ್ಲಿ ನಂಬಿಕೆ ಈ ವಿಚಾರವಾಗಿ ಸ್ವಲ್ಪ ಪರಿಶೀಲನೆಯ ಅಗತ್ಯವಿದೆ ಪುರಂದರ ದಾಸರು ಎಳೆತನದಲ್ಲಿ ಇದ್ದಿರಬಹುದಾದ ಪ್ರದೇಶದಲ್ಲಿ ಭಕ್ತಿಪಂಥ ಹರಡಲು ಮುಖ್ಯ ವಾಗಿ ಮರಾಠೀ ಸಂತರು ಕಾರಣವಾಗಿದ್ದರು ಅವರೊಂದಿಗೆ ಮಹಾನುಭಾವ ಪಂಥದ ಪ್ರಾಬಲ್ಯವೂ ಆ ಕಡೆ ಇದ್ದಿತು ಸೌರಾಷ್ಟ್ರದ ಚಕ್ರಧರನೆಂಬ ಸಂತನು (ಜನ್ಮ 1153ರಲ್ಲಿ) ಸ್ಥಾಪಿಸಿದ ಈ ಪಂಥವು ಉತ್ತರ ಕರ್ನಾಟಕ, ಮಹಾರಾಷ್ಟ್ರ, ವರಹಾಡ, ಗುರ್ಜರ ಇಲ್ಲೆಲ್ಲ ಪ್ರಭಾವವನ್ನು ಬೀರಿತು ಇದನ್ನು 'ಅಚ್ಯುತ ಪಂಥ' ವೆಂದು ಕರೆಯುವುದೂ ಇದೆ ಇದರ ಪ್ರಭಾವವನ್ನು ಮರಾಠೀ ಸಂತರೂ (ಅವರಲ್ಲೂ ಜ್ಞಾನದೇವ) ಮೂಡಿಸಿಕೊಂಡರು ವೈದಿಕ ಚೌಕಟ್ಟಿನಲ್ಲೇ ಇವರ ಧರ್ಮ, ಕರ್ಮ, ಆಚಾರ, ವಿಚಾರಗಳೆಲ್ಲ ಸಿದ್ಧವಾದರೂ ವರ್ಣಾಶ್ರಮ ವೈವಿಧ್ಯದ ಕಡೆ ಇವರು ಅಷ್ಟಾಗಿ ಗಮನ ಹರಿಸುವುದಿಲ್ಲ , ವೈದಿಕ ಕರ್ಮಠರ ಮಡಿವಂತಿಕೆಯನ್ನು ಇವರು ಪುರಸ್ಕರಿಸುವುದಿಲ್ಲ ಧಾರ್ಮಿಕ ವಿಚಾರಗಳಲ್ಲೂ ದಿನನಿತ್ಯದ ವ್ಯವಹಾರದಲ್ಲೂ ಗಂಡಸರಿಗೂ ಹೆಂಗಸರಿಗೂ ಸಮಾನಾಧಿಕಾರವೇ ಈ ಪಂಥದ ಮುಖ್ಯ ವಿವರವೆಂದರೆ

ಕೃಷ್ಣಭಕ್ತಿ , ಭಗವದ್ಗೀತೆ, ಭಾಗವತ ಎರಡೂ ಇವರಿಗೆ ತುಂಬ ಆದರಣೀಯವಾದ ಗ್ರಂಥಗಳು ಇವರು ಪ್ರೋತ್ಸಾಹಿಸಿದ ಭಾಗವತ ಧರ್ಮ ಈ ಪ್ರದೇಶದಲ್ಲಿ ಬೇರೂರಿದ ಮೇಲೆ ವಿಟ್ಠಲನ ಉಪಾಸನೆಗೆ ವಿಶೇಷವಾದ ಒತ್ತು ದೊರಕಿತು ಹದಿಮೂರನೆಯ ಶತಮಾನದ ವೇಳೆಗೆ ಈ ಪ್ರದೇಶದಲ್ಲಿ ಮಹಾನುಭಾವ ಪಂಥ, ಭಾಗವತಧರ್ಮ, ವಿಟ್ಠಲ ಭಕ್ತಿ ಇವು ಹರಡಿಕೊಂಡಿದ್ದುವು ಈ ಮೂರಕ್ಕೂ ವಿರೋಧವಿಲ್ಲದೆ ಮಧ್ವಾಚಾರ್ಯರು ಏರ್ಪಡಿಸಿದ ವೈಷ್ಣವಸಂಪ್ರದಾಯ ತಲೆ ಎತ್ತಿಕೊಳ್ಳುತ್ತಿತ್ತು

ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾದ ಹಂಪಿಯಲ್ಲಿ ಯಾವೊಂದು ನಿರ್ದಿಷ್ಟ ಧಾರ್ಮಿಕ ಪಂಗಡಕ್ಕೆ ಪುರಸ್ಕಾರವಿದ್ದಿತೆಂದು ಹೇಳಬರುವುದಿಲ್ಲ ಆಡಳಿತದ ಅಥವಾ ಅರಸರ ದೃಷ್ಟಿಯಲ್ಲಿ ಮತನಿಷ್ಠೆ, ಧರ್ಮಭೇದಗಳು ಯಾವ ಕಾಲಕ್ಕೂ ಹಿತವಲ್ಲ ವಿಜಯನಗರದ ಸಾಮ್ರಾಜ್ಯದ ಮೊದಲ ಅವಧಿಯಲ್ಲಿ ಶಂಕರಾಚಾರ್ಯರ ಸಂಪ್ರದಾಯವನ್ನು ಹಿಡಿದ ವಿದ್ಯಾರಣ್ಯರ ಪ್ರಭಾವವಿದ್ದಿತು , ಪಾಶುಪತ ಪ್ರಕ್ರಿಯೆಯ ಕ್ರಿಯಾಶಕ್ತಿಗುರುಗಳ ಪ್ರಭಾವವಿದ್ದಿತು ಅನಂತರ ರಾಮಾನುಜಾ ಚಾರ್ಯರ ಸಂಪ್ರದಾಯದಲ್ಲಿ ಬಂದ ತಾತಾಚಾರ್ಯ ಸ್ವಾಮಿಗಳ ಪ್ರಭಾವ ಹೆಚ್ಚಿತು, ಮಾಧ್ವಸಂಪ್ರದಾಯದ ಶ್ರೀಪಾದತೀರ್ಥರ, ವ್ಯಾಸತೀರ್ಥರ ಪ್ರಭಾವವೂ ಇದ್ದಿತು ಪುರಂದರದಾಸರ ಕಾಲದಲ್ಲಿಯೇ ಇದ್ದ ಕೃಷ್ಣದೇವರಾಯ ಮಹಾರಾಯ ಸ್ವಂತನಿಷ್ಠೆಯಲ್ಲಿ ಶ್ರೀ ವೈಷ್ಣವ , ರಾಜಗುರುಗಳು ತಾತಾಚಾರ್ಯರೇ ಆದರೆ ಮಾಧ್ವ ಸಂನ್ಯಾಸಿಗಳಾದ ವ್ಯಾಸತೀರ್ಥರಲ್ಲೂ ಅವನಿಗೆ ತುಂಬ ಗೌರವಾದರಗಳು ಪುರಂದರ ದಾಸರು ವಿರಕ್ತಿಯನ್ನು ತಳೆದು ಹಂಪಿಗೆ ಬಂದಾಗ ವ್ಯಾಸತೀರ್ಥರ ಬಳಿಯೇ ಹೋದುದರ ಹಿನ್ನೆಲೆ ತಿಳಿಯುವುದಿಲ್ಲ ಅಂತೂ ಹಾಗೆ ಹೋದಾಗ ಅವರಿಗೆ ಒದಗಿದ ದೀಕ್ಷೆ ಮಾಧ್ವಸಂಪ್ರದಾಯದ್ದೇ ಎನ್ನುವುದೇನೋ ಸಹಜವೇ ಮೊದಲಿಗ ಭಾಗವತ ಸಂಪ್ರದಾಯದವರಾಗಿದ್ದುದರಿಂದ ದ್ವಾದಶನಾಮಗಳ ಧಾರಣೆ, ತುಳಸೀಮಣಿಯ ಮಾಲೆ, ಚಂದನದ ಬಳಕೆ, ಹರಿನಾಮ ದೀಕ್ಷೆ ಇವೆಲ್ಲ ಮೊದಲೇ ಇದ್ದಿರಬೇಕು , ತಪ್ತಮುದ್ರಾಂಕನವೂ ಅಂಕಿತವೂ ಮಾಧ್ವರಾದದ್ದರ ಕುರುಹು

## 5

ವ್ಯಾಸತೀರ್ಥರು (ವಿಜಯನಗರದ ಅರಸರ ಆದರವನ್ನು ಪಡೆದುಕೊಂಡರಾಗಿ ಇವರನ್ನು ವ್ಯಾಸರಾಯರು ಅಥವಾ ವ್ಯಾಸರಾಜರು ಎಂದೂ ಕರೆಯುವುದು ವಾಡಿಕೆ) 1441ರಲ್ಲಿ (ಅಥವಾ 1478ರಲ್ಲಿ, ಇದು ಬಿ ವೆಂಕೋಬರಾಯರ ಎಣಿಕೆ) ಹುಟ್ಟಿ, ಬ್ರಹ್ಮಣ್ಯತೀರ್ಥರೆಂಬುವರ ಬಳಿ ಶಿಕ್ಷಣವನ್ನು ಪಡೆದು, ಮುಳುಬಾಗಿಲಿನಲ್ಲಿ ಶ್ರೀಪಾದ ರಾಜರೆಂಬ ಸುಪ್ರಸಿದ್ಧ ಮಾಧ್ವಯತಿಗಳಲ್ಲಿ (ತೀರಿಕೊಂಡ ವರ್ಷ 1480) ಶಿಷ್ಯವೃತ್ತಿ

ಮಾಡಿ, ವಿಜಯನಗರ ಅರಸರ ಸಾಮಂತ ಸಾಳುವ ನರಸಿಂಹನ ಕರೆಯನ್ನು ಮನ್ನಿಸಿ ಚಂದ್ರಗಿರಿಗೆ 1476ರ ಸುಮಾರಿಗೆ ಹೋದರು ಕೃಷ್ಣದೇವರಾಯ ಮಹಾರಾಯನು ಇವರ ವ್ಯಕ್ತಿತ್ವದಿಂದ ಆಕರ್ಷಿತನಾಗಿ ಅವರನ್ನು ಹಂಪಿಯಲ್ಲೇ ಇರಿಸಿಕೊಂಡನು ಅವನಿಗೆ ಮಾರಕವಾಗಿ ಒದಗಿದ್ದ ಕುಹೂಯೋಗವನ್ನು ಇವರು ಪರಿಹರಿಸಿದರೆಂದು ಪ್ರತೀತಿ ಇವರು ಕರ್ನಾಟಕ ಪ್ರಾಂತ್ಯದಲ್ಲೆಲ್ಲ ಸಂಚರಿಸಿ ಭಾಗವತ ಧರ್ಮವನ್ನು ವಿಶೇಷವಾಗಿ ಪ್ರಚಾರ ಮಾಡಿದರು ಅವರ ಶಿಷ್ಯರಲ್ಲಿ ರಾಘವೇಂದ್ರಸ್ವಾಮಿಗಳ ಪರಮಗುರುಗಳಾದ ವಿಜಯೀಂದ್ರತೀರ್ಥರು (1514–1595), ಪ್ರಾಸಾದಿಕಗುರುಗಳೂ ಗ್ರಂಥಕರ್ತರೂ ವಿದ್ವಾಂಸರೂ ಆದ ಉಡುಪಿಯ ವಾದಿರಾಜಸ್ವಾಮಿಗಳು (1480–1600), ಬಂಗಾಳದ ಕೃಷ್ಣಚೈತನ್ಯರ ಪೂರ್ವಸೂರಿಗಳಾದ ಲಕ್ಷ್ಮೀತೀರ್ಥರು, ಪುರಂದರದಾಸರು, ವೈಕುಂಠದಾಸರು, ಕನಕದಾಸರು ಸೇರಿದ್ದಾರೆ ಅವರು ತೀರಿಕೊಂಡದ್ದು 1539ರಲ್ಲಿ, ವಿಳಂಬಿ ಸಂವತ್ಸರದ ಫಾಲ್ಗುಣ ಬಹುಳ ಚವುತಿ ಸ್ಥಿರವಾರದಲ್ಲಿ, ಎಂದರೆ ಮಾರ್ಚ್ ಎಂಟರಂದು

ಇವರನ್ನು ಕುರಿತು ಪುರಂದರದಾಸರು ಸುಳಾದಿಯೊಂದನ್ನು ರಚಿಸಿ ಅವರ ವ್ಯಕ್ತಿತ್ವದ ಹಿರಿಮೆಯನ್ನೂ, ಸಾಧನೆಯ ಮುಖಗಳನ್ನೂ ವಿವರಿಸಿದ್ದಾರೆ

ಶೇಷಾವೇಷ ಪ್ರಹ್ಲಾದನವತಾರವೆನಿಸಿದ
ವ್ಯಾಸರಾಯನೆಂಬ ಪೆಸರು ನಿನಗೆಂದಂತೆ
ದೇಶಾಧಿಪಗೆ ಬಂದ ಕುಹುಯೋಗವನು ನೂಕಿ
ನೀ ಸಿಂಹಾಸನವನೇರಿ ಮೆರೆದೆ ಜಗವರಿಯೆ
ವ್ಯಾಸಾಬ್ಧಿಯನು ಬಲಿಸಿ ಕಾಶಿದೇಶದೊಳೆಲ್ಲ
ಭಾಸುರ ಕೀರ್ತಿಯನು ಪಡೆದೆ ನೀ ಗುರುರಾಯ
ವಾಸುದೇವ ಪುರಂದರವಿಠಲನ ದಾಸರೊಳು
ಲೇಶ ನಿನ್ನಂತೆ ವೆಗ್ಗಳರ ಕಾಣೆ ನಾನು

ಸಿರಿನಾರಾಯಣಯೋಗಿ ಶ್ರೀಪಾದರಾಯರಲ್ಲಿ
ವರವಿದ್ಯಾಭ್ಯಾಸವ ಮಾಡಿದೆ ನೀನು
ಧರೆಯೊಳು ವಿಜಯೀಂದ್ರ ವಾದಿರಾಜರೆಂಬ
ಪರಮಶಿಷ್ಯರ ಪಡೆದು ಮೆರೆದೆ ಕೀರುತಿಯ

ವರಮಧ್ವಮತವೆಂಬ ಸಾಗರದೊಳು ಆವ
ತರಿಸಿದೆ ಪೂರ್ಣಚಂದ್ರಮನಂತೆ ನೀನು
ಧರೆಯೊಳು ಬ್ರಹ್ಮಣ್ಯರ ಕುವರನೆಂದೆನಿಸಿದೆ ನೀನು

ಪುರಂದರ ವಿಠಲನ ಕರುಣವ ಪಡೆದೆ
ಕರುಣಾಕರನವ ಪರನೆಂದು ಅರುಹಲು
ದುರಿತಗಳೆಲ್ಲವ ಪರಿಹರಿಸಿಕೊಂಡೆ ನಾನು

ವ್ಯಾಸತೀರ್ಥರ ಬಳಿ ಪುರಂದರದಾಸರು ಕೆಲಕಾಲ ಉಳಿದುಕೊಂಡು ಅವರಿಂದ ಉಪದೇಶವನ್ನು ಪಡೆದುಕೊಂಡರೆಂದು ವಿಜಯದಾಸರ ಪದವೊಂದು ತಿಳಿಸುತ್ತದೆ

'ವಾಸವನೆ ಮಾಡಿದರು ಪ್ರಹ್ಲಾದನವತಾರ
ವ್ಯಾಸರಾಯರ ಬಳಿಯೆ ಮುದ್ರೆ ಗುರುಮಂತ್ರ ಉಪ-
ದೇಶವನು ಕೊಂಡು ವೈಷ್ಣವರಾಗಿ ಪುರಂದರ-
ದಾಸರೆಂಬುವ ಪೆಸರಲಿ'

ವ್ಯಾಸತೀರ್ಥರಿಂದ ಮಂತ್ರೋಪದೇಶ—ಅಂಕಿತಗಳನ್ನು ಸ್ವೀಕರಿಸಿದನಂತರ ಕೃತಿರಚನೆಗೆ ತೊಡಗಿದರೆಂದು ಜಗನ್ನಾಥದಾಸರ ಪದವೊಂದರ ಒಕ್ಕಣೆ

'ವ್ಯಾಸರಾಯರಲಿ ಭಾಸುರಮಂತ್ರೋಪ
ದೇಶವನು ಕೊಂಡು ರಮೇಶನನೊಲಿಸಿದೆ

ಪ್ರಾಕೃತಭಾಷೆಯಲಿ ನೀ ಕೃತಿ ಪೇಳಿ ಅ
ಪ್ರಾಕೃತ ಹರಿಯಿಂದ ಸ್ವೀಕೃತ ನೀನಾದೆ

ಆದರೆ ಹಂಪಿಯಲ್ಲೇ ಎಲ್ಲಕಾಲವೂ ನೆಲೆಸದೆ ಹರಿದಾಸರಾಗಿ ಊರೂರು ತಿರುಗಲು ಮೊದಲಿಟ್ಟರು, ಹೋದೆಡೆಯಲ್ಲೆಲ್ಲ ಧರ್ಮಪ್ರಚಾರ, ಕೃತಿರಚನೆಗಳು ನಡೆದುವು ವಿಜಯದಾಸರ ಪದದಲ್ಲಿ

ದೇಶವನೆ ತಿರುಗಿ ಪುಣ್ಯಕ್ಷೇತ್ರಗಳ ಮೆಟ್ಟಿ
ಲೇಸಾಗಿ ಅಲ್ಲಿದ್ದ ಮಹಿಮೆಗಳ ಪೇಳಿ ದು
ರಾಶೆಯನು ತೊರೆದು ವಿಟ್ಠಲನ ಸನ್ನಿಧಿಯಲ್ಲಿ
ವಾಸವಾದರು ಧರ್ಮನಡತೆಯಲ್ಲಿ

ಎಂದು ಹೇಳಿರುವುದರಿಂದ, ಕಡೆಗಾಲದಲ್ಲಿ ಮತ್ತೆ ಹಂಪಿಗೆ ಹಿಂದಿರುಗಿದರೆಂದು ಭಾವಿಸಬೇಕು

ವ್ಯಾಸತೀರ್ಥರನ್ನು ಪುರಂದರದಾಸರು ಕಂಡದ್ದು ಎಂದು ಎಂಬ ವಿಚಾರ ಸ್ಪಷ್ಟವಾಗುವುದಿಲ್ಲ ಆದರೆ ಕೆಲವು ವಿವರಗಳು ಇದನ್ನು ನಿರ್ಧರಿಸಲು ಅಷ್ಟಿಷ್ಟು ನೆರವಾಗುತ್ತವೆ ಪುರಂದರದಾಸರು ಹಂಪಿಗೆ ಬಂದಾಗ ವ್ಯಾಸರಾಯರು ಅಲ್ಲಿಯೇ ಇರು

ತ್ತಿದ್ದರು , ಕೃಷ್ಣದೇವರಾಯನು ಅರಸನಾಗಿದ್ದ ಕೃಷ್ಣದೇವರಾಯನ ಅಧಿಕಾರದ ಅವಧಿ 1509 ರಿಂದ 1530 ರವರೆಗೆ ವ್ಯಾಸತೀರ್ಥರು ಚಂದ್ರಗಿರಿಗೆ ಬಂದದ್ದು ಸಾಳುವ ನರಸಿಂಹನ ಕಾಲದಲ್ಲಿ, 1476ರಲ್ಲಿ ಅನಂತರ 1500ರ ಸುಮಾರಿಗೆ ದೇಶ ಸಂಚಾರವನ್ನು ಕೈಗೊಂಡು ಕನ್ನಡನಾಡಿನಲ್ಲಿ 732 ಹನುಮಂತನ ಶಿಲಾ ಮೂರ್ತಿ ಗಳನ್ನು ಪ್ರತಿಷ್ಠೆ ಮಾಡಿದರೆಂದು ಪ್ರತೀತಿಯಿದೆ ಅವರು ಹಂಪಿಗೆ ಬಂದದ್ದು ಕೃಷ್ಣದೇವರಾಯನು ಪಟ್ಟಕ್ಕೆ ಬಂದ ಮೇಲೆ ಇರಬೇಕು ಕೃಷ್ಣದೇವರಾಯನಿಗೆ 1521ರಲ್ಲಿ ಒದಗಿದ ಕುಹೂಯೋಗವನ್ನು ಇವರು ಪರಿಹರಿಸಿದರೆಂಬ ಪ್ರತೀತಿ ಬಲ ವಾಗಿದೆ , ಇದನ್ನು ಪುರಂದರದಾಸರೂ ಪ್ರಸ್ತಾಪಿಸಿದ್ದಾರೆ ಸೋಮನಾಥನ 'ವ್ಯಾಸ ಯೋಗಿ ಚರಿತೆ'ಯೆಂಬ ಸಂಸ್ಕೃತ ಕಾವ್ಯ ಗ್ರಂಥದಲ್ಲೂ ಇದರ ಉಲ್ಲೇಖವಿದೆ ಆದರೆ ಇದು ಎಷ್ಟು ಐತಿಹಾಸಿಕವೋ ತಿಳಿಯದು ಎಂದಮೇಲೆ ಆ ಕಾಲದಲ್ಲಿ ಅವರು ಹಂಪಿ ಯಲ್ಲೇ ಇದ್ದಿರಬೇಕು 1526ರ ಫೆಬ್ರುವರಿ 24 ರಂದು ಕಮಲಾಪುರದ ತಾಮ್ರ ಶಾಸನ ಹೊರಟದ್ದು , ಈ ಮೊದಲೇ ಪ್ರಸ್ತಾಪಿಸಿದಂತೆ ಕೃಷ್ಣದೇವರಾಯನು ತಮಗೆ ಕೊಟ್ಟ ಭೂಮಿಯನ್ನು ವ್ಯಾಸತೀರ್ಥರು ಹಲವು ಮಂದಿಗೆ ಹಂಚಿಕೊಟ್ಟಿದ್ದನ್ನು ತಿಳಿ ಸುವ ಈ ಶಾಸನದಲ್ಲಿ ಪುರಂದರದಾಸರ ಮೂವರು ಮಕ್ಕಳ ಪ್ರಸ್ತಾವವಿದೆಯಷ್ಟೆ ಎಂದರೆ ಆ ವೇಳೆಗೆ ಪುರಂದರದಾಸರು ಹಂಪಿಯಲ್ಲೇ ಇದ್ದಿರಬೇಕು ಅವರ ಮಕ್ಕಳು ದಾನಾರ್ಹರೆಂದು ಸ್ವಾಮಿಗಳಿಗೆ ಮನವರಿಕೆಯಾಗಲು ಐದಾರು ವರ್ಷಗಳ ಪರಿಚಯ ವಾದರೂ ಇದ್ದಿರಬೇಕಲ್ಲವೆ ? ಪುರಂದರದಾಸರು ಕುಟುಂಬ ಸಮೇತ ಹಂಪಿಗೆ 1520ರ ಹಿಂಚುಮುಂಚು ಬಂದರೆಂದು ಹೇಳಬಹುದು ಎಂದರೆ ಆಗ ಪುರಂದರ ದಾಸರಿಗೆ ಸುಮಾರು ನಲವತ್ತುವರ್ಷ ಪ್ರಾಯ , ವ್ಯಾಸತೀರ್ಥರಿಗೆ ಸುಮಾರು ಎಂಬತ್ತು ವರ್ಷಗಳು ವ್ಯಾಸತೀರ್ಥರು ತಮ್ಮ ತೊಂಬತ್ತೆರಡನೆಯ ವಯಸ್ಸಿನಲ್ಲಿ ತೀರಿಕೊಂಡದ್ದು 1539ರಲ್ಲಿ , ಅಷ್ಟು ವೇಳೆಗಾಗಲೇ ಕೃಷ್ಣದೇವರಾಯ ಮಹಾ ರಾಯನು ತೀರಿಕೊಂಡಿದ್ದು, ಅಚ್ಯುತದೇವರಾಯನು ಅರಸನಾಗಿದ್ದ ಕೃಷ್ಣ ದೇವರಾಯನ ಅಳಿಯ ರಾಮರಾಯನಿಗೂ ಅಚ್ಯುತದೇವರಾಯನಿಗೂ ನಡುವೆ ಇದ್ದ ವೈಮನಸ್ಯ, ಗೋಲಕೊಂಡ ಸುಲ್ತಾನನು ವಿಜಯನಗರದ ರಾಜಧಾನಿಗೆ ಕೊಡುತ್ತಿದ್ದ ಕಿರುಕುಳ, ಅಲ್ಲಿದ್ದ ಗೊಂದಲ ಪರಿಸ್ಥಿತಿ, ಅರಸನು ದಂಡಯಾತ್ರೆಗೆಂದು ಪದೇ ಪದೇ ಹಂಪಿಯನ್ನು ಬಿಟ್ಟು ಹೋಗುತ್ತಿದ್ದುದು ಇವುಗಳಿಂದಾಗಿ ಹಂಪಿಯೇನು ಪುರಂದರದಾಸರ ವಾಸ್ತವ್ಯಕ್ಕೆ ಅನುಕೂಲವಾದ ತಾಣವೆನಿಸಿರಲಾರದು ವ್ಯಾಸ ತೀರ್ಥರ ಮರಣಾನಂತರ ದಾಸರು ಹಂಪಿಯನ್ನು ಬಿಟ್ಟು ದೇಶ ಸಂಚಾರಕ್ಕೆ ಹೊರಟ ರೆಂದು ತೋರುತ್ತದೆ

ಪುರಂದರದಾಸರು ವ್ಯಾಸತೀರ್ಥರೊಂದಿಗೆ ಹಂಪಿಯಲ್ಲಿರುತ್ತಿದ್ದಾಗ ಅವರಿಗೆ ಕನಕದಾಸರ ಪರಿಚಯ, ಸ್ನೇಹ ಒದಗಿದವು ಕನಕದಾಸರೂ ವ್ಯಾಸತೀರ್ಥರಿಂದ ಹರಿದಾಸದೀಕ್ಷೆಯನ್ನು ಪಡೆದುಕೊಂಡಿದ್ದವರು ಬಹುಶಃ ಪುರಂದರದಾಸರು ಹಂಪಿಗೆ

ಬರುವ ಮೊದಲೇ ಕನಕದಾಸರು ವ್ಯಾಸತೀರ್ಥರ ಶಿಷ್ಯರಾಗಿದ್ದು, ಕವಿಯೆಂದು ಹೆಸರಾಗಿದ್ದರು ಪುರಂದರದಾಸರಿಗೆ ಕನಕದಾಸರಲ್ಲಿ ತುಂಬ ಗೌರವಬುದ್ಧಿಯಿದ್ದಿತು 'ಕನಕದಾಸನ ಮೇಲೆ ದಯಮಾಡಲು ವ್ಯಾಸ, ಮುನಿಯು ಮರದವರೆಲ್ಲ ದೂರಿ ಕೊಂಬುವರು' ಎಂದು ಮೊದಲಾಗುವ ಕಾಂಬೋದಿರಾಗದ ಹಾಡೊಂದರಲ್ಲಿ ಕನಕ ದಾಸರ ಹಿರಿಮೆಯನ್ನು ಬಣ್ಣಿಸಿದ್ದಾರೆ ಕನಕದಾಸರ ಕೃತಿಗಳಲ್ಲಿ ಪುರಂದರದಾಸರ ಉಲ್ಲೇಖ ಕಾಣಸಿಗುವುದಿಲ್ಲ ಬಹುಶಃ ಕನಕದಾಸರ ಜೀವಿತಕಾಲದಲ್ಲಿ ಪುರಂದರ ದಾಸರ ಪ್ರಖ್ಯಾತಿಯಿನ್ನೂ ಮೂಡಿಕೊಂಡಿರಲಾರದು

ಪುರಂದರದಾಸರು ಹಂಪಿಯನ್ನು ಬಿಟ್ಟಂದು ಕ್ಷೇತ್ರಾಟನೆಗೆ ತೊಡಗಿದರೆಂದು ತೋರುತ್ತದೆ ಅವರು ಮತ್ತೆ ಮತ್ತೆ ಹೋಗುತ್ತಿದ್ದುದು ತಿರುಮಲೆ–ತಿರುಪತಿಯ ಗುಡಿಗೆ, ಸಾಸಿರನಾಮದ ವೇಂಕಟರಮಣ ಅವರ ಇಷ್ಟದೈವ ಈ ದೇವರನ್ನು ಕುರಿತು ಅವರು ರಚಿಸಿರುವ ಕೃತಿಗಳಿಗೆ ಲೆಕ್ಕವೇ ಇಲ್ಲ ಈ ಕ್ಷೇತ್ರದ ಪ್ರಖ್ಯಾತಿ ಪುರಂದರದಾಸರು ಹುಟ್ಟಿಬೆಳೆದಿರಬಹುದಾದ ಪ್ರದೇಶದಲ್ಲಿಯೂ ಇದ್ದಿತು, ವಯಸ್ಸಾದ ಮೇಲೆ ಬಂದು ವಾಸಮಾಡತೊಡಗಿದ ವಿಜಯನಗರ ರಾಜ್ಯದಲ್ಲೂ ಇದ್ದಿತು ಅರಸ ಕೃಷ್ಣದೇವರಾಯ, ಅವನ ನಂತರ ಅಚ್ಯುತದೇವರಾಯ ಇವರಿಬ್ಬರೂ ಆ ದೇವರಿಗೆ ನಿಷ್ಠೆಯಿಂದ ನಡೆದುಕೊಂಡವರು ತಮ್ಮ ಗುರುಗಳಾದ ವ್ಯಾಸ ತೀರ್ಥರೂ ಈ ದೇವರ ಭಕ್ತರೇ, ಬೆಟ್ಟದ ಮೇಲೇ ನಿಂತು 1486ರಿಂದ 1498 ರವರೆಗೆ ದೇವರಿಗೆ ನಿತ್ಯಾರ್ಚನೆ ಸಲ್ಲಿಸುತ್ತ ಇದ್ದರೆಂಬ ಪ್ರತೀತಿಯೂ ಇದೆ ಹೀಗಾಗಿ ಪುರಂದರದಾಸರು ತಿರುಮಲೆ–ತಿರುಪತಿಯನ್ನು ಮೆಚ್ಚಿಕೊಂಡಿದ್ದರೆಂದರೆ ಆಶ್ಚರ್ಯ ವೇನಿಲ್ಲ

ಇದಲ್ಲದೆ ಶ್ರೀರಂಗ, ಕಂಚಿ, ಕಾಳಹಸ್ತಿ ಸಿಂಹಗಿರಿ, ಹಸ್ತಿಶೈಲ, ಶ್ರೀಮುಷ್ಣ, ಮನ್ನಾರುಗುಡಿ, ಶ್ರೀಶೈಲ, ಉಡುಪಿ, ಸೇತು ಮೊದಲಾದ ಕ್ಷೇತ್ರಗಳಲ್ಲೆಲ್ಲ ಸುತ್ತಾಡಿ ದ್ದರೆಂದು ಅವರ ಪದಗಳಿಂದ ತಿಳಿದುಬರುತ್ತದೆ ಹೋದಕಡೆಯಲ್ಲೆಲ್ಲ ಕ್ಷೇತ್ರದ ಮಾಹಾತ್ಮ್ಯ, ಅಲ್ಲಿನ ಅರ್ಚಾಮೂರ್ತಿಯ ವೈಭವ, ಅಲ್ಲಿನ ಪುರಾಣ ಪ್ರಸಕ್ತಿ ಇವನ್ನು ಕುರಿತು ಕೃತಿಗಳನ್ನು ರಚಿಸತೊಡಗಿದರು ಜಗನ್ನಾಥದಾಸರು

> 'ತೀರ್ಥಕ್ಷೇತ್ರಗಳ ಮೂರ್ತಿಮಹಿಮೆಗಳ
> ಕೀರ್ತಿಸಿ ಜಗದಿ ಕೃತಾರ್ಥನೆಂದೆನಿಸಿ
> ಪಾತಕವನನಿಧಿ ಪೋತನೆನಿಪ ಜಗ
> ನ್ನಾಥ ವಿಠಲನ ಸಂಪ್ರೀತಿಯ ಪಡೆದ'

ಎಂದು ನೆನೆಸಿಕೊಂಡಿದ್ದಾರೆ ('ದಾಸರಾಯಾ ಪುರಂದರದಾಸರಾಯಾ' ಎಂಬ ಪದದ ಕಡೆಯ ಭಾಗ)

ಪುರಂದರದಾಸರು ತೀರಿಕೊಳ್ಳುವ ಕಾಲಕ್ಕೆ ಹಂಪೆಗೆ ಹಿಂದಿರುಗಿರಬಹುದೆಂದು ತೋರುತ್ತದೆ , ಈ ವಿಚಾರವನ್ನು ಮೊದಲೇ ಹೇಳಿದೆ ಅವರ ಮಗ ಮಧ್ವಪತಿಯ ರಚನೆಯೆಂಬ ಪದದಲ್ಲಿ ('ಗುರು ಮಧ್ವಪತಿವಿಠಲ'ನೆಂಬ ಅಂಕಿತವಿದೆ) ಅವರು 'ಶರೀರವನಿರಿಸಿದರು' 'ವಿರೂಪಾಕ್ಷ ಕ್ಷೇತ್ರದಿ ವಿಠಲನ ಸನ್ನಿಧಿಯಲಿ' ಎಂದು ಸ್ಪಷ್ಟೋಕ್ತಿಯಿದೆ ಆದರೆ ವಿಜಯದಾಸರು ಈ ವಿಚಾರವಾಗಿ ತಮ್ಮದೊಂದು ಸುಳಾದಿಯಲ್ಲಿ

'ಮುಕ್ತ್ಯರ್ಥ ಹರಿಪಾದಾಸಕ್ತರಾಗಿ ಧ್ಯಾನಿಸುತ್ತ
ರಕ್ತಾಕ್ಷಿವತ್ಸರದರ್ಕವಾರ ಇಂದುಕ್ಷಯ
ಯುಕ್ತ ಪುಷ್ಯಮಾಸದಿ ಉದ್ಯುಕ್ತರಾಗಿ ಪುಷ್ಪಕದಿ

ಮುಕ್ತಿಗೆ ಸಾರಿದರು ವಿರಕ್ತಿಮಾರ್ಗವನ್ನೆ ಪಡೆದು'

ಎಂದಷ್ಟೇ ಹೇಳಿದ್ದಾರೆ , ನಿರ್ಯಾಣದ ಸ್ಥಳವನ್ನು ಸೂಚಿಸಿಲ್ಲ ನಿರ್ಯಾಣದ ದಿನ ವೇನೋ ಎರಡೂ ಒಕ್ಕಣೆಗಳಲ್ಲಿ ರಕ್ತಾಕ್ಷಿ ಸಂವತ್ಸರವೇ, ಪುಷ್ಯಮಾಸವೇ, ಕೃಷ್ಣ ಪಕ್ಷವೇ, ಭಾನುವಾರವೇ ಸ್ವಾಮಿಕಣ್ಣು ಪಿಳ್ಳೆಯವರ ಗುಣಿತದಂತೆ ಇದು ಕ್ರಿಸ್ತಾಬ್ದ 1565ರ ಜನವರಿ ಎರಡನೆಯ ದಿನವಾಗುತ್ತದೆ

## 6

ಪುರಂದರದಾಸರ ಹಿರಿಮೆಯನ್ನು ಮೊದಲು ಗುರುತಿಸಿದವರು ಅವರ ದೀಕ್ಷಾ ಗುರುಗಳಾದ ವ್ಯಾಸತೀರ್ಥರೇ ವ್ಯಾಸತೀರ್ಥರು ಸ್ವತಃ ಪಂಡಿತರು, ಕವಿಗಳು, ಸಂಸ್ಕೃತ–ಕನ್ನಡ ಎರಡೂ ಭಾಷೆಗಳಲ್ಲಿ ಕೃತಿರಚನೆಮಾಡಿದವರು ಶಾಸ್ತ್ರನಿಷ್ಠವಾದ ವ್ಯಾಸಕೂಟ ಮತ್ತು ಹರಿದಾಸ್ಯ ನಿಷ್ಠವಾದ ದಾಸಕೂಟ ಎರಡನ್ನೂ ಎತ್ತಿಹಿಡಿದವರು ಚನ್ನಪಟ್ಟಣ ತಾಲ್ಲೂಕಿನ ಬನ್ನೂರು ಗ್ರಾಮದಲ್ಲಿ ಹುಟ್ಟಿದ ಇವರು, ತಮ್ಮ ಎಳೆಯ ವಯಸ್ಸಿನಲ್ಲೇ ಅಬ್ಬೂರಿನ ಬ್ರಹ್ಮಣ್ಯತೀರ್ಥರಿಂದ ಸಂನ್ಯಾಸಾಶ್ರಮವನ್ನು ಸ್ವೀಕರಿಸಿ, ಅವರಲ್ಲಿಯೇ ಕೊಂಚ ಕಾಲ ವಿದ್ಯಾಭ್ಯಾಸಮಾಡಿ, ಅನಂತರ ಕಾಶಿಗೆ ಹೋಗಿ ಅಲ್ಲಿ ಹಲವಾರು ಶಾಸ್ತ್ರಗಳನ್ನು ಸಾಂಗವಾಗಿ ಅಧ್ಯಯನ ಮಾಡಿ, ಉತ್ತರಭಾರತದಲ್ಲಿ ಸಂಚರಿಸಿ ನವ್ಯನ್ಯಾಯದಲ್ಲಿ ಸಿಂಹಸ್ವರೂಪರೆನಿಸಿದ ಗದಾಧರ ಮಿಶ್ರ, ಪಕ್ಷಧರಮಿಶ್ರ ಮೊದಲಾದ ಪಂಡಿತರೊಂದಿಗೆ ವಾಗ್ವಾದಮಾಡಿ ಜಯಪತ್ರವನ್ನು ಪಡೆದುಕೊಂಡು ಕನ್ನಡನಾಡಿಗೆ ಹಿಂದಿರುಗುವವರೆಗೆ ಅವರು ವೇದಾಂತಶಾಸ್ತ್ರದಲ್ಲೇ ನಿಷ್ಣಾತರು. ಅವರ 'ತರ್ಕತಾಂಡವ' (ನ್ಯಾಯ ವೈಶೇಷಿಕ ಮತ ಖಂಡನ), 'ನ್ಯಾಯಾಮೃತ' (ಅದ್ವೈತ

ಮತಖಂಡನ), 'ಚಂದ್ರಿಕಾ' (ತತ್ತ್ವಪ್ರಕಾಶಿಕೆಯ ಟಿಪ್ಪಣಿ), 'ಭೇದೋಜ್ಜೀವನ', (ಅದ್ವೈತಮತಖಂಡನ), 'ಮಂದಾರಮಂಜರಿ' (ಖಂಡನತ್ರಯ ವ್ಯಾಖ್ಯಾನ) ಈ ಸಂಸ್ಕೃತಗ್ರಂಥಗಳನ್ನು ಪರಿಶೀಲಿಸಿದವರಿಗೆ ಅವರ ವೈದುಷ್ಯ, ವಾದಕೌಶಲ, ಪ್ರಮೇಯ ನಿರೂಪಣಾಸಾಮರ್ಥ್ಯಗಳು ಮನದಟ್ಟಾಗುತ್ತವೆ ದ್ವೈತಮತವೇ ವೇದವ್ಯಾಸರ ಮತ ಎಂಬ ಶ್ರದ್ಧೆಯುಳ್ಳ, ಶಾಸ್ತ್ರರಸಿಕರಾದ ವೈದಿಕಾಚಾರನಿಷ್ಠರಾದ ಪಂಡಿತರು ವ್ಯಾಸ ತೀರ್ಥರ ಗ್ರಂಥಗಳನ್ನು ಅವರ ಬಳಿಯೇ ಓದಿ, ಅವನ್ನು ಶಿಷ್ಯರಿಗೆ ಪಾಠಹೇಳಿ, ಅವಕ್ಕೆ ಟೀಕೆ ಟಿಪ್ಪಣಗಳನ್ನು ಬರೆದು ಕೃತಾರ್ಥರಾಗುವೆವೆಂದರು ಇವರದ್ದೇ 'ವ್ಯಾಸಕೂಟ'ವಾಯಿತು ಇಂಥ ಪಂಡಿತರು ಅವರ ಸುತ್ತ ನೆರೆದದ್ದು ಸಹಜವೇ

ಆದರೆ ಉತ್ತರದೇಶದ ದಿಗ್ವಿಜಯವನ್ನು ಮುಗಿಸಿ ಅವರು ತಾಯ್ನಾಡಿಗೆ ಹಿಂದಿರು ಗಿದಾಗ ಅವರು ಸೇರಿಕೊಂಡದ್ದು ಮುಳುಬಾಗಿಲಿನ ಶ್ರೀಪಾದರಾಜರನ್ನು ಶ್ರೀಪಾದರು ಚನ್ನಪಟ್ಟಣದ ಅಬ್ಬೂರಿನಲ್ಲಿ ಹುಟ್ಟಿ, ಪದ್ಮನಾಭತೀರ್ಥರ ಪರಂಪರೆಯಲ್ಲಿ ಸಂನ್ಯಾಸಿ ಗಳಾದವರು ಇವರ ದಿಟವಾದ ಹೆಸರು ಲಕ್ಷ್ಮೀನಾರಾಯಣತೀರ್ಥರೆಂದು ಉತ್ತರಾದಿ ಮಠದ ರಘುನಾಥತೀರ್ಥರು ಇವರ ಪಾಂಡಿತ್ಯ, ಪ್ರತಿಭೆಗಳಿಗೆ ಬೆರಗಾಗಿ ಇವರನ್ನು 'ಶ್ರೀಪಾದರಾಜ'ರೆಂದು ಕರೆದು ಗೌರವಿಸಿದರು ಈ ಹೆಸರೇ ನಿಂತಿತು 'ನ್ಯಾಯಸುಧಾ' ಎಂಬ ವೇದಾಂತಗ್ರಂಥಕ್ಕೆ ಇವರು ಸಂಸ್ಕೃತದಲ್ಲಿ 'ವಾಗ್ವಜ್ರ'ವೆಂಬ ವ್ಯಾಖ್ಯಾನವನ್ನು ರಚಿಸಿದ್ದಾರೆ ಎಂದು ಪ್ರತೀತಿ ಆದರೆ ಈಗ ದೊರೆತಿರುವ ಹಸ್ತಪ್ರತಿ ತೀರ ಅಪೂರ್ಣ , ಅದು ಶ್ರೀಪಾದರಾಜರದ್ದೇ ಎಂಬುದೂ ಸ್ಪಷ್ಟವಾಗುವುದಿಲ್ಲ ಇದು ಅವರ ಬದುಕಿನಲ್ಲಿ ಮುಖ್ಯವಾದ ವಿವರವಲ್ಲ ಅವರು ಮುಖ್ಯವಾಗಿ ಭಕ್ತ, ಭಾವುಕ, ಕವಿ, ಗಾಯಕ, ವಾಗ್ಗೇಯಕಾರ ಹೊಸಕನ್ನಡದಲ್ಲಿ ದೇವರನಾಮಗಳನ್ನು ರಚಿಸು ವುದು ಅವರ ಪ್ರಿಯವಾದ ಹವ್ಯಾಸ ಹಳೆಯ ವೃತ್ತನಾಮ ಪದ್ಧತಿಯೆಂಬ ರಚನೆ ಯನ್ನು ಇವರು ಮತ್ತೆ ವಾಡಿಕೆಗೆ ತಂದರು ಹಳೆಯ ವೃತ್ತನಾಮ ಪದ್ಧತಿಗಳೆಲ್ಲ ಸಂಸ್ಕೃತದಲ್ಲಿದ್ದುವು , ಇವರು ಕನ್ನಡದಲ್ಲಿ ವೃತ್ತನಾಮ ಪದ್ಧತಿಗಳನ್ನು ರಚಿಸಿದರು ಈ ಪದ್ಧತಿಯಲ್ಲಿ ಮೊದಲು ಪಲ್ಲವಿ, ಅನಂತರ ಒಂದು ವೃತ್ತ, ಅದಕ್ಕೆ ಹೊಂದಿ ಕೊಂಡು ಬಂದ ಒಂದು ಚರಣ, ಮತ್ತೆ ಒಂದು ವೃತ್ತ ಹೀಗೆ ಕ್ರಮ ರಾತ್ರಿಯ ವೇಳೆ ಸ್ವಾಮಿಗಳು ನಡೆಸುವ ದೇವರಪೂಜೆಯಲ್ಲಿ ಬಳಕೆಗೆ ಬರುವಂಥ ಹಲವಾರು ವೃತ್ತನಾಮಗಳನ್ನು ಇವರೇ ರಚಿಸಿದರು ಸುಳಾದಿಗಳ ಬಾಹುಳ್ಯವೂ ಇವರ ಕೊಡುಗೆಯೇ ಇವರೇ ನೂರ ಮೂವತ್ತುಮೂರು ಸುಳಾದಿಗಳನ್ನು ರಚಿಸಿದ್ದರಂತೆ ಇವರ ಹೆಸರಿನಲ್ಲಿ ಮೂರು ಉಗಾಭೋಗಗಳೂ ಇವೆ ಇವಲ್ಲದೆ ಕನ್ನಡದಲ್ಲಿ ಗೋಪೀಗೀತಾ, ಭ್ರಮರಗೀತಾ, ವೇಣುಗೀತಾ, ರುಕ್ಮಿಣೀಸತ್ಯಭಾಮಾ ವಿಲಾಸ, ಲಕ್ಷ್ಮೀನರಸಿಂಹಪ್ರಾದುರ್ಭಾವ ದಂಡಕ ಮೊದಲಾದ ಹಲವು ಸೊಗಸಾದ ರಚನೆಗಳು ಇವರವೇ ಇವರ ಭ್ರಮರಗೀತೆ (ಮುಖಾರಿರಾಗ, ಅಟ್ಟತಾಳ, 'ಭೃಂಗ ಬೆನ್ನಟ್ಟಿದಾನೆ ಶ್ರೀರಂಗ ಮಧುರೇಲಿ ನಿಂದು' ಎಂದು ಮೊದಲಾಗುತ್ತದೆ) ಅವರ ಸಾಹಿತ್ಯ–ಸಂಗೀತ

ಪ್ರೌಢಿಮೆಗೆ ಸಾಕ್ಷಿಯಾಗಿ ಉಳಿದಿದೆ ಅವರ ಅಂಕಿತ 'ರಂಗವಿಠಲ' ಅವರು ಮುಳುಬಾಗಿಲಿನ ಹತ್ತಿರ ನರಸಿಂಹತೀರ್ಥದಲ್ಲಿ 1480ರ ಸುಮಾರಿಗೆ ತೀರಿಕೊಂಡರು

ವ್ಯಾಸತೀರ್ಥರು ಶ್ರೀಪಾದರಾಜರ ಬಳಿ ಬಂದಾಗ ಅವರು ಕಂಡುಕೊಂಡದ್ದು ಹರಿಭಕ್ತಿಯ ಸ್ವಾರಸ್ಯವನ್ನು ಹರಿಯ ಹಿರಿಮೆಯನ್ನು ಹಾಡಿ ಹೊಗಳಲು ತಾವೇ ಕನ್ನಡ ರಚನೆಗಳನ್ನು ಮಾಡಿ, ಅವನ್ನು ತಾವೇ ಹಾಡುತ್ತ, ರಾತ್ರಿಯ ಪೂಜೆಯ ಸಂದರ್ಭದಲ್ಲಿ ತಾವೇ ನರ್ತನಸೇವೆಯನ್ನೂ ಮಾಡುತ್ತಿದ್ದ ಶ್ರೀಪಾದರಾಜರ ವ್ಯಕ್ತಿತ್ವ ವ್ಯಾಸತೀರ್ಥರ ಮೇಲೆ ಪ್ರಬಲವಾದ ಪ್ರಭಾವವನ್ನು ಬೀರಿತು ಅವರ ಪಾಂಡಿತ್ಯ, ವಾಕ್ಯಾರ್ಥ ಪ್ರೌಢಿಮೆ, ವಾದಪ್ರಸಕ್ತಿ ಇವೆಲ್ಲ ಹಿಂದೆ ಸರಿದು ನಿಂತವು , ಭಗವದ್ಭಕ್ತಿ, ನಾದನಸಂಗೀತ, ಹರಿದಾಸ್ಯ ವೃತ್ತಿ ಇವುಗಳಿಗೆ ಅವರ ಮನಸ್ಸು ಸೋತಿತು ಅಲ್ಲಿಂದ ಮುಂದೆ ಅವರು 'ವ್ಯಾಸಕೂಟ'ದ ವಿಚಾರವಾಗಿ ಉದಾಸೀನರಾಗಿ 'ದಾಸಕೂಟ' ವನ್ನು ಪ್ರೋತ್ಸಾಹಿಸುತ್ತ ಬಂದರು

'ದಾಸಕೂಟ'ದವರಲ್ಲಿ ಅಧ್ಯಾತ್ಮದ ನಿಷ್ಠೆಯಿದ್ದರೂ ಮತದ ಛಲ ಕಣ್ಣು ಕುಕ್ಕುವುದಿಲ್ಲ , ನೀತಿಗೆ ಆದರವಿದ್ದರೂ ಮಡಿವಂತಿಗೆಯ ಹಟವಿಲ್ಲ , ಆಚಾರಕ್ಕೆ ಮಾನ್ಯತೆಯಿದ್ದರೂ ಅದು ದಾರಿಯಾಗಿ ಅಷ್ಟೆ ಅದೇ ಗುರಿಯೆಂದಲ್ಲ ವ್ಯಾಸ ತೀರ್ಥರ ದಾಸಕೂಟದಲ್ಲಿ ಇದ್ದವರೆಲ್ಲ ಮಾಧ್ವಸಂಪ್ರದಾಯದವರಲ್ಲ ಪುರಂದರ ದಾಸರೇನೋ ಮಾಧ್ವಸಂಪ್ರದಾಯದವರು ಆದರೆ ವ್ಯಾಸತೀರ್ಥರ ಶಿಷ್ಯರಲ್ಲಿ ವೈಕುಂಠದಾಸರು ಶ್ರೀವೈಷ್ಣವ ಪಂಥದವರು, ನಾರಾಯಣ ಯತಿ ಸ್ಮಾರ್ತ ಭಾಗವತರು, ಕನಕದಾಸರು ಬ್ರಾಹ್ಮಣರೇ ಅಲ್ಲ, ಅಂಡೆ ಕುರುಬರು ಆದರೆ ಎಲ್ಲರೂ ದಾಸಕೂಟದಲ್ಲಿ ಸಮಾನರೇ ಅವರೆಲ್ಲ ವೇದಾಂತದ ಪ್ರಮೇಯಗಳನ್ನೇ ನಂಬುವವ ರಾದರೂ ಅವನ್ನು ಅರಿತುಕೊಳ್ಳಲು ಸಂಸ್ಕೃತವೇ ಗತಿ ಎಂದು ನಂಬುವುದಿಲ್ಲ ತಮ್ಮ ತಾಯ್ನುಡಿಯಲ್ಲೇ ಎದೆಯಾಳದ ಭಾವನೆಗಳನ್ನು ಭಕ್ತಿಯ ಹೊನಲಿನಲ್ಲಿ ಹೊರ ಹೊಮ್ಮಿಸಿದರೆ ಭಗವತ್ಪ್ರೀತಿಗೆ ಏನೇನೂ ಆತಂಕವಿರದೆಂದು ಅವರ ನಂಬಿಕೆ ಹೀಗಾಗಿ ಅವರು ಬಳಸುವ ಹಾಡುಗಳೆಲ್ಲ ಕನ್ನಡದವೇ , ಮಟ್ಟು ಕನ್ನಡದ್ದೇ, ನುಡಿಗಟ್ಟು ಕನ್ನಡದ್ದೇ , ತಿರುಳೂ ಕನ್ನಡದ ಜಾಯಮಾನದ್ದೇ

ವ್ಯಾಸತೀರ್ಥರು ಎತ್ತಿ ಕಟ್ಟಿದ 'ದಾಸಕೂಟ' ಹರಿದಾಸಪರಂಪರೆಯನ್ನು ಉಳಿಸಿ ಬೆಳೆಸಿತು ಹರಿದಾಸಪರಂಪರೆ ಆರಂಭವಾದದ್ದು ಯಾವಾಗ ಎಂದು ನಿರ್ದಿಷ್ಟ ವಾಗಿ ಹೇಳುವುದು ಕಷ್ಟ ಆದರೆ ಇದು ಕನ್ನಡನಾಡಿಗೆ ವಿಶಿಷ್ಟವಾದುದು ಎಂಬುದೇನೋ ದಿಟ ಹರಿದಾಸರೆಲ್ಲ ಕನ್ನಡಿಗರೇ , ಹರಿದಾಸ ಸಾಹಿತ್ಯವೆಲ್ಲ ಇರುವುದು ಕನ್ನಡದಲ್ಲೇ ಇದರಲ್ಲಿ ವಿಟ್ಠಲಭಕ್ತಿ, ಭಾಗವತಧರ್ಮ, ಮಹಾನುಭಾವ ಪಂಥ, ರಾಮಾನುಜಸಂಪ್ರದಾಯ, ಮಾಧ್ವಸಿದ್ಧಾಂತ ಪ್ರಮೇಯಗಳು ಇವೆಲ್ಲ ಕೂಡಿಕೊಂಡುಬಂದುವು ಮಧ್ವಾಚಾರ್ಯರ (1238–1317) 'ದ್ವಾದಶ ಸ್ತೋತ್ರ'ವೇ ಹರಿದಾಸ ಮನೋಧರ್ಮಕ್ಕೆ ಬುನಾದಿಯಾಯಿತು ಎಂದು ಹೇಳುವವ

ರಿದ್ದಾರ ಅವರಿಗೆ ಪೂರ್ವದಲ್ಲೇ ಅರವತ್ತು ಮಂದಿ ಆದ್ಯರು, ಆರಾಧ್ಯರು ಈ ಪರಂಪರೆಯನ್ನು ಬೆಳೆಸಿದರು ಎಂದೂ ಕೆಲವರ ಎಣಿಕೆ ಹೈಗಣಪುರದ ಅಚಲಾನಂದ ದಾಸರು 'ಆದ್ಯ'ರಲ್ಲಿ ಆದ್ಯರಂತೆ , ಇವರು ಕನ್ನಡದಲ್ಲಿ ನಾಲ್ಕೈದು ಕೀರ್ತನೆಗಳನ್ನು ರಚಿಸಿದರೆಂಬ ಪ್ರತೀತಿಯಿದೆ ಅವರನಂತರ 'ಮುದ್ದು ವಿಠಲ', 'ಯೋಗೀಂದ್ರ ವಿಠಲ', 'ನರಕಂಠೀರವ ವಿಠಲ', 'ಸೊಬಗು ವಿಠಲ', 'ಸಿರಿಕೃಷ್ಣ ವಿಠಲ' ಮುಂತಾದ ಕೆಲವು ಪುರಾತನರ ಕೃತಿಗಳನ್ನು ಲಿಂಗಸೂಗೂರಿನ ವರದೇಂದ್ರ ದಾಸ ಸಾಹಿತ್ಯ ಮಂಡಳಿಯ ಗೊರಾಬಾಳ ಹನುಮಂತರಾಯರು ಸಂಗ್ರಹಿಸಿದ್ದಾರೆ

ಹರಿದಾಸಪಂಥದವರಲ್ಲಿ ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ನರಹರಿ ತೀರ್ಥರಿಂದ ಈ ಪರಂಪರೆ ಮೊದಲಾಯಿತೆಂಬ ಕಲ್ಪನೆಯೂ ಇದೆ ನರಹರಿತೀರ್ಥರು 1264ರಿಂದ 1293ರವರೆಗೆ ಕಳಿಂಗದೇಶದಲ್ಲಿ ಆಳುತ್ತಿದ್ದ ಗಾಂಗವಂಶದ ಅರಸ ಮೊದಲನೆಯ ಭಾನುದೇವನ ಕಾಲದಲ್ಲಿ ಅಲ್ಲೇ ಇದ್ದವರು 'ಭಾನುದೇವಾಶ್ರಿತಃ', 'ಮುದುಸಲಿ ಸಚಿವುಡು ನರಹರಿ ಮುನೀಶ್ವರುಡು' ಎಂಬ ಶಾಸನಗಳಿವೆ ಎಂದರೆ ಕಳಿಂಗದೇಶದಲ್ಲಿ ಆಡಳಿತವನ್ನೂ ನಡೆಸುತ್ತಿದ್ದವರು ಶ್ರೀಕೂರ್ಮ, ಸಿಂಹಾಚಲ ಗಳಲ್ಲಿ ದಾನಧರ್ಮಗಳನ್ನು ನಡೆಸಿ ಶಕವರ್ಷ 1193ರಲ್ಲಿ (ಎಂದರೆ ಕ್ರಿಸ್ತಾಬ್ದ 1271 ರಲ್ಲಿ) ತಾವೇ ಶಾಸನವನ್ನು ಹೊರಡಿಸಿದ್ದಾರೆ ಹತ್ತು ವರ್ಷಗಳ ನಂತರ ಶ್ರೀ ಕೂರ್ಮನಾಥನ ಆಲಯದ ಎದುರು ಯೋಗಾನಂದ ನರಸಿಂಹಾಲಯವನ್ನು ಕಟ್ಟಿಸಿ, ಮತ್ತೆ ಹತ್ತು ವರ್ಷಗಳು ಕಳೆದಾಗ ಸಿಂಹಾಚಲದ ನರಸಿಂಹನಿಗೆ ಅಖಂಡದೀಪದಾನ ವನ್ನು ಮಾಡಿರುವ ಶಾಸನಗಳು ತೆಲುಗು ಭಾಷೆಯಲ್ಲಿವೆ ಶಾಸನದಲ್ಲಿ "ಶ್ರೀಮದಾನಂದ ತೀರ್ಥ ಪೂಜ್ಯಪಾದಾಚಾರ್ಯ ಶಿಷ್ಯುಲೈನ ಶ್ರೀ ನರಹರಿ ತೀರ್ಥ ಶ್ರೀಪಾದುಲು" ಎನ್ನುವ ಒಕ್ಕಣೆಯಿದೆ ದೂರದ ಕಳಿಂಗದಲ್ಲಿದ್ದರೂ, ಲೌಕಿಕ ವ್ಯವಹಾರಗಳಲ್ಲಿ ತೊಡಗಿದ್ದರೂ, ಕನ್ನಡದಲ್ಲಿ ದೇವರನಾಮಗಳನ್ನು ರಚಿಸಿದರು ಅವರು 1324 ರಿಂದ 1333ರ ವರೆಗೂ ಮಧ್ವಾಚಾರ್ಯರ ಸಂಸ್ಥಾನವನ್ನು ಆಳುತ್ತ ಕನ್ನಡನಾಡಿನಲ್ಲೇ ಇರುವಾಗ ಈ ಪ್ರಸಕ್ತಿ ಇನ್ನೂ ಹೆಚ್ಚಿತು 'ರಘುಪತಿ', 'ರಘುಕುಲ ತಿಲಕ' ಎಂಬ ಅಂಕಿತಗಳಲ್ಲಿರುವ ಕನ್ನಡ ದೇವರನಾಮಗಳು ಇವರವೇ "ಹರಿಯೇ, ಇದು ಸರಿಯೇ" ಎಂಬ ಶ್ರೀರಾಗದ ಕೀರ್ತನೆಯೊಂದು, "ಎಂತು ಮರುಳಾದೆ, ನಾನೆಂತು ಮರುಳಾದ" ಎಂಬ ಆನಂದಭೈರವಿ ರಾಗದ ಕೀರ್ತನೆಯೊಂದು ಇವರ ರಚನೆಗಳಲ್ಲಿ ಇಂದಿಗೂ ಜನಪ್ರಿಯವಾಗಿ ಉಳಿದಿವೆ

ನರಹರಿತೀರ್ಥರಿಂದ ಹರಿದಾಸಸಾಹಿತ್ಯ ಮೊದಲಾದುದು ದಿಟವಿದ್ದೀತು; ಆದರೆ ಹರಿದಾಸಪರಂಪರೆ ಅವರಿಂದ ಮೊದಲಾದುದಕ್ಕೆ ಪುರಾವೆಗಳಿಲ್ಲ ಅವರ ನಂತರ ಧರ್ಮಸಂಸ್ಥಾನದಲ್ಲಿ ಪಟ್ಟವೇರಿದ ಮಾಧವತೀರ್ಥರು, ಅಕ್ಷೋಭ್ಯತೀರ್ಥರು, ಜಯತೀರ್ಥರು, ವಿದ್ಯಾಧಿರಾಜತೀರ್ಥರು ಮೊದಲಾದವರು ಯಾರೂ ಈ ದಿಸೆಯಲ್ಲಿ ಆಸಕ್ತಿ ತೋರಿಸಿದಂತೆ ಕಾಣಬರುವುದಿಲ್ಲ. ಅದೇ ಪೀಳಿಗೆಯಲ್ಲಿ ಎಂಬತ್ತೇಳು ವರ್ಷಗಳ

ನಂತರ ಶ್ರೀಪಾದರಾಜರಲ್ಲಿ (ಲಕ್ಷ್ಮೀನಾರಾಯಣ ತೀರ್ಥರು, ಆಳ್ವಿಕೆ 1460–1480) ಮತ್ತೆ ನರಹರಿತೀರ್ಥರ ಹರಿದಾಸ್ಯದ ಒಲವು ಮರುಕರುಳಿಸಿತು, ಮತ್ತು ಈಗ ದಾಸ ಸಾಹಿತ್ಯ ಸೃಷ್ಟಿ ಮಾತ್ರವಲ್ಲದೆ ಪೂಜೆಯಲ್ಲಿ ಅದರ ಅನ್ವಯವೂ ಒದಗಿಬಂದಿತು , ಮೇಲಾಗಿ, ಹರಿದಾಸರಿಗೆ ಪ್ರೋತ್ಸಾಹವೂ ಸಿದ್ಧವಾಯಿತು ತಮ್ಮ ಸಂನ್ಯಾಸಿ ಶಿಷ್ಯರಾದ ವ್ಯಾಸತೀರ್ಥರಿಗೇ ಈ ಗೀಳನ್ನು ಹಿಡಿಸಿದರಲ್ಲವೆ ? ಹೀಗಾಗಿ ಶ್ರೀಪಾದರಾಜರನ್ನು ಹರಿದಾಸಪರಂಪರೆಯ ಪ್ರವರ್ತಕರೆಂದರೆ ತಡೆಯುತ್ತದೆ ಹರಿದಾಸಪರಂಪರೆಯಲ್ಲೂ ಸಾಂಪ್ರದಾಯಿಕವಾದ ಪೂರ್ವಸೂರಿ ಸ್ಮರಣೆಯಲ್ಲಿ ಇವರ ಹೆಸರೇ ಮೊದಲು ಬರುತ್ತದೆ

'ನಮಃ ಶ್ರೀಪಾದರಾಜಾಯ ನಮಸ್ತೇ ವ್ಯಾಸಯೋಗಿನೇ
ನಮಃ ಪುರಂದರಾರ್ಯಾಯ ವಿಜಯಾರ್ಯಾಯ ತೇ ನಮಃ'

ಆದರೆ ದಿಟವಾಗಿ ಪರಂಪರೆ ವ್ಯಾಸತೀರ್ಥರಿಂದಲೇ ಮೊದಲಾಯಿತೆನ್ನಬೇಕು ದಾಸಕೂಟವನ್ನು ಕಟ್ಟಿ ಅದರಲ್ಲಿ ತಮ್ಮ ಗೃಹಸ್ಥ ಶಿಷ್ಯರನ್ನು ತೊಡಗಿಸಿದವರು ಅವರೇ ಅವರ ನಂತರ ದಾಸಕೂಟದ ಅಧ್ವರ್ಯು ಪುರಂದರದಾಸರಾದರು ಕಾರಣಾಂತರಗಳಿಂದ, ಪರಂಪರೆ ಪ್ರಕಟವಾಗಿ ಪ್ರಸಿದ್ಧವಾಗಿ ಉಳಿದುಕೊಳ್ಳದೆ ವಿಜಯದಾಸರ ಕಾಲದವರೆಗೆ ಗುಪ್ತಗಾಮಿನಿಯಾಯಿತು ಮುಂದೆ ಹಲಕಾಲ ಇದು ಉಳಿಯಿತು, ಬೆಳೆಯಿತು ಆದುದರಿಂದಲೇ ಸ್ತುತಿರೂಪವಾದ ಈ ಶ್ಲೋಕದಲ್ಲಿ ಹರಿದಾಸಪಂಥಕ್ಕೆ ಪ್ರೇರಣೆಯನ್ನು ಒದಗಿಸಿದ ಶ್ರೀಪಾದರಾಜರು, ಹರಿದಾಸ ಪರಂಪರೆಯ ಪ್ರವರ್ತಕರಾದ ವ್ಯಾಸತೀರ್ಥರು, ಸಂಪ್ರದಾಯದ ಸತ್ವಕ್ಕೆ, ಪ್ರಚಾರಕ್ಕೆ, ಜನಪ್ರೀತಿಗೆ ಕಾರಣರಾದ ಪುರಂದರದಾಸರು, ಮತ್ತು ಪರಂಪರೆಯನ್ನು ಪುನರುಜ್ಜೀವನಗೊಳಿಸಿದ ವಿಜಯದಾಸರು ಈ ನಾಲ್ವರ ಹೆಸರನ್ನು ಎತ್ತಿಕೊಂಡಿದ್ದಾರೆ

ವಿಜಯದಾಸರಿಗೆ ಪೂರ್ವಿಕರೆಂದು ಹೆಸರಾದ 'ಗುರು ಮಹೀಪತಿ' ಎಂಬ ಅಂಕಿತದ ದಾಸರ 'ನೆನೆದು ನೆನಸುವೆ' ಎಂದು ಮೊದಲಾಗುವ ಹಾಡಿನಲ್ಲಿ ಇರುವ ಒಕ್ಕಣೆ

ಶರಣೆಂದು ಆದ್ಯರ ಸಕಲ ಪ್ರಸಿದ್ಧರ
ಶ್ರೀಪಾದಪ್ರಿಯ ಶುಭ ವ್ಯಾಸರಾಯರ
ವರ ಹಯಗ್ರೀವ ಜಗವರಿತ ವಾದಿರಾಜ
ಪುರಂದರದಾಸರ ಪುನ್ನರವ ಮಾಳವ (?)
ನೆರೆ ತಾಳಪಾಕರ ಸಂತಮತಿ ಕನಕರ
ಹರಿಭಕ್ತಿ ಉಲ್ಲಾಸರ ಬಂಡೆರಂಗನರಿತಿಹ ನಿಜದಾ
ಸರ ಮಹೀಪತಿ ಗುರುಶರಣರ ತೋಷರ ವಾರಂ ವಾರಂ

ಇಲ್ಲಿ ಹರಿದಾಸವರಂಪರೆಗೆ ಆದ್ಯರನ್ನು ಬಿಟ್ಟರೆ ಶ್ರೀಪಾದರಾಜರೇ ಮೊದಲಿಗರು , ಅನಂತರ ವ್ಯಾಸರಾಯರು, ವಾದಿರಾಜರು, ಪುರಂದರದಾಸರು, ತಾಳ್ಳಪಾಕ ಕವಿಗಳು, ಕನಕದಾಸರು ಇವರು ಉಲ್ಲೇಖಿಗೊಂಡಿದ್ದಾರೆ ಇಲ್ಲಿ ತಾಳ್ಳಪಾಕದವರ ಉಲ್ಲೇಖ ಬಂದಿರುವುದು ಸ್ವಾರಸ್ಯವಾಗಿದೆ ಪುರಂದರದಾಸರಿಗೂ ತಾಳ್ಳಪಾಕ ಅಣ್ಣಮಾ ಚಾರ್ಯರಿಗೂ ಅವರ ಮಕ್ಕಳಿಗೂ ಹರಿದಾಸಸಂಪ್ರದಾಯದ ಸಮಾನಧರ್ಮ ವಿದ್ದಿತೆಂದು ಇವರಿಂದ ತೋರುತ್ತದೆ 'ಗುರು ಮಹೀಪತಿ'ಗಳ ಈ ಪದವನ್ನು ಗೋರಾಬಾಳ ಹನುಮಂತರಾಯರ 'ಶ್ರೀ ಜಗನ್ನಾಥದಾಸರು, ತತ್ ಶಿಷ್ಯ ಪ್ರಶಿಷ್ಯರ ಸುಳಾದಿಗಳು ಉಗಾಭೋಗಗಳು' (ಲಿಂಗಸೂಗೂರಿನ ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲಿ, 1958) ಎಂಬ ಸಂಗ್ರಹದಲ್ಲಿ ಕಾಣಬಹುದು

## 7

ವ್ಯವಹಾರದ ದೃಷ್ಟಿಯಿಂದ, ಶ್ರೀಪಾದರಾಜರಿಗಿಂತ ವ್ಯಾಸತೀರ್ಥರು ಹೆಚ್ಚು ಪ್ರಭಾವಶಾಲಿಗಳಾಗಿದ್ದವರು ವಿಜಯನಗರ ಸಾಮ್ರಾಜ್ಯದ ರಾಜಧಾನಿಯಲ್ಲೇ ಇರುತ್ತಿದ್ದವರು, ಅರಸನಾದ ಕೃಷ್ಣದೇವರಾಯ ಮಹಾರಾಯನಿಗೆ ಬೇಕಾದವರು ಈ ಅರಸನು ಗೌರಾಪುರಶಾಸನದಲ್ಲಿ (ಶಕ 1459 ಎಂದರೆ ಕ್ರಿ ಶ 1527), ಇವರನ್ನು "ನಿಗಮಾಗಮನಿರ್ಣೀತ ನಿರ್ಜರಾಧೀಶಮಂತ್ರಿ", "ನೃಪೇಂದ್ರಮುಕುಟೀರತ್ನ ನೀರಾಜಿತನಿಜಾಂಘ್ರಿ", "ನಿರಹಂಕಾರಚಿತ್ತ", "ನೀತಿಮಾರ್ಗೋಪದೇಶಕ", "ವಿದ್ವ ದಿಂದೀವರೇಂದು" ಎಂದು ಮುಂತಾಗಿ ಕೊಂಡಾಡಿದ್ದಾನೆ ಧಾರ್ಮಿಕಪ್ರಪಂಚದಲ್ಲೂ ಲೋಕವ್ಯವಹಾರದಲ್ಲೂ ಅವರ ಯಶಸ್ಸು ಉಜ್ವಲವಾಗಿದ್ದಿತು ಇಂಥವರು ಕೈಹಿಡಿದ ಕೆಲಸ ಊರ್ಜಿತವಾಗುವುದೇನು ಕಷ್ಟ ? ಹರಿದಾಸರ ಸಂಘಟನೆ, ವ್ಯವಸ್ಥೆ, ಪ್ರೋತ್ಸಾಹ ಅವರಿಗೆ ಪ್ರಿಯವಾಗಿದ್ದ ವಿಚಾರ ಇದಕ್ಕೆ ಎದುರಾಗಿ ಬಂದ ಅಡ್ಡಿ ಅಡಚಣೆಗಳನ್ನೆಲ್ಲ ನಿವಾರಿಸುವುದು ಅವರಿಗೆ ಏನೂ ಕಷ್ಟವಾಗಿರಲಿಲ್ಲ ಮೇಲಾಗಿ ತಾವೇ ಪ್ರಖ್ಯಾತರಾದ ಗ್ರಂಥಕರ್ತರು ಕನ್ನಡದಲ್ಲೂ ಅವರು ಇನ್ನೂರಕ್ಕೂ ಮೀರಿ ಕೀರ್ತನೆಗಳನ್ನು ರಚಿಸಿದವರು , ಹದಿಮೂರು ಸುಳಾದಿಗಳು ಅವರ ಹೆಸರಿ ನಲ್ಲಿವೆ, ಕೆಲವು ಉಗಾಭೋಗಗಳನ್ನೂ ರಚಿಸಿದ್ದಾರೆ ಮತ್ತು ಗುಣಗ್ರಾಹಿಗಳು , ಜಾತಿ, ಮತ ಎಂಬ ಭೇದವನ್ನೆಣಿಸದೆ ಯೋಗ್ಯತೆಯಿದ್ದಲ್ಲಿ ಆದರ ನೀಡುವ ಉದಾರಿ ಗಳು ಅವರು ವೈದಿಕರ ಆಡಂಬರ, ಕುಹಕಗಳಿಗೆ ಮಣಿಯದೆ ಪಂಡಿತರೂ ವೈದಿಕರೂ ಅಲ್ಲದೆ ಹರಿದಾಸರಾದ ಪುರಂದರದಾಸರನ್ನು ಮೇಲೆತ್ತಿ ಹಿಡಿದರು , ಮಠದ ಪಂಡಿತರ ಆಕ್ಷೇಪಗಳನ್ನು ಕಡೆಗಣಿಸಿ ವೈದಿಕಪಂಡಿತರಿರಲಿ ಬ್ರಾಹ್ಮಣರೂ ಅಲ್ಲದೆ ಅಂಡೆಕುರುಬರಾದ ಕನಕದಾಸರ ಹಿರಿಮೆಯನ್ನು ಸಾರಿದರು ಹರಿದಾಸರ

ಸಂಪ್ರದಾಯಕ್ಕೆ, ಜೀವನವಿಧಾನಕ್ಕೆ, ಮನೋವೃತ್ತಿಗೆ, ಸಾಹಿತ್ಯರಚನೆಗೆ ವ್ಯಾಸ ತೀರ್ಥರಿಂದ ದೊರೆತ ಉತ್ತೇಜನ ಮನನೀಯವಾದುದು.

ವ್ಯಾಸಕೂಟ–ದಾಸಕೂಟಗಳೆಂಬ ಮಾತುಗಳೇನೋ ಈಚಿನವು, ಸುಮಾರು ನೂರುವರ್ಷಗಳಿಗೆ ಮೀರಿ ಅವುಗಳ ಪ್ರಾಚೀನತೆ ಕಾಣುವುದಿಲ್ಲ ಮೇಲಾಗಿ, ದಾಸ ಕೂಟವೆನಿಸಿಕೊಳ್ಳಬಲ್ಲ ಹರಿದಾಸರ ಸಂಘಟನೆಯಾದಂತೆ ವಾದವಿವಾದರಸಿಕರಾದ ಗೊಷ್ಠ ಪಂಡಿತರ ಸಂಘಟನೆ ಯಾವ ಕಾಲಕ್ಕೂ ಆಗಲಿಲ್ಲ ಆಯಾ ಮಠಕ್ಕೆ ಅಂಟಿ ಕೊಂಡು ಈ ಪಂಡಿತರು ಮೆರೆಯುತ್ತಿದ್ದರಷ್ಟೇ ವಿನಾ ವ್ಯಾಸ–ಕೂಟವೆಂಬ ವಿಶಾಲ ವಾದ ವ್ಯವಸ್ಥೆ ಎಂದೂ ಇರಲಿಲ್ಲ ವ್ಯಾಸಕೂಟ'ವೆಂಬ ಹೆಸರಿನಲ್ಲಿನ 'ವ್ಯಾಸ' ಎಂಬುದು ವ್ಯಾಸತೀರ್ಥರಿಗೆ ಅನ್ವಯಿಸುವುದಲ್ಲ, ಬ್ರಹ್ಮಸೂತ್ರ ಸಂಪ್ರದಾಯವನ್ನು ಸ್ಪಷ್ಟಗೊಳಿಸಿದ ವೇದವ್ಯಾಸ (ಅಥವಾ ಬಾದರಾಯಣ)ರನ್ನು ಸೂಚಿಸುತ್ತದೆ ಪಂಡಿತರಿಗೆ ಪರಮಪ್ರಮಾಣ ಇದೇ ತಾನೆ ? 'ದಾಸ–ಕೂಟ'ವೇನೋ ವಿಶಿಷ್ಟವಾಗಿ ವಿಶಾಲವ್ಯಾಪ್ತಿಯಿಂದ ಮೈದಳೆದದ್ದು ನಿಜ ಇದು ಹೀಗೆ ಮೈದಳೆಯಲು ವ್ಯಾಸ ತೀರ್ಥರ ನೆರವು ಕಾರಣವಾಯಿತೆನ್ನಬಹುದು ಇನ್ನು ಕೆಲವರು ಹೀಗೆ ವ್ಯಾಸಕೂಟ, ದಾಸಕೂಟಗಳೆಂಬ ಇಬ್ಭಾಗದ ವ್ಯವಸ್ಥೆ ಕೇವಲ ಕಾಲ್ಪನಿಕವಾದುದು ಎನ್ನುವುದುಂಟು ಇದು ಸ್ವಲ್ಪ ಮಟ್ಟಿಗೆ ದಿಟ ವ್ಯಾಸಕೂಟ–ದಾಸಕೂಟಗಳೆಂದು ಎರಡು ಅಧಿಕೃತ ಸಂಸ್ಥೆಗಳಾಗಿ ಕೆಲಸ ಮಾಡುತ್ತಿದ್ದುವೆಂದೂ, ಅವುಗಳ ನಡುವೆ ವಿರಸ, ಸೆಣಸಾಟ, ಮೇಲಾಟಗಳು ನಡೆಯುತ್ತಲೇ ಇದ್ದುವೆಂದೂ ಯಾರೂ ಭಾವಿಸಲಾರರು ಆದರೆ ಮಡಿವಂತಿಕೆಯ ಪಂಡಿತರು ಸಂಸ್ಕೃತ, ಶಾಸ್ತ್ರಾಧ್ಯಯನ, ವಾದ, ವಾಕ್ಯಾರ್ಥಗಳನ್ನೇ ಮುಂದೆ ಮಾಡಿಕೊಂಡು ಹರಿದಾಸರ ಮನೋವೃತ್ತಿಯನ್ನೂ ನಡಾವಳಿಯನ್ನೂ ಜರಿಯುವುದು, ತೆಗಳುವುದು ಈ ಕಾಲದಲ್ಲಿಯೂ ಇದ್ದೇ ಇದೆಯೆಂದಮೇಲೆ ಮೂರು-ನಾಲ್ಕುನೂರು ವರ್ಷಗಳ ಹಿಂದೆ ಇದು ಎಷ್ಟು ಪ್ರಬಲವಾಗಿದ್ದಿತೆಂದು ಊಹಿಸಿಕೊಳ್ಳಬಹುದು ಹರಿದಾಸರು ಪಂಡಿತರಲ್ಲದುದು ಮಾತ್ರವಲ್ಲ, ಪಾಂಡಿತ್ಯ ವನ್ನೂ ಅಲ್ಲಗಳೆದರು, ಪಂಡಿತರ ಜ್ಞಾನಪಾರಮ್ಯವನ್ನು ಒಪ್ಪಿಕೊಳ್ಳದೆ ಭಕ್ತಿಯೇ ಸಾಧನವೆಂದು ಹಟಹಿಡಿದರು ಶಾಸ್ತ್ರದಲ್ಲಿ ಭಕ್ತಿಯೇ ಉತ್ತಮ ಸಾಧನವೆಂಬ ಪ್ರಕ್ರಿಯೆಯಿದ್ದರೂ, ವ್ಯವಹಾರದಲ್ಲಿ ಜ್ಞಾನಾರ್ಜನೆಗಿದ್ದ ಬೆಲೆ ಭಕ್ತಿಸಂಪನ್ನತೆಗಿರಲಿಲ್ಲ ಪಂಡಿತರ ಪಾಲಿಗೆ ಜ್ಞಾನವೇ ಮುಖ್ಯವೆಂದಾಯಿತು, ಜ್ಞಾನವೆಂದರೆ ಶಾಸ್ತ್ರಜ್ಞಾನವೇ ಎಂಬ ಸಂಕುಚಿತಾರ್ಥವೂ ಉಳಿದುಕೊಂಡಿತು ಈ ಬಗೆಯ ಜ್ಞಾನಕ್ಕೆ ಅಧಿಕಾರವನ್ನು ಹೇಳುವಾಗ ಜಾತಿ, ಮತ, ಕುಲ, ಮನೆತನ, ಆಚಾರ, ಆಡಂಬರಗಳೆಲ್ಲ ಸೇರಿಕೊಂಡು ಬಂದುವು ಹರಿದಾಸರು ಹೀಗೆ ಜ್ಞಾನಾಧಿಕಾರಿಗಳೆಂದು ಪಂಡಿತರು ಒಪ್ಪಲು ಸಿದ್ಧ ರಾಗಿರಲಿಲ್ಲ ಹರಿದಾಸರಾದರೋ ಭಾವುಕರು, ಪಾಂಕ್ತವಾದ ಶಾಸ್ತ್ರಜ್ಞಾನವಿರದಿದ್ದರೂ ಅಪರೋಕ್ಷ ಜ್ಞಾನದ ಸ್ವಭಾವವನ್ನು ಅರಿತುಕೊಂಡಿದ್ದರು ತಾರಕವಾದ ಜ್ಞಾನವನ್ನು ಪಡೆದುಕೊಳ್ಳಲು ಸುದೀರ್ಘವಾದ ಅಧ್ಯಯನವೇ ದಾರಿಯೆಂದು ಅವರು ಬಗೆಯಲಿಲ್ಲ,

ಅನುಗ್ರಹವೆಂಬ ಪ್ರಕಾರದಲ್ಲಿ ಅವರ ಶ್ರದ್ಧೆ ಹೆಚ್ಚಿನದು ಅನುಗ್ರಹವಾದರೆ ಕೋಣವೂ ವೇದವನ್ನು ವದರೀತು ಅನುಗ್ರಹವಿಲ್ಲದಿದ್ದರೆ 'ಪಂಡಿತರೆಲ್ಲ ಗಂಡನ ಕಾಣದೆ ಮುಂಡೇರಾದರು' ಈ ಎರಡು ವಿಭಿನ್ನ ಮನೋವೃತ್ತಿಗಳು ಹಿಂದಿನ ಕಾಲದಲ್ಲೂ ಇದ್ದುವು , ಇಂದಿಗೂ ಮರೆಯಾಗಿಲ್ಲ ಈ ಎರಡನ್ನು ಸ್ಥೂಲವಾಗಿ ಬೇರ್ಪಡಿಸಿ ನಿರ್ದೇಶಿಸಲು 'ವ್ಯಾಸಕೂಟ', 'ದಾಸಕೂಟ'ಗಳೆಂಬ ಮಾತುಗಳನ್ನು ಹೊಸೆದರು ಅಷ್ಟೆ

ವ್ಯಾಸತೀರ್ಥರು ಪಂಡಿತರೂ ಹೌದು, ಹರಿದಾಸರೂ ಹೌದು ಪಂಡಿತರಾಗಿ ವಾದಗ್ರಂಥಗಳನ್ನು ರಚಿಸಿ, ದೇಶಸಂಚಾರವಮಾಡಿ ವಾದಗಳನ್ನು ನಡಸಿ ಯಶಸ್ಸು ಗಳಿಸಿದನಂತರ ಅವರಿಗೆ ಹರಿದಾಸ್ಯದ ಸ್ವಾರಸ್ಯ ಮನವರಿಕೆಯಾಗಿ ಅದನ್ನೇ ತಾವು ಹಿಡಿದುದು ಮಾತ್ರವಲ್ಲ, ಅದರ ಪ್ರಚಾರವನ್ನೂ ಕೈಗೊಂಡರು ವೇದವ್ಯಾಸರ ಬ್ರಹ್ಮಸೂತ್ರದಂಥ ನಿರ್ಣಾಯಕಗ್ರಂಥವನ್ನು ಪಂಡಿತರು ಕೂಡ ಮಡಿಯಲ್ಲೇ ಅಧ್ಯಯನಮಾಡಬೇಕೆಂಬ ಹಟವಿದ್ದಾಗ, ಬ್ರಾಹ್ಮಣರೇ ಆಗಲಿ ಅಧಿಕಾರವಿರದಿದ್ದರೆ ಅದರ ಹತ್ತಿರವೂ ಸುಳಿಯಬಾರದೆಂಬ ಆಗ್ರಹವಿದ್ದಾಗ, ವ್ಯಾಸತೀರ್ಥರು ಬ್ರಹ್ಮ ಸೂತ್ರದ ಅರ್ಥವನ್ನು ಎಲ್ಲರಿಗೂ ದೊರಕುವಂತೆ ತಿಳಿಗನ್ನಡದಲ್ಲಿ ತಿಳಿಯಹೇಳ ಹೊರಟದ್ದು ಅವರ ಸಾಹಸಕ್ಕೊಂದು ಸಾಕ್ಷಿ ಬ್ರಹ್ಮಸೂತ್ರದ ಮೊದಲನೆಯ ಸೂತ್ರವನ್ನು ಅವರು 'ಜಿಜ್ಞಾಸುವಿಗೆ ಜ್ಞಾನ ಕಾರಣ । ಜ್ಞಾನಿಗೆ ಅಪರೋಕ್ಷ ಕಾರಣ। ಅಪರೋಕ್ಷಿಗೆ ಅಧಿಕಾನಂದ ಕಾರಣ । ಮುಕ್ತಗೆ ತಾನೇ ಫಲರೂಪ । ಸಿರಿಕೃಷ್ಣನ ಪಾದಸೇವೆ । ಇದರ ತೂಕಕ್ಕೆ ಸಾಕೆ ಕೈವಲ್ಯ ॥' ಎಂದು ವಿವರಿಸಿದಾಗ ಹರಿದಾಸ್ಯದ ಹೆಚ್ಚಳವನ್ನೇ ಪ್ರತಿಪಾದಿಸಿದರು

ಪಂಡಿತರಲ್ಲಿ ಬೂಟಕತನವಿದ್ದಂತೆ ಹರಿದಾಸರಲ್ಲೂ ಇದ್ದಿತು ಅವರಲ್ಲಿ ಜ್ಞಾನದ ಆಡಂಬರವಿದ್ದರೆ ಇವರಲ್ಲಿ ಭಕ್ತಿಯ ಸೋಗು ಪಂಡಿತರಾದರೆ ಮಠದ ಕಟ್ಟುಪಾಡಾದರೂ ಉಂಟು, ಹರಿದಾಸರಿಗೆ ಅದೂ ಇಲ್ಲವಲ್ಲ ! ಹೊಟ್ಟೆಹೊರೆದು ಕೊಳ್ಳಲು, ಜನರ ಆದರವನ್ನು ಸೂರೆಗೊಳ್ಳಲು ವಂಚಕರಾದ ಹರಿದಾಸರು ಹೆಚ್ಚಿ ದುದು ಸಹಜವೇ ವ್ಯಾಸತೀರ್ಥರ ಗಮನಕ್ಕೇನು ಇದು ಬಾರದೆ ಹೋಗಲಿಲ್ಲ 'ದಾಸರೆಂದರೆ ಪುರಂದರದಾಸರಯ್ಯ' ಎಂಬ ಕೀರ್ತನೆಯಲ್ಲಿ ಅವರು ಹರಿದಾಸರ ವಂಚಕತನವನ್ನು ಎತ್ತಿ ಆಡಿದ್ದಾರೆ

ದಾಸರೆಂದರೆ ಪುರಂದರದಾಸರಯ್ಯ<br>
ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ ಪ

ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು
ದಾಸನೆಂದು ತುಳಸೀ ಮಾಲೆಗಳ ದರಿಸಿ
ಬೇಸರಿಲ್ಲದೆ ಅವರ ಬೇಡಿ ಬಳಲಿಸುತ್ತ
ಕಾಸು ಗಳಿಸುವ ಪುರುಷ ಹರಿದಾಸನೇ ೧

ಪಾರಕಸ ತೆರನಂತೆ ಪದಗಳನೇ ತಾ ಪಾಡಿ
ಕೂಟಜನರ ಮನಸು ತೋಷಬಡಿಸಿ
ಗೂಟನಾಮವನಿಟ್ಟು ಕೋವಿದನು ತಾನೆನುತ
ಬೂಟಿಕೆಯ ಮಾಡಲವ ಹರಿದಾಸನೇ ೨

ಡಂಭದಿಂ ಹರಿಸ್ಮರಣೆ ಮಾಡಿ ಜನರ ಮುಂದೆ
ಸಂಭ್ರಮದಿ ತಾನುಂಬ ಊಟ ಬಯಸೀ
ಅಂಬುಜೋದ್ಭವ ಪಿತನ ಆಗಮಗಳರಿಯದೆ
ತಂಬೂರಿ ಮೀಟಿದವ ಹರಿದಾಸನೇ ೩

ಯಾಯವಾರವ ಮಾಡಿ ವಿಪ್ರರಿಗೆ ವ್ಯಾಖ್ಯಾನ್ನ
ಪ್ರೀಯದಲಿ ತಾನೊಂದು ಕೊಡದ ಲೋಭಿ
ಮಾಯಸಂಸಾರದಲಿ ಮಮತೆ ಹೆಚ್ಚಾಗಿಟ್ಟು
ಗಾಯನವ ಮಾಡಲವ ಹರಿದಾಸನೇ ೪

ನೀತಿಯೆಲ್ಲವನರಿತು ನಿಗಮವೇದ್ಯನ ನಿತ್ಯ
ಮಾತುಮಾತಿಗೆ ಬಿಡದೆ ವರ್ಣಿಸುತಲಿ
ಗೀತನರ್ತನದಿ ಶ್ರೀಕೃಷ್ಣನ್ನ ಪೂಜಿಸುವ
ಪೂತಾತ್ಮದಾಸ ಪುರಂದರದಾಸರಯ್ಯ ೫

ವ್ಯಾಸರಾಯರ ಶಿಷ್ಯವರ್ಗದಲ್ಲಿ ಪುರಂದರದಾಸರು, ಕನಕದಾಸರು, ವೈಕುಂಠ ದಾಸರು ಮೊದಲಾದ ಹರಿದಾಸರೂ ಇದ್ದರು, ವಿಜಯೀಂದ್ರತೀರ್ಥರು, ವಾದಿರಾಜರು, ಗೋವಿಂದ ಒಡೆಯರು, ನಾರಾಯಣಯತಿಗಳು ಮೊದಲಾದ ಪಂಡಿತರೂ ಇದ್ದರು ಮೊದಲ ಗುಂಪಿನವರು ಹರಿದಾಸರಲ್ಲಿ ಉತ್ತಮರಾಗಿದ್ದಂತೆ ಎರಡನೆಯ ಗುಂಪಿನವರು ಪಂಡಿತರಲ್ಲಿ ಉತ್ತಮರು; ಅವರನ್ನು 'ದಾಸಕೂಟಾಗ್ರ ಗಣ್ಯ'ರೆನ್ನಬಹುದಾದರೆ ಇವರು 'ವ್ಯಾಸಕೂಟಾಗ್ರಗಣ್ಯ'ರು ಹರಿದಾಸರೆಂದ ಮಾತ್ರಕ್ಕೆ ಅವರು ಪಂಡಿತರಲ್ಲವೆಂದಲ್ಲ, ಪಂಡಿತರೆಂದಮಾತ್ರಕ್ಕೆ ಹರಿದಾಸರಲ್ಲ ವೆಂದಲ್ಲ ಜ್ಞಾನವು ಮುಕ್ತಿಗೆ ಕಾರಣವೆಂದು ಹರಿದಾಸರೂ ಬಲ್ಲರು, ಭಕ್ತಿಯೇ

ಉತ್ತಮ ಸಾಧನವೆಂದು ಪಂಡಿತರೂ ಬಲ್ಲರು ಹರಿಸರ್ವೋತ್ತಮ, ವಾಯು ಜೀವೋತ್ತಮ, ಪಂಚಭೇದ, ತಾರತಮ್ಯ ಮೊದಲಾದ ವೇದಾಂತ ಪ್ರಮೇಯಗಳೆಲ್ಲ ಎರಡೂ ಗುಂಪಿನವರಿಗೆ ಸಮಾನವಾಗಿಯೇ ಮಾನ್ಯ

ಶ್ರುತಿಸ್ಮೃತೀತಿಹಾಸಪುರಾಣಗಳನ್ನು ಎರಡೂ ಗುಂಪಿನವರು ನಂಬುವರು, ಆದರೆ ಹರಿದಾಸರಿಗೆ ಪುರಾಣಪ್ರಸಕ್ತಿ ಹೆಚ್ಚು ದಾಸರು ಪುರಾಣಗಳ ಪರಿಚಯ ದಿಂದಲೇ ತಮ್ಮ ತಾತ್ತ್ವಿಕವಾದ ನಿಲುವನ್ನು ಪಡೆದುಕೊಂಡರು ಪಂಡಿತರಂತೆ ಮಾಧ್ವಸಿದ್ಧಾಂತದ ಪ್ರಮೇಯಗ್ರಂಥಗಳನ್ನೆಲ್ಲ ವ್ಯಾಕರಣ-ತರ್ಕಗಳ ನೆರವಿನಿಂದ ಅಧ್ಯಯನಮಾಡಿ, ಶ್ರುತಿ–ಸ್ಮೃತಿಗಳಿಗೆ ಸಮ್ಮತವಾಗುವಂತೆ ಶಾಸ್ತ್ರದ ಶೈಲಿಯಲ್ಲಿಯೇ ಕೇವಲ ಸಂಸ್ಕೃತದಲ್ಲಿ ಅದವಾ ಸಂಸ್ಕೃತಭೂಯಿಷ್ಠವಾದ ದೇಶಭಾಷೆಯಲ್ಲಿ, ಪ್ರವಚನ ಮಾಡಬಲ್ಲ ಪಂಡಿತರು 'ವ್ಯಾಸಕೂಟ'ದವರೆನಿಸಿಕೊಂಡರು ಸಾಮಾನ್ಯ ಜನರಾಗಲಿ, ಅನಧಿಕಾರಿವರ್ಗದವರಾಗಲಿ, ಪೂರ್ವಸಿದ್ಧತೆಯಿಲ್ಲದವರಾಗಲಿ ಇವರಿಂದ ದೂರವೇ ಆದರೆ ಸಿದ್ಧಾಂತದ ಪ್ರಮುಖಪ್ರಮೇಯಗಳನ್ನು ಸ್ಥೂಲವಾಗಿ ಗುರುಮುಖದಿಂದಲೋ ಗ್ರಂಥಾವಲೋಕನದಿಂದಲೋ ಪಡೆದುಕೊಂಡಿದ್ದರೂ ಮುಖ್ಯವಾಗಿ ಪುರಾಣಗಳನ್ನೇ ಅವಲಂಬಿಸಿ, ಜಾಣ್ಮೆಯಿಂದ ನಾಣ್ನುಡಿಗಳಿಂದ ಧರ್ಮದ, ಭಕ್ತಿಯ ಆಧಿಕ್ಯವನ್ನು ಜನಸಾಮಾನ್ಯರಿಗೆ ಅರ್ಥವಾಗುವ ಭಾಷೆಯಲ್ಲಿ ಶೈಲಿಯಲ್ಲಿ ತಿಳಿಯಹೇಳುವ ಹೊಣೆ ಯನ್ನು ಹರಿದಾಸರು ಹೊತ್ತುಕೊಂಡರು ಹೀಗೆ ಅವರು ಸಿದ್ಧಾಂತದ ನಿಲುವನ್ನು 'ಸೀಮೆಯೊಳು ಪ್ರಾಕೃತಗೀತೆಯಲಿ' ಬಯಲು ಮಾಡುವರೆಂದು ಪಂಡಿತರ ಮುನಿಸು ಹರಿದಾಸರ ಕನ್ನಡಾಭಿಮಾನವನ್ನು ನಾವು ಗಮನಿಸಬೇಕು ಪಂಡಿತರು ಸಂಸ್ಕೃತದಲ್ಲಿ ಸಿದ್ಧಾಂತವನ್ನು ವಿವರಿಸಲು ಉದ್ಗ್ರಂಥಗಳನ್ನು ಬರೆದರು ವ್ಯಾಸತೀರ್ಥರೇ ನ್ಯಾಯಾಮೃತ, ತರ್ಕತಾಂಡವ, ತಾತ್ಪರ್ಯಚಂದ್ರಿಕಾ, ಮಂದಾರಮಂಜರೀ, ಭೇದೋಜ್ಜೀವನ ಮೊದಲಾದ ಗ್ರಂಥಗಳನ್ನು ಬರೆದರು, ಅವನ್ನು ಓದಿ ಅರ್ಥಮಾಡಿ ಕೊಳ್ಳಲು ಪಂಡಿತರೇ ಹೆಣಗಾಡಬೇಕು, ಭಾಷೆಯಾಗಲಿ ವಸ್ತುವಾಗಲಿ ಕಬ್ಬಿಣದ ಕಡಲೆಯೇ ಆದರೆ ಪುರಂದರದಾಸರ ಸಾಹಿತ್ಯ ಅದೇ ವಿಷಯವನ್ನು ಕುರಿತದ್ದಾದರೂ ಪಂಡಿತಪಾಮರಗ್ರಾಹ್ಯ, ವಿಜಯದಾಸರ ಮಾತಿನಲ್ಲಿ 'ಮುನಿಮಧ್ವಹೃದಯವೇ ಪ್ರಾಕೃತಗ್ರಂಥವಿದು'

ಮೇಲಾಗಿ, ಹರಿದಾಸಪಂಥದಲ್ಲಿ ದೀಕ್ಷೆ ತಳೆದವರಿಗೆಲ್ಲ ಅನ್ವಯವಾಗುವ ಕೆಲವು ನಿರ್ದಿಷ್ಟ ವಿಧಿ ನಿಷೇಧಗಳುಂಟು ಸಾಮಾನ್ಯವಾದ ಆಚಾರ, ವರ್ಣಾಶ್ರಮಧರ್ಮ, ನಿತ್ಯನೈಮಿತ್ತಿಕ ಕ್ರಿಯೆಗಳು ಇವೆಲ್ಲ ಉಳಿದ ವೈದಿಕರೊಂದಿಗೆ ಸಮನೇ ಆದರೂ ಸ್ಪಷ್ಟವಾದ ಈ ಕೆಲವು ಕಟ್ಟುಪಾಡುಗಳು ಅವರನ್ನು ಬೇರ್ಪಡಿಸುವಂಥವು

'ಶ್ರುತಿ, ಸ್ಮೃತಿ, ಇತಿಹಾಸ, ಪುರಾಣಗಳನ್ನು ನಂಬುವೆನು'
'ಸಾಲ ಮಾಡೆನು, ಸಾಲದೆನೆನು, ನಾಳೆಗಿಡೆನು'

'ಹರಿದಿನ–ವ್ರತಾಚರಣೆ ಬಿಡೆನು'
'ಗುರುನಿಂದೆ, ಹರಿನಿಂದೆ ಆಲಿಸಿದೊಡೆ ಆತ್ಮಶುದ್ಧಿಯ ಮಾಡಿಕೊಳುವೆನು'
'ಹರಿಸೇವೆಗೆಂದು ಈ ಬದುಕನ್ನು ಮೀಸಲಿಡುವೆನು'

ಇದಲ್ಲದೆ, ಹರಿದಾಸರ ವೇಷ–ಭೂಷಣ (ಕಾಲಲ್ಲಿ ಗೆಜ್ಜೆ, ಕೊರಳಲ್ಲಿ ತುಳಸೀ ಮಾಲೆ, ಹಣೆಯ ಮೇಲೆ ಚಂದನದ ನಾಮ, ಮೈಮೇಲೆ ಮುದ್ರಾಂಕನ), ಅವರು ಒಯ್ಯುವ ವಾದ್ಯ ಮತ್ತಿತರ ಸಾಮಗ್ರಿ (ದಂಡಿಗೆ, ಬೆತ್ತ, ಗೋಪಾಳ ಬುಟ್ಟಿ, ಚಿಟಿಗ), ಅವರ ಯಾಯಾವಾರ ವೃತ್ತಿ (ಮಧುಕರ ವೃತ್ತಿ, ಊರಿನ ಕೇರಿಗಳಲ್ಲಿ ತಿರುಗುತ್ತ ಮನೆ ಮನೆಯಿಂದ ಬಿಕ್ಷೆ ಬೇಡಿ ತರುವುದು), ಅವರ ಗಾಯನ, ನರ್ತನ ಮೊದಲಾದುವು ದಾಸಕೂಟದ ನಿರ್ದೇಶನಕ್ಕೆ ನೆರವಾದುವು ವ್ಯಾಸಕೂಟದ ಪಂಡಿತರಂತಲ್ಲದೆ ಹರಿದಾಸರು ಒಂದೆಡೆ ನೆಲೆಸದೆ ತೀರ್ಥಕ್ಷೇತ್ರಗಳ ಸಂದರ್ಶನಕ್ಕೆಂದು ಊರೂರು ತಿರುಗುತ್ತಿದ್ದರು ವಾದಿರಾಜರ ಸುಳಾದಿಯೊಂದು ಹರಿದಾಸರ ಈ ದೀಕ್ಷೆಯನ್ನು ಎತ್ತಿ ಹೇಳುತ್ತದೆ

ಗಾತ್ರವ ಬಳಲಿಸಿ ಶ್ರೋತ್ರದಿ ಕೇಳುತ
ಯಾತ್ರೆಯ ಮಾಡು ವೇಂಕಟಪತಿ ಮೂರ್ತಿಯ
ನೇತ್ರದಿ ನೋಡು ಕಾಮಿತಾರ್ಥವ ಕೊಡುವ ಸ
ದ್ಭಕ್ತರ ಕಂಡು ಸರ್ವೋತ್ತಮನ ನಂಬು

ಯಾತ್ರೆಯೆಂದರೆ ಭಗವಂತನ ಅರ್ಚಾವತಾರಗಳನ್ನು ಕಣ್ಣಾರೆ ಕಂಡು, ಅಲ್ಲಲ್ಲಿನ ಲೀಲೆಗಳನ್ನು ಕೇಳಿ, ಅಲ್ಲಿ ನೆರೆದಿರುವ ಭಕ್ತರನ್ನು ಸೇರಿ, ಭಗವಂತನ ಮಹಿಮೆಯನ್ನು ದೃಢಪಡಿಸಿಕೊಳ್ಳುವುದು ಎಂದು ದಾಸಕೂಟದವರ ನಂಬಿಕೆ

## 8

ಇನ್ನು ಮಾಡಬೇಕಾಗಿರುವುದು ಪುರಂದರದಾಸರ ಸಾಹಿತ್ಯದ ಗಾತ್ರ, ಸ್ವರೂಪಗಳನ್ನು ಕುರಿತ ವಿಚಾರ ಪುರಂದರದಾಸರು ಹರಿದಾಸ ವೃತ್ತಿಯನ್ನವಲಂಬಿಸಿದ ಮೇಲೆ 1565ರಲ್ಲಿ ತಮ್ಮ ಎಂಬತ್ತೈದನೆಯ ವಯಸ್ಸಿನಲ್ಲಿ ತೀರಿಕೊಳ್ಳುವವರೆಗೂ ಕನ್ನಡದಲ್ಲಿ ಎಡೆಬಿಡದೆ ಹಾಡುಗಳನ್ನು ತಾವೇ ರಚಿಸಿ ಹಾಡಿದರು ಈ ಹಾಡುಗಳನ್ನು ದೇವರನಾಮಗಳೆಂದೂ ಪದಗಳೆಂದೂ ಕರೆಯುವ ವಾಡಿಕೆಯಿದೆ ಒಟ್ಟು ಅವರ ಕೃತಿಗಳು ಒಂದು ಲಕ್ಷ ಎಪ್ಪತ್ತೈದು ಸಾವಿರವೆಂದು ನಂಬಿಕೆ , ಒಂದು ಲಕ್ಷ ಇಪ್ಪತ್ತೈದು ಸಾವಿರವೆಂದು ಇನ್ನೊಂದು ಪಾಠ ನಿಖರವಾದ ಸಂಖ್ಯೆ ಏನಾದರಿರಲಿ, ಇಷ್ಟು ದೊಡ್ಡ ಪ್ರಮಾಣದಲ್ಲಿ ಕೃತಿರಚನೆ ಮಾಡುವುದು ಎಂಥ ಪ್ರತಿಭಾಶಾಲಿಗಾದರೂ

ಸಾಧ್ಯವೇ ಎಂದು ವಿಮರ್ಶಕರು ತರ್ಕ ಮಾಡುವುದು ಸರಿಯೇ ಮೇಲೆ ಕಾಣಿಸಿದ ನಂಬಿಕೆಗೆ ಆಧಾರ ಪುರಂದರದಾಸರದ್ದೇ ಎಂದು ಕಾಣಿಸುವ ಒಂದು ಪದದಲ್ಲಿ ಬಂದಿರುವ ಪ್ರಸ್ತಾಪ , ಅದನ್ನು ಸಮರ್ಥಿಸುವಂತೆ ವಿಜಯದಾಸರ ಒಂದು ಹೇಳಿಕೆ

ಪುರಂದರದಾಸರು 'ವಾಸುದೇವನ ನಾಮಾವಳಿಯ ಕ್ಲುಪ್ತಿಯನು, ವ್ಯಾಸ ರಾಯರ ದಯದಿಂದ ಬಿನ್ನೈಸುವೆನು' ಎಂದು ಆರಂಭಮಾಡಿ,

ನಾಲ್ಕು ಲಕ್ಷಯಿ(ಯೆ)ಪ್ಪತ್ತೈದು ಸಾವಿರ ಕೃತಿಯು
ಕಂತುಜನಕನ ನಾಮ ಘನಮಹಿಮೆ
ಸಂತಸದಿ ಶ್ರುತಿಸ್ಮೃತಿ ಸಮ್ಮತದಿಂದ
ಪುರಂದರವಿಟ್ಠಲ ವ್ಯಾಸಮುನಿಗಳು ಪೇಳಿಸಿದರು

ಎಂದಿದ್ದಾರೆ ವಿಜಯದಾಸರ ಸುಳಾದಿಯೊಂದರಲ್ಲಿ

ಸೃಷ್ಟಿಯೊಳಗೆ ಎಲ್ಲ ಗಣಿತ ಮಾಡಲಾಗಿ
ಮೆಟ್ಟಿಗೆ ತ್ರಿಪಾದ ಕಡಮೆ ಐದು ಲಕ್ಷ
ಇಷ್ಟಾದವು ದಾಸರು ಪೇಳಿದ ಪದ
ಇಷ್ಟ ದೈವನಾದ ವಿಜಯವಿಠಲ ಹರಿಯು
ಗುಟ್ಟಿನಿಂದಲಿ ಸಲಿಸಿ ಕುಣಿಕುಣಿಸುತಲಿ

ಎಂಬ ಒಕ್ಕಣೆಯಿದೆ 'ಐದು ಲಕ್ಷಕ್ಕೆ ತ್ರಿಪಾದ ಕಡಮೆ'ಯೆಂದರೆ ನಾಲ್ಕು ಲಕ್ಷ ಇಪ್ಪತ್ತೈದು ಸಾವಿರವಾಯಿತು ಇಂದಿರೇಶ ಕವಿ ಸಂಸ್ಕೃತದಲ್ಲಿ ರಚಿಸಿರುವ 'ದಾಸಾರ್ಯಸ್ತುತಿ'ಯಲ್ಲಿ

'ಪಾದೋಜ್ಝಿತೇಷು ಸಮಸಂಖ್ಯಕಲಕ್ಷ ಲಕ್ಷ್ಮೀ
ನಾಥಾಮೃತೋತ್ತಮ ವಿಭೂತಿಕಥಾಪದಾನಿ

ಎಂದು 'ಒಂದುಪಾದ ಕಡಮೆ' ಎಂದಿದೆ , ಎಂದರೆ ನಾಲ್ಕು ಲಕ್ಷ ಎಪ್ಪತ್ತೈದು ಸಾವಿರವಾಯಿತು ಇದೇ ಅರ್ಥ ಬರುವಂತೆ ವಿಜಯದಾಸರದ್ದೇ ಆದ ಇನ್ನೊಂದು ಹೇಳಿಕೆಯಿದೆ

ಲಕ್ಷ್ಮೀಪತಿಯ ಪಾದದಲ್ಲಿ ಲಕ್ಷ್ಯವಿಟ್ಟು, ವ್ಯಾಸರಾಯ
ಶಿಕ್ಷೆಯಿಂದಲಿ ಅಂಕಿತ ಕೊಳ್ಳುತ, ಪದಕೊರತೆ ಐದು
ಲಕ್ಷ ಪದ–ಸುಳಾದಿ ಪೇಳ್ದಾತ

ದಾಸಕೂಟದವರೂ ಪುರಂದರದಾಸರು ಒಟ್ಟು ಐದು ಲಕ್ಷ ಕೃತಿಗಳನ್ನು ರಚಿಸ ಬೇಕೆಂದು ಸಂಕಲ್ಪಿಸಿದ್ದರೆಂದೂ, ತಮ್ಮ ಸಾವಿಗೆ ಮುಂಚೆ ನಾಲ್ಕುಲಕ್ಷ ಎಪ್ಪತ್ತೈದು

ಸಾವಿರದಷ್ಟು ಮಾತ್ರ ರಚಿಸಲು ಸಾಧ್ಯವಾಯಿತೆಂದೂ, ಇನ್ನುಳಿದ ಇಪ್ಪತ್ತೈದು ಸಾವಿರ ('ಪಾದ') ಕೃತಿಗಳನ್ನು ವಿಜಯದಾಸರು ರಚಿಸಿ ಐದು ಲಕ್ಷವನ್ನು ಪೂರೆಯಿಸಿದ ರೆಂದೂ ನಂಬುತ್ತಾರೆ

ಮೇಲೆ ಕಾಣಿಸಿದ ಪುರಂದರದಾಸರ ಪದದಲ್ಲಿ ತಮ್ಮ ಕೃತಿಗಳ ವಸ್ತು ವಿವರ ಗಳನ್ನು ಹೀಗೆ ವಿಂಗಡಿಸಿರುವುದಿದೆ

| | | |
|---|---|---|
| 1) ತೀರ್ಥಕ್ಷೇತ್ರ ಮಹಿಮೆ (ಕೇದಾರದಿಂದ ರಾಮೇಶ್ವರದವರೆಗೆ) | 1,25,000 | ಕೃತಿಗಳು |
| 2) ಮಧ್ವರಾಯರಿಂದ ವ್ಯಾಸರಾಯರವರೆಗೆ ಗುರು ಸ್ತವನ, ತಂತ್ರಸಾರೋಕ್ತ ದೇವತಾ ತಾರತಮ್ಯ, ಶಾಸ್ತ್ರ ಪ್ರಮೇಯಗಳು | 5,000 | ,, |
| 3) ದೇವತಾಲೋಕ ವರ್ಣನೆಗಳು (ಬ್ರಹ್ಮಲೋಕ, ಕೈಲಾಸ, ದಿಕ್ಪಾಲಕರು | 90,000 | ,, |
| 4) ಪುರಾಣಕಥೆಗಳು (ಬಗವದ್ಭಕ್ತರ ಕಥಾಸಾರ) | 90,000 | ,, |
| 5) ದೇವತಾಮೂರ್ತಿಧ್ಯಾನ ಇತ್ಯಾದಿ (ಕೀರ್ತಿ, ಶಾಲಗ್ರಾಮ ಲಕ್ಷಣ) | 60,000 | ,, |
| 6) ಆಹ್ನಿಕ ಪದ್ಧತಿ, ಏಕಾದಶೀ ನಿರ್ಣಯ ಇತ್ಯಾದಿ | 16,000 | ,, |
| 7) ಸುಳಾದಿಗಳು | 14,000 | ,, |
| 8) ದೇವರನಾಮಗಳು | 25,000 | ,, |
| ಒಟ್ಟು | 4,25,000 | |

ಈ ಮೊತ್ತವನ್ನು ನಾಲ್ಕುಲಕ್ಷ ಎಪ್ಪತ್ತೈದು ಸಾವಿರಕ್ಕೆ ಹಿಗ್ಗಿಸಲು ಕೆಲವರು ದೇವತಾ ಮೂರ್ತಿಧ್ಯಾನ ಇತ್ಯಾದಿ 64,000, ಆಹ್ನಿಕ ಪದ್ಧತಿ, ಏಕಾದಶೀ ನಿರ್ಣಯ ಇತ್ಯಾದಿ 60,000, ಸುಳಾದಿಗಳು 60,000, ಹೀಗೆ ಪಾಠಾಂತರಗಳನ್ನು ಸೂಚಿಸಿ, ಇವಲ್ಲದೆ ಶ್ವೇತದ್ವೀಪ, ಅನಂತಾಸನ, ವೈಕುಂಠ ಮಹಿಮೆ ಶೇಷನ ಚರಿತ್ರೆ 16,000 ಎಂಬ ಇನ್ನೊಂದು ಪ್ರಕಾರವನ್ನೂ ಸೇರಿಸಿದ್ದಾರೆ ಆದರೆ ವಿಜಯದಾಸರು ತಮ್ಮ ಉದಯರಾಗ ವಾರ್ಧಕ ಷಟ್ಪದಿಗೆ ಪರಿಶಿಷ್ಟವಾಗಿ ಕೊಟ್ಟಿರುವ ಪಟ್ಟಿಯೂ 4,25,000ದ ಮೊತ್ತವನ್ನೇ ಹಿಡಿಯುತ್ತದೆ

| | |
|---|---|
| 1,25,000 | ಪುಣ್ಯ ಕ್ಷೇತ್ರಾದಿಗಳ ಮಹಿಮೆ ಪದಗಳು , ಗುರು ಮಧ್ವ ರಾಯರ ಮಹಿಮೆ , ಯತಿಸಂತತಿ |
| 25,000 | ತಂತ್ರಸಾರೋಕ್ತ ಮೂರ್ತಿಧ್ಯಾನ ಕ್ರಮ, ದೇವತಾ ತಾರತಮ್ಯ, ಗುರುಧ್ಯಾನ, ಆ ಆ ಗುರುಗಳ ಚರಿತ್ರೆ |
| 64,000 | ಸುಳಾದಿಗಳು |

36,000 ವೃತ್ತನಾಮಗಳು
60,000 ಶ್ವೇತದ್ವೀಪ, ಅನಂತಾಸನ, ವೈಕುಂಠ, ಸತ್ಯಲೋಕ, ಕೈಲಾಸಾದಿ ದಿಕ್ಪಾಲರನಿಲವರ
40,000 ಕಲ್ಯಾಣ ಚರಿತೆ (ದಶಕಲ್ಯಾಣ, ದಶಚರಿತ್ರೆ)
75,000 ಆಹ್ನೀಕ (ನಿತ್ಯಾಹ್ನಿಕ), ಏಕಾದಶಿ, ಜನ್ಮಾಷ್ಟಮಿ ನಿರ್ಣಯ, ಗಂಡಕಶಿಲಾ (ಶಾಲಗ್ರಾಮ) ಮಹಿಮೆ, ಉಗಾಭೋಗಾದಿ
4,25,000 ಒಟ್ಟು ನಾಲ್ಕುಲಕ್ಷದ ಯಿಪ್ಪತ್ತೈದುಸಾವಿರ

(ನೋಡಿ, 'ಶ್ರೀ ಪುರಂದರದಾಸರು ಮತ್ತು ಶ್ರೀ ಹರಿದಾಸರ ಪರಂಪರೆ', ವರದೇಂದ್ರ ಹರಿದಾಸ ಸಾಹಿತ್ಯ ಮಂಡಲಿ, ಲಿಂಗಸೂಗೂರು)

ಈಗ ನಮಗೆ ಪುರಂದರದಾಸರ ಹೆಸರಿನಲ್ಲಿ ದೊರಕುವ ಕೃತಿಗಳನ್ನೆಲ್ಲ ಕೂಡಿಸಿದರೆ ಒಂದೂವರೆ ಸಾವಿರವನ್ನೂ ಮುಟ್ಟುವುದಿಲ್ಲ ಇನ್ನು ವಸ್ತು, ಶೈಲಿ, ಭಾಷೆ, ಅಂಕಿತ ಮೊದಲಾದ ವಿವರಗಳನ್ನು ಪರಿಶೀಲಿಸಿದರೆ ಅವರದ್ದೇ ಎನ್ನಬಹುದಾದ ಗಟ್ಟಿ ಕೃತಿಗಳು ಒಂದು ಸಾವಿರಕ್ಕೂ ಕಡಮೆಯೇ ! ಇನ್ನು ನಾಲ್ಕೈದು ಲಕ್ಷ ಕೃತಿಗಳ ಮಾತೇನು ? ಪುರಂದರದಾಸರೊಬ್ಬರೇ ನಾಲ್ಕುಲಕ್ಷ ಇ(ಎ)ಪ್ಪತ್ತೈದುಸಾವಿರ ಕೃತಿಗಳನ್ನು ರಚಿಸಿದರೆನ್ನುವುದು ಉತ್ಪ್ರೇಕ್ಷೆಯೇ ಎಂಬುದು ಯಾರಿಗಾದರೂ ತಟ್ಟನೆ ಹೊಳೆಯುವ ವಿಚಾರ ಅಂದಿನಿಂದ ಇಂದಿನವರೆಗೆ ಉಪಲಬ್ಧವಿರುವ ದಾಸಸಾಹಿತ್ಯವನ್ನೆಲ್ಲ ನೋಡಿದರೂ ಕೃತಿಗಳ ಮೊತ್ತ ಇಷ್ಟಾಗಲಾರದು ಈ ವಿವರವಿರುವ ಪುರಂದರದಾಸರ ಪದ ಪ್ರಕ್ಷಿಪ್ತವಾದುದೆನ್ನಬಹುದು , ವಿಜಯದಾಸರು ತಮ್ಮ ಪ್ರಾಸಾದಿಕ ಗುರುಗಳ ಮೇಲಣ ಭಕ್ತಿಯ ಭರದಲ್ಲಿ ಅವರ ರಚನೆಗಳ ಸಂಖ್ಯೆಯನ್ನು ತೀರ ಹಿಗ್ಗಿಸಿದರೆನ್ನಬಹುದು ಹಿಂದಿನವರಿಗೆ, ಅದರಲ್ಲೂ ಹರಿದಾಸರಿಗೆ, ಲಕ್ಷವೆನ್ನುವ ಪರಿಮಿತಿಯ ಅರಿವೇ ಇರಲಿಲ್ಲ ಎಂದು ಹೇಳಬಹುದು , ಹಳೆಯ ಕಾಲದವರು 'ತುಂಬ ಹೆಚ್ಚಿನ ಪ್ರಮಾಣ' ಎನ್ನುವುದಕ್ಕೆ ನೂರು, ಸಾವಿರ, ಲಕ್ಷ ಎಂದೆಲ್ಲ ಪದಗಳನ್ನು ಪರ್ಯಾಯವಾಗಿ ಬಳಸುತ್ತಿದ್ದುದುಂಟು ಆದರೆ ಸಂಪ್ರದಾಯದಲ್ಲಿ ಬಂದ ಒಂದು ವಿವರವನ್ನು ಹೀಗೆ ಒಟ್ಟಾರೆ ತಳ್ಳಿಹಾಕುವುದು ಅಷ್ಟೇನು ಉತ್ತಮವಾದ ಮನೋಧರ್ಮವಲ್ಲ ಮೇಲೆ ಕಾಣಿಸಿರುವ ಪುರಂದರದಾಸರ ಪದವೇನೋ ಪ್ರಕ್ಷಿಪ್ತವಾದುದೇ ಇರಬಹುದು , ಆದರೆ ಅದು ಹೇಳುವ ವಿವರವನ್ನು ಅವರ ಅನುಯಾಯಿಗಳು ಅಂಗೀಕರಿಸಿದ್ದಾರಲ್ಲವೆ ? ವಿಜಯದಾಸರ ಸುಳಾದಿಯನ್ನೂ ಹಾಗೆಯೇ ಪ್ರಕ್ಷೇಪವೆನ್ನಲು ಬರುತ್ತದೆಯೆ ? ಅವರೂ ಅದೇ ವಿವರವನ್ನು ಸಮರ್ಥಿಸಿದ್ದಾರಲ್ಲವೆ ? ಆದುದರಿಂದ ಅವರ ರಚನೆಗಳ ಗಾತ್ರವನ್ನು ನಾಲ್ಕುಲಕ್ಷ ಚಿಲ್ಲರೆ ಎಂದು ನಿರ್ಧರಿಸಿದಾಗ, ಅದಕ್ಕೆ ಏನೋ ಒಂದು ಆಧಾರವಿರಬೇಕು , ಅದು ಆ ಕಾಲಕ್ಕೆ ಎಲ್ಲರಿಗೂ

ತಿಳಿದಿದ್ದು ಈಗ ಅದು ಬಳಕೆಯಿಂದ ಜಾರಿರಬಹುದು ಸಂಸ್ಕೃತದಲ್ಲಿ ಮೂವತ್ತೆರಡು ಅಕ್ಷರಗಳ ಸಮುದಾಯಕ್ಕೆ ಗ್ರಂಥವೆಂಬ ಹೆಸರಿದೆ, ಈಗ ಗ್ರಂಥವೆಂದರೆ ಬೇರೆಯ ಅರ್ಥವೇ ಇದೆಯಲ್ಲ ?

ಮೇಲಾಗಿ, ಪುರಂದರದಾಸರ ಪದದಲ್ಲಿ ಅವರು ನಾಲ್ಕು ಲಕ್ಷ ಯಿ (ಯೆ)ಪ್ಪತ್ತೈದು ಸಾವಿರ "ಕೃತಿ"ಯನ್ನು ಹೇಳಿದುದಾಗಿ ಇದೆ. ಇಲ್ಲಿ, 'ಕೃತಿ' ಯೆಂದರೇನು ಎಂಬುದು ಸ್ಪಷ್ಟವಾಗುವುದಿಲ್ಲ ವಿಜಯದಾಸರು "ಪದಕೊರತೆ ಐದುಲಕ್ಷ ಪದ–ಸುಳಾದಿಗಳ "ಪೇಳ್ದ"ರೆಂದು ಪ್ರಸ್ತಾಪಿಸಿದ್ದಾರೆ ಇಲ್ಲಿ 'ಪದ' ವೆಂದರೇನು ? 'ಸುಳಾದಿ'ಯೆಂದರೇನು ? ಒಂದು ಹಾಡಿನಲ್ಲಿ ಹಲವಾರು 'ಪದ' ಗಳಿರುವ ಉಲ್ಲೇಖವಿದೆ, ಈಗ 'ಚರಣ' ವೆನ್ನುವ ಭಾಗಕ್ಕೆ 'ಪದ'ವೆನ್ನುವ ವಾಡಿಕೆ ಯಿದ್ದಿತು ಈಗ ದೊರತಿರುವ ದೇವರನಾಮಗಳಲ್ಲಿ (ಅಥವಾ ಪದಗಳಲ್ಲಿ) ನಾಲ್ಕೈದು, ಕೆಲವು ವೇಳೆ ಇನ್ನೂ ಹೆಚ್ಚು, ನುಡಿಗಳಿರುತ್ತವೆ ಈ ನುಡಿಗಳನ್ನೆಲ್ಲ ಬೇರೆಬೇರೆಯಾಗಿ ಪರಿಗಣಿಸುತ್ತಿದ್ದುದೂ ಉಂಟು ಈಗ ನಮಗೆ ಪರಿಚಿತವಾಗಿರುವ ಸುಳಾದಿಗಳಲ್ಲಿ ಐದಕ್ಕೆ ಕಡಮೆಯಿಲ್ಲದೆ ಎಂಟಕ್ಕೆ ಹೆಚ್ಚಿಲ್ಲದೆ ಬೇರೆ ಬೇರೆ ತಾಳಗಳಲ್ಲಿ ಅಂಗಗಳಿವೆ, ಈ ಒಂದೊಂದು ಭಾಗಕ್ಕೂ ಸುಳಾದಿಯೆಂದೇ ಹೆಸರು ಒಂದು ಭಾಗವನ್ನು ಇಡೀ ಸುಳಾದಿಯಿಂದ ಬೇರ್ಪಡಿಸಿದಾಗ ಅದು ಉಗಾಭೋಗವೆನಿಸಿ ಕೊಳ್ಳುವುದೂ ಉಂಟು ಇನ್ನು 'ವೃತ್ತನಾಮಾವಳಿ'ಯಲ್ಲಿ ಒಂದೊಂದು ವೃತ್ತವೂ ನಾಮವೂ ಸ್ವತಂತ್ರವಾದ ಭಾಗಗಳೇ ಈ ಧೋರಣೆಯನ್ನು ಹಿಡಿದರೆ ನಾಲ್ಕೈದು ಲಕ್ಷವೆನ್ನುವುದು ಅಸಂಭಾವ್ಯವೆಂದೇನು ಎನಿಸುವುದಿಲ್ಲ ಆ ಸಂಖ್ಯೆಯ ಸಂಜ್ಞೆ ಯೇನು ಎನ್ನುವುದು ತಿಳಿಯಬೇಕಷ್ಟೆ ಅದು ಮಾತ್ರ ಸ್ಪಷ್ಟವಾಗಿಲ್ಲ !

ಈಗ ದೊರೆತಿರುವ ಪುರಂದರದಾಸರ 'ಕೃತಿ'ಗಳಲ್ಲಿ ಎಲ್ಲವೂ ಈ ಕಾಲದ 'ಕೃತಿ'ಯೆಂಬ ಲಕ್ಷಣಕ್ಕೆ ಒಪ್ಪುವಂತಿಲ್ಲ ಅವರ ಒಂದೊಂದು 'ಕೃತಿ'ಯಲ್ಲೂ ಏಕಾರ್ಥವಿದೆ, ಒಂದೇ ಸಂದರ್ಭದ ಸ್ಫೂರ್ತಿಯಿದೆ, ಒಂದೇ ವಿಚಾರಧಾರೆಯಿದೆ ಎನ್ನಲಾಗದು, ಬೇರೆ ಬೇರೆ ನುಡಿಗಳಲ್ಲಿ ಬೇರೆ ಬೇರೆ ವಿಚಾರಗಳೂ ಧೋರಣೆಗಳೂ ಕಾಣಸಿಗುತ್ತವೆ ಕೆಲವು 'ಕೃತಿ'ಗಳಲ್ಲಿ ನುಡಿಗಳು ಅಸಂಗತವಾಗಿರುವುದೂ ಉಂಟು ಹಾಡಿನ ಮೊದಲಸಾಲನ್ನು ಹಿಡಿದು ಅಂಕಿತ ಬರುವ ನುಡಿಯವರೆಗೆ ಒಂದೇ 'ಕೃತಿ' ಯೆಂದು ಬಗೆದು, ಅದನ್ನು ಅಖಂಡವಾದ ಒಂದು 'ಕೃತಿ'ಯೆಂದು ಅಚ್ಚಿನಲ್ಲಿ ಕಾಣಿ ಸುವ, ಅದನ್ನೊಂದು ಸಂಖ್ಯೆಯಿಂದ ನಮೂದಿಸುವ ವಾಡಿಕೆ ಬಂದುದು ಈ ಗೊಂದ ಲಕ್ಕೆ ಕಾರಣವಾಗಿದೆ ಪುರಂದರದಾಸರೇನು ತಮ್ಮ ಕವಿತೆಗಳನ್ನೆಲ್ಲ ಕಾಗದದ ಮೇಲೆ ಅಚ್ಚುಕಟ್ಟಾಗಿ ಬರೆದಿಡಲಿಲ್ಲ, ಬರೆದಿಟ್ಟುಕೊಳ್ಳುವಂಥ ಶಿಷ್ಯರಾದರೂ ಅವರಿಗೆ ಇದ್ದರೋ ಅದೂ ನೆಚ್ಚಿಗೆಯಿಲ್ಲ ಆದರೆ ಅವರ ಕವಿತೆಗಳು ಬಹುಮಟ್ಟಿಗೆ ಒಮ್ಮೆ ಕೇಳಿದರೆ ಮರೆಯಲಾರದಂಥ ಗುಣವನ್ನು ಹೊಂದಿರುವುದರಿಂದ ಜನರ ನೆನಪಿನಲ್ಲಿ ಪಡಿಯಚ್ಚಾಗಿ ಉಳಿದುಕೊಂಡು ಬಂದವು ಮತ್ತೆ ರಾಜಗುರುಗಳಂತಿದ್ದ ವ್ಯಾಸ

ತೀರ್ಥರೇ ದಾಸಕೂಟವೆಂಬ ವ್ಯವಸ್ಥೆಗೆ ಪ್ರೇರಕರಾಗಿದ್ದುದರಿಂದ, ಅವರು ಪುರಂದರ ದಾಸರನ್ನು ಮೆಚ್ಚಿಕೊಂಡಿದ್ದುದರಿಂದ, ದಾಸಕೂಟದವರು ಪುರಂದರದಾಸರ ಹಾಡು ಗಳನ್ನೆಲ್ಲ ಸಂಗ್ರಹಿಸಿದ್ದರೆಂದರೆ ಸಹಜವೇ ದಾಸಕೂಟಕ್ಕೆ ಪುರಂದರದಾಸರೇ ಕೇಂದ್ರ ಸ್ಥಾನದಲ್ಲಿದ್ದವರು ಹಾಗೆ ಇತರರು ಅವರ ರಚನೆಗಳನ್ನು ಸಂಗ್ರಹಿಸಿದಾಗ ಅದು ಬರವಣಿಗೆಯಲ್ಲೂ ಮೂಡಿಕೊಂಡಿರಬೇಕು ಅದಕ್ಕಿಂತ ಹೆಚ್ಚಾಗಿ ಆ ಹಾಡುಗಳನ್ನು ದಾಸಕೂಟದಲ್ಲಿ ಮತ್ತೆ ಮತ್ತೆ ಹಾಡುತ್ತ ಬಂದಿರಬೇಕು ಪುರಂದರದಾಸರ 'ಕೃತಿ'ಗಳ ಪ್ರಚಾರವಾದುದು ಹೀಗೇ ಎಂದು ತೋರುತ್ತದೆ ಪುರಂದರದಾಸರು ಕಾಲವಾದ ತರುಣದಲ್ಲೇ ಹಂಪಿ ಹಾಳಾಯಿತಷ್ಟೆ, ಆರು ತಿಂಗಳ ಕಾಲ ಅದನ್ನು ಶತ್ರುಗಳು ಕೊಳ್ಳೆಹೊಡೆದದ್ದು ಇತಿಹಾಸದ ಪುಟಗಳಲ್ಲೇ ಇದೆ ಈ ಪರಿಸ್ಥಿತಿಯಲ್ಲಿ ದಾಸ ಕೂಟದವರ ಪಾಡೇನು ? ಅವರು ಎಲ್ಲೆಲ್ಲಿ ಓಡಿಹೋದರೊ, ಅವರಲ್ಲಿ ಎಷ್ಟುಮಂದಿ ಹರಿದಾಸ ದೀಕ್ಷೆಯನ್ನು ಉಳಿಸಿಕೊಂಡರೋ ಹೇಳುವುದು ಹೇಗೆ ? ಪುರಂದರದಾಸರ 'ಕೃತಿ'ಗಳು ಹೀಗೆ ಬಳಕೆಯಿಂದ ಜಾರಿದ ಮೇಲೆ ನೂರಾರು ವರ್ಷಗಳ ನಂತರ ವಿಜಯ ದಾಸರು ಶ್ರಮವಹಿಸಿ ಅವನ್ನು ಸಂಗ್ರಹಿಸಿ ತಮ್ಮ ದಾಸಕೂಟದಲ್ಲಿ ಮತ್ತೆ ಬಳಕೆಗೆ ತಂದರು ಪುರಂದರದಾಸರ 'ಕೃತಿ'ಗಳಲ್ಲಿ ಬಹುಭಾಗ ವಿಜಯದಾಸರ ಕಾಲದಲ್ಲಿ ಸಿದ್ಧವಾದ ಪಾಠವೇ ಪುನಃ ಈ ದಾಸಕೂಟವೂ ದುರವಸ್ಥೆಗೀಡಾಗಿ ಮೂಲೆ ಗುಂಪಾದಾಗ ಈ ಪಾಠ ಹೇಗೆ ಉಳಿದುಕೊಂಡಿತೋ ಹೇಳಬಲ್ಲವರಾರು ? ಪುರಂದರ ದಾಸರ ಹೆಸರಿನಲ್ಲಿರುವ ಕೃತಿಗಳೆಲ್ಲ ಅವರ ಕಾಲದಲ್ಲಿದ್ದಂತೆಯೇ ಉಳಿದುಕೊಂಡು ಬಂದಿವೆಯೆಂದು ಯಾರೂ ಶಪಥಮಾಡಿ ಹೇಳಲಾರರು ಬಹುಮಟ್ಟಿಗೆ ಮೌಖಿಕ ಪರಂಪರೆಯಿಂದಲೇ ಬಂದಿರುವ ಆ ಹಾಡುಗಳ ಪಾಠವಾಗಲಿ ಕ್ರಮವಾಗಲಿ ಯಥಾ ವತ್ತಾಗಿ ಉಳಿದುಕೊಂಡು ಬಂದಿರುವುದು ಸಾಧ್ಯವಿಲ್ಲ

ಈಗ ದೊರೆಯುವಷ್ಟೆ 'ಕೃತಿ'ಗಳನ್ನು ಅವರು ರಚಿಸಿದರು ಎನ್ನುವುದಾಗಲಿ, ಈಗ ದೊರೆಯುವಂತೆಯೇ ಅವುಗಳು ಇದ್ದುವೆಂದಾಗಲಿ ಹೇಳಲಾರೆವು. ಈಗ ದೊರೆತಿರುವುದಕ್ಕಿಂತ ಹೆಚ್ಚಿನ ಕೃತಿಗಳು ಕಾಲಕ್ರಮದಲ್ಲಿ ನಷ್ಟವಾದುವು ಎನ್ನುವುದೇ ಹೆಚ್ಚಿನ ಸಂಭವ ಈಗ ಉಳಿದಿರುವ ಕೃತಿಗಳನ್ನು ತಮ್ಮ ಮನೆತನದಲ್ಲಿ ಉಳಿಸಿಕೊಂಡು ಬಂದ ಹರಿದಾಸರು ಅವುಗಳ ಪಾಠ, ಗಾಯನಕ್ರಮ, ರಾಗ, ತಾಳ, ನುಡಿಗಳ ಆನು ಪೂರ್ವಿ ಇವುಗಳ ಮೇಲೆ ಕೈಯಾಡಿಸಲಿಲ್ಲವೆಂದು ಹೇಳುವುದು ಅಸಂಭವ ಮೇಲಾಗಿ, ಹಲವರು ಹರಿದಾಸರು ತಾವೇ ವಾಗ್ಗೇಯಕಾರರಾಗಿ ಕೃತಿರಚನೆಯಲ್ಲಿ ತೊಡಗಿರು ತ್ತಿದ್ದರಾಗಿ, ತಮಗೆ ತೋರಿದಂತೆ ಪುರಂದರದಾಸರ ಕೃತಿಗಳನ್ನು ಮಾರ್ಪಡಿಸಿ ಹಾಡು ತ್ತಿದ್ದರು , ತಮ್ಮ ಭಾವನೆಗಳನ್ನೂ ಅನಿಸಿಕೆಗಳನ್ನೂ 'ದಾಸರಾಯರ' ಪದಗಳಲ್ಲಿ ಮೂಡಿಸುತ್ತಿದ್ದರೆ ಆಶ್ಚರ್ಯವೇನಿಲ್ಲ ಈಗ ಬಳಕೆಯಲ್ಲಿರುವ ಪುರಂದರದಾಸರ ಪದಗಳನ್ನೆಲ್ಲ ಪರಿಶೀಲಿಸಿದರೆ ಏಕಕರ್ತೃಕವೆನ್ನಬಹುದಾದ ಗುಣ ಕಾಣಿಸುವುದಿಲ್ಲ. ಭಾಷೆ, ಶೈಲಿ, ಒಕ್ಕಣೆ, ಧೋರಣೆ, ವಸ್ತು, ತತ್ತ್ವ ಇವುಗಳಲ್ಲಿ ಏಕತಾನತೆಯಿಲ್ಲ

ಮೂಲಸಾಮಗ್ರಿ ಪುರಂದರದಾಸರದ್ದೇ ಇರಬಹುದಾದರೂ ಹಲವರು ಹರಿದಾಸರ ಕೈವಾಡ ಕಾಣಿಸುತ್ತದೆ

ಈ ವಿಚಾರ ಹಾಗಿರಲಿ, ಈಗ ನಮ್ಮ ಕಾಲಕ್ಕೆ ದಾಸಕೂಟದವರ ಶ್ರದ್ಧೆಯಿಂದ ಉಳಿದುಬಂದಿರುವ ಪುರಂದರಸಾಹಿತ್ಯವನ್ನು ಗಮನಿಸಿದರೆ, ಬಿಡಿ 'ಕೃತಿ'ಗಳ ಮೊತ್ತ ಸುಮಾರು ಎಂಟುನೂರು ಎನ್ನಬಹುದು ಇವುಗಳಲ್ಲಿ, ಮೇಲೆ ಪುರಂದರದಾಸರೇ ತಮ್ಮ ಕೃತಿಗಳ ವಿಭಾಗವನ್ನು ಮಾಡಿರುವ ಕ್ರಮವನ್ನು ಗುರುತಿಸಲಾರೆವು ಆ ಪಟ್ಟಿಯ ಹಲವು ವಿವರಗಳಲ್ಲಿ ದಾಸರ ಕೃತಿಗಳು ಇಲ್ಲವೇ ಇಲ್ಲ , ಮತ್ತೆ ಕೆಲವು ವಿವರಗಳು ಖಂಡತುಂಡಾಗಿ ಅಷ್ಟಿಷ್ಟು ಒದಗಿಬಂದಿವೆ ಅಷ್ಟೆ 'ದೇವರ ನಾಮ'ಗಳೆಂಬ ಬೇರೆ ವಿಭಾಗವನ್ನೇ ಕಾಣಿಸಿದ್ದಾರಲ್ಲ, ಅದರ ಸ್ವರೂಪವೇನೆಂಬುದು ತಿಳಿಯುವುದಿಲ್ಲ ವಿಜಯದಾಸರ ಒಕ್ಕಣೆಯಲ್ಲಿ 'ವೃತ್ತ ನಾಮ'ಗಳೆಂಬ ವಿಭಾಗವಿದೆ ಇವೇ ಇಲ್ಲಿನ 'ದೇವರ ನಾಮ'ಗಳೋ ? ಈಗೇನೋ ಎಲ್ಲ ರಚನೆಗಳಿಗೂ 'ದೇವರ ನಾಮ'ವೆಂಬ ಹೆಸರೇ ಬಂದಿದೆ ಸುಳಾದಿಗಳ ಸಂಖ್ಯೆ 'ಹದಿನಾಲ್ಕು ಸಾವಿರ' ಎಂದು ಹೇಳಿದ್ದಾರೆ , ಈಗ ಉಪಲಬ್ಧವಿರುವ ಪುರಂದರದಾಸರ ಸುಳಾದಿಗಳು ಐವತ್ತಮೂರು ಅಷ್ಟೆ ಅಂತೂ, ಉಳಿದುಬಂದಿರುವ ಪುರಂದರ ಸಾಹಿತ್ಯವನ್ನು ಪುರಂದರದಾಸರ ಅಥವಾ ವಿಜಯದಾಸರ ವಿಭಜನಕ್ರಮದಲ್ಲಿ ಅಳವಡಿಸುವುದು ಸಾಧ್ಯವಿಲ್ಲ

ವಿಜಯದಾಸರ ಸಮಕಾಲೀನರಾದ ಪ್ರಸನ್ನವೆಂಕಟದಾಸರು ಪುರಂದರ ಸಾಹಿತ್ಯದ ಸ್ವರೂಪವನ್ನು ಕುರಿತು ಇನ್ನೊಂದು ಒಕ್ಕಣೆಯನ್ನು ಒದಗಿಸಿದ್ದಾರೆ

> ಗೀತರಾಯಿ ಸುಳಾದ್ಯುಗಾಭೋಗ ಪದ್ಯ ಪದ
> ವ್ರಾತ ಪ್ರಬಂಧ ರಚಿಸಿ ವಿಟ್ಠಲನ
> ಪ್ರೀತಿ ಬಡಿಸಿ ಪ್ರತ್ಯಕ್ಷ ಕಂಡು ನಲಿವ ವೈಷ್ಣವಾಗ್ರ
> ನಾಥ ಪ್ರಸನ್ನವೇಂಕಟಕೃಷ್ಣಪ್ರಿಯನ

ಇದರಲ್ಲಿ ಗೀತ, ರಾಯಿ, ಸುಳಾದಿ, ಉಗಾಭೋಗ, ಪದ್ಯ, ಪದ ಎಂಬ ಆರು ಬಗೆಯ ಪ್ರಬಂಧಗಳನ್ನು ಪುರಂದರದಾಸರು ರಚಿಸಿದರೆಂದು ಹೇಳಿದೆ ಈ ಮಾತುಗಳ ವಿವರಣೆ ಮುಂದೆ ದಾಸ ಸಂಗೀತವನ್ನು ಕುರಿತು ವಿಚಾರ ಮಾಡುವಾಗ ಬರುತ್ತದೆ ಈ ಪ್ರಕಾರಗಳಲ್ಲಿ ಗೀತ (ಗೇಯ ಪ್ರಧಾನವಾದ ಲಘುಸಾಹಿತ್ಯ), ರಾಯಿ (ಸಂಸ್ಕೃತದ 'ಸ್ಥಾಯಿ' ಎಂಬ ಮಾತಿನ ಕನ್ನಡರೂಪ, ಮನೋಧರ್ಮಪ್ರಧಾನವಾದ ವಿಲಂಬಿತಲಯದ ಅನಿಬದ್ಧರಾಗ ವಿಸ್ತರಣೆ), ಸುಳಾದಿ (ತಾಳಮಾಲಿಕಾ ಪ್ರಬಂಧ), ಉಗಾಭೋಗ (ವಚನಶೈಲಿಯಲ್ಲಿ ಮಾತ್ರಾಗಣ, ಲಯಬಂಧ, ಕಾವ್ಯಗುಣಗಳನ್ನೆಲ್ಲ ಒಳಗೊಂಡ ಸಾಹಿತ್ಯಭಾಗ) ಇಷ್ಟೂ ಸಂಗೀತಕ್ಕೆ ಸೇರಿದುವು ಪದ್ಯವೆನ್ನುವುದು ಮುಖ್ಯವಾಗಿ ಸಾಹಿತ್ಯವೇ , ಛಂದಸ್ಸು, ವೃತ್ತಗಳ ಸಮಾವೇಶವಿದ್ದರೂ ಕಾವ್ಯಗುಣವೇ

ಎದ್ದು ಕಾಣುವ ವಿವರ ಇದನ್ನು ನಿರೂಪಿಸಲು ಸಾಂಪ್ರದಾಯಿಕ ಸಂಗೀತದ ಅಗತ್ಯ ವಿರದು , ರಾಗಾಲಾಪನೆ, ತಾಳನಿರ್ಬಂಧಗಳು, ಅರ್ಥದ ಸ್ವಾರಸ್ಯವನ್ನು ಮೊಟಕು ಮಾಡುವುದೂ ಸಾಧ್ಯ ಪದವೆನ್ನುವ ಪ್ರಕಾರದಲ್ಲಿ ಸಂಗೀತದ ಪಾತ್ರವಿದ್ದರೂ ಸರಳವಾಗಿರುತ್ತದೆ , ಮಾತಿನ ಅರ್ಥ ಮನಮುಟ್ಟುವಂತೆ ವಿನಿಕೆಮಾಡಿದರೆ ತೀರಿತು ಹೀಗೆ ದಾಸರ ಕೃತಿಗಳಲ್ಲಿ ಸಂಗೀತ ಸಂಪ್ರದಾಯದ ಜಾಯಮಾನಕ್ಕೆ ಹೊಂದಿಕೊಂಡು ಬಂದವೂ ಇವೆ , ಸಾಂಪ್ರದಾಯಿಕ ಸಂಗೀತದ ನೆರವನ್ನು ಪಡೆಯುವ ಅಗತ್ಯವಿಲ್ಲದೆ ಯಾರಾದರೂ ಎಂದರೆ ಸಂಗೀತಾನಭಿಜ್ಞರೂ ಸುಸ್ವರದಲ್ಲಿ ಶುದ್ಧ ಕಂಠದಿಂದ ನೇರವಾಗಿ ಹಾಡುವಂಥವೂ ಇವೆ ಸಂಗೀತಸಂಪ್ರದಾಯಕ್ಕೆ ಒಗ್ಗಿರುವ ಕೃತಿಗಳಲ್ಲಿ ಕೂಡ ಸಾಹಿತ್ಯ ಭಾಗವೇ ಮುಖ್ಯ ಎಂಬುದನ್ನು ಮರೆಯಬಾರದು ಈ ವಿಚಾರ ಮತ್ತೆ ಮುಂದೆ ಪ್ರಸ್ತಾವಕ್ಕೆ ಬರುತ್ತದೆ

ದಾಸರ ಕೃತಿಗಳಲ್ಲಿ ಹೆಚ್ಚು ಜನಪ್ರಿಯವಾದುವೆಂದರೆ 'ಪದ'ಗಳೇ ಪದ ಗಳನ್ನು ಹಾಡಲು ಸಂಗೀತದ ಶಿಕ್ಷಣ ಬೇಕಾದುದಿಲ್ಲ, ರಾಗಜ್ಞಾನ ಅನಿವಾರ್ಯ ವೆಂದೇನಿಲ್ಲ ಒಂದೆರಡು ಸಾರಿ ಕೇಳಿದರೆ ಸಾಕು ಮಾತಿನ ಮೋಡಿ, ಹಾಡುವ ಧಾಟಿ ಎರಡೂ ಮನವರಿಕೆಯಾಗಿಬಿಡುತ್ತವೆ ಸುಳಾದಿಗಳಲ್ಲಿರುವಂತೆ ವಿವಿಧ ತಾಳಗಳ ಬಿಗಿಯಿಲ್ಲ, ರಾಯಿಯಲ್ಲಿರುವಂತೆ ರಾಗವಿಸ್ತರಣೆಯ ಅಗತ್ಯವಿಲ್ಲ, ಉಗಾಭೋಗದಲ್ಲಿರು ವಂತೆ ಮಾತ್ರಾಗಣ, ಲಯಬಂಧಗಳ ಕಟ್ಟುಪಾಡಿಲ್ಲ ಪುರಂದರದಾಸರ ಪದಗಳೆಲ್ಲ ಸುಮಾರು ಮೂವತ್ತು ರಾಗಗಳಲ್ಲಿ ಮೂಡಿಬಂದಿವೆ ಅಷ್ಟೆ , ತಾಳಗಳಲ್ಲಿ ವಿಶೇಷವಾಗಿ ಬಳಸಿರುವುದೆಂದರೆ ಚಾಪು, ಝಂಪೆ ಪದದಲ್ಲಿ ಪಲ್ಲವ (ಪಲ್ಲವಿ), ಅನುಪಲ್ಲವ (ಅನುಪಲ್ಲವಿ) ಮತ್ತು ನುಡಿಗಳೆಂದು (ಚರಣ, ಅಂಘ್ರಿ) ಮೂರು ವಿಭಾಗಗಳು ಒಂದೊಂದು ನುಡಿಯಾದ ಮೇಲೂ ಪಲ್ಲವವನ್ನು ಮತ್ತೆ ಎತ್ತಿಕೊಳ್ಳುವುದು ಕ್ರಮ ಪದಗಳನ್ನೇ 'ದೇವರ ನಾಮ'ಗಳೆಂದೂ ನಿರ್ದೇಶಿಸುವುದು ವಾಡಿಕೆ

ಈಗ ಉಪಲಬ್ಧವಿರುವ ಪುರಂದರ ಸಾಹಿತ್ಯದಲ್ಲಿ ಪದಗಳೇ ಹೆಚ್ಚು ಸಂಖ್ಯೆ ಯಲ್ಲಿರುವವು ಉಗಾಭೋಗಗಳು ನೂರನಲವತ್ತನ್ನು ಮೀರುವುದಿಲ್ಲ, ಸುಳಾದಿಗಳು ಅರವತ್ತನ್ನು ಮೀರುವುದಿಲ್ಲ , ಉಳಿದವೆಲ್ಲ ಪದಗಳೇ ಪದಗಳಲ್ಲಿ ಸ್ತುತಿ, ತತ್ತ್ವ ಬೋಧೆ, ಸಿದ್ಧಾಂತ ಪ್ರಮೇಯ ನಿರೂಪಣ, ರಸವ್ಯಂಜನ ಮೊದಲಾದ ಪ್ರಯೋಜನ ಗಳು ಅಡಕವಾಗಿವೆ ದಾಸರು ಇವನ್ನೆಲ್ಲ ಪ್ರಯತ್ನಪೂರ್ವಕವಾಗಿ ರಚಿಸಿದರೆಂದು ಹೇಳಲು ಬರುವುದಿಲ್ಲ ಹಲವು ಸಂದರ್ಭಸ್ಫೂರ್ತಿಯಿಂದ ಹೊರಹೊಮ್ಮಿದುವು , ಮತ್ತೆ ಕೆಲವು ಭಕ್ತಿಯ ಆವೇಶದಿಂದ ಮೂಡಿಕೊಂಡವು , ಇನ್ನು ಕೆಲವು ಮನಸ್ಸಿನ ದುಗುಡದಿಂದ ಅಥವಾ ಹುಮ್ಮಸದಿಂದ ಮೈದಳೆದವು. ಇವುಗಳಲ್ಲಿ ನೇರವಾದ ಆಡು ಮಾತಿನ ಬಳಕೆ ಎದ್ದು ಕಾಣುವ ವಿವರ , ಕಾವ್ಯಾಲಂಕಾರದ ಗುಣ ಕಡಮೆಯೇ ಹಲವು ಪದಗಳಲ್ಲಿ ಗ್ರಾಮ್ಯಪದಪ್ರಯೋಗಗಳೂ ಬಂದಿವೆ ಲೋಕದ ರೀತಿನೀತಿಗಳ ವಿಡಂಬನೆ ಕಾಣುತ್ತದೆ , ಉದಾತ್ತವಾದ ಆದರ್ಶವೂ ಇದೆ. ಕೌಟುಂಬಿಕ ಜೀವನ,

ಸಾಮಾಜಿಕ ಮೌಲ್ಯಗಳು, ಧರ್ಮದ ದಿಟವಾದ ನೆಲೆ, ಅಧ್ಯಾತ್ಮದ ಸ್ವಾರಸ್ಯ ಇವೆಲ್ಲ ಪರ ಉಲ್ಲೇಖ ಪದಗಳಲ್ಲೆಲ್ಲ ಹಾಸುಹೊಕ್ಕಾಗಿ ಬಂದಿದೆ ಶಾಸ್ತ್ರಗ್ರಂಥಗಳಿಗಿಂತ ಹೆಚ್ಚಾಗಿ ಪುರಾಣ, ಇತಿಹಾಸ ಇವುಗಳನ್ನು ಅವಲಂಬಿಸಿರುವುದು ತಿಳಿದುಬರುತ್ತದೆ ತಮ್ಮ ಮೆಚ್ಚುಗೆಗೆ ಪಾತ್ರವಾದ ಮಾಧ್ವಮತದ ನಿಷ್ಠೆಯಂತೂ ಸ್ಪಷ್ಟವಾಗಿದೆ

## 9

ಪುರಂದರ ಸಾಹಿತ್ಯದ ಮೊದಲ ಸಂಗ್ರಹ ನಡೆದದ್ದು ವಿಜಯದಾಸರ ಕಾಲದಲ್ಲೇ ಎಂದು ತೋರುತ್ತದೆ ಆ ವೇಳೆಗಾಗಲೇ ದಾಸಕೂಟದ ಪ್ರಾಬಲ್ಯ ಇಳಿಮುಖವಾಗಿ ಅಲ್ಲಲ್ಲಿ ಕೆಲವರು ಹರಿದಾಸರು ಇರುತ್ತಿದ್ದು, ತಂತಮ್ಮ ಮನೆಗಳಲ್ಲಿ ಪುರಂದರದಾಸರ, ಅವರ ಪೂರ್ವಿಕರ, ಸಮಕಾಲಿಕರ ಹಾಡುಗಳನ್ನು ಲಿಖಿತವಾಗಿಯೋ ಮೌಖಿಕ ವಾಗಿಯೋ ಉಳಿಸಿಕೊಂಡು ಬಂದಿದ್ದಿರಬೇಕು ವಿಜಯದಾಸರು ಇಂಥವರಿಂದಲೇ ಪುರಂದರದಾಸರ ಕೃತಿಗಳನ್ನು ಪಡೆದುಕೊಂಡು ತಾವು ಅದನ್ನು ಪ್ರತಿಮಾಡಿಸಿ ಮತ್ತೆ ಪ್ರಚಾರಕ್ಕೆ ತಂದರೆಂದು ಕಾಣುತ್ತದೆ ಹರಿದಾಸ ಪರಂಪರೆಯಲ್ಲಿ ವಿಜಯದಾಸರದ್ದು ಎರಡನೆಯ ಘಟ್ಟ , ಆಗ ನಡೆದದ್ದು ಪುರಂದರ ಸಾಹಿತ್ಯದ ಪುನರುಜ್ಜೀವನ ವಿಜಯದಾಸರು ತಾವು ಸಂಗ್ರಹಿಸಿದ ಪುರಂದರ ಸಾಹಿತ್ಯವನ್ನು ವರ್ಗೀಕರಣ ಮಾಡಿದುದು ಅವರ ಸುಳಾದಿಯೊಂದರಿಂದ ತಿಳಿದುಬರುತ್ತದೆ ಈ ವಿಭಜನೆಯ ವಿವರಗಳನ್ನು ನೋಡಿದರೆ ವಿಜಯದಾಸರ ಕಾಲಕ್ಕೆ ಪುರಂದರ ಸಾಹಿತ್ಯ ವಿಪುಲ ವಾಗಿಯೇ ಇದ್ದಿರಬೇಕು

ನಮ್ಮ ಕಾಲದಲ್ಲಿ ಪುರಂದರ ಸಾಹಿತ್ಯದ ಸಂಗ್ರಹಕ್ಕೂ ಅಳಿದುಳಿದ ಹರಿದಾಸ ಮನೆತನಗಳಲ್ಲಿ ಕಳೆದುಳಿದ ಓಲೆಗರಿ ಅಥವಾ ಹಳೆಯ ಕೋರಿಕಾಗದದ ಹಸ್ತಪ್ರತಿ ಗಳೇ ಮೂಲ ಆಕರ ಅವನ್ನು ಸಾರ್ವಜನಿಕರ ಗಮನಕ್ಕೆ ತರುವ ಪ್ರಯತ್ನ ಮೊಟ್ಟ ಮೊದಲಿಗೆ ನಡೆದದ್ದು 1850ರಲ್ಲಿ, ಮಂಗಳೂರಿನಿಂದ ಆಗ ಹೊರಬಂದ ಕಲ್ಲಚ್ಚಿನ ಪ್ರತಿಯೊಂದು ಇಪ್ಪತ್ತು ವರ್ಷಗಳನಂತರ ಆಗಿನ ಮೈಸೂರು ಸರ್ಕಾರದ ಜೆ ಗ್ಯಾರೆಟ್ ಎಂಬ ಅಧಿಕಾರಿಯ ಆಸಕ್ತಿಯಿಂದ ಪುನರ್ಮುದ್ರಣಗೊಂಡಿತು , ಅದನ್ನು ಪರಿಷ್ಕರಿಸಿ ಮುದ್ರಣಕ್ಕೆ ಸಿದ್ಧಮಾಡಿದವರ ಹೆಸರು ಹೊಳಕಲ್ಲು ನರಸಿಂಹಯ್ಯ ಇದರಲ್ಲಿ ಪುರಂದರದಾಸರೂ ಸೇರಿದಂತೆ ಹಲವರು ಹರಿದಾಸರ ಒಟ್ಟು ಒಂದುನೂರು ಎಪ್ಪತ್ತಮೂರು 'ಕೀರ್ತನೆಗಳು' ಅಡಕವಾಗಿದ್ದುವು ಇದೇ ಬಗೆಯ ಇನ್ನೊಂದು ಪ್ರಯತ್ನ ಇನ್ನೆರಡು ವರ್ಷಗಳನಂತರ ಮದರಾಸಿನಿಂದ ನಡೆಯಿತು ಪುರಂದರದಾಸರ ಕೃತಿಗಳನ್ನೇ ಸಂಗ್ರಹಿಸಿ ಮೊಟ್ಟಮೊದಲು ಅಚ್ಚು ಮಾಡಿಸಿದವರು ಮಡಕಶಿರಾ ಬಾಲಕೃಷ್ಣರಾಯರು , ಇವರು ಮದರಾಸಿನಿಂದ 1894ರಲ್ಲಿ ಹೊರಡಿಸಿದ ಪುಸ್ತಕ ತೆಲುಗು ಲಿಪಿಯಲ್ಲಿದ್ದಿತು ('ಪುರಂದರದಾಸುಲುವಾರು ಪಾಡಿನ ಕೀರ್ತನಲು')

ಬೆಳಗಾವಿಯಲ್ಲಿ ಅಬಾಜಿ ರಾಮಚಂದ್ರ ಸಾವಂತರು ಅದೇ ಸಮಯದಲ್ಲಿ 'ದಾಸರ ಪದಗಳ ಸಂಗ್ರಹ'ವನ್ನು ದೇವನಾಗರಿಲಿಪಿಯಲ್ಲಿ ಹೊರತಂದರು (1880–1894, ನಾಲ್ಕು ಭಾಗಗಳಲ್ಲಿ), ಮತ್ತು ಸುಳಾದಿಗಳ ಸಂಕಲನವನ್ನೂ ಪ್ರಕಟಿಸಿದರು (1908)

ಬೆಂಗಳೂರಿನ ಟಿ ಎನ್ ಕೃಷ್ಣಯ್ಯಶೆಟ್ಟರು 1914ರಲ್ಲಿ ಪುರಂದರದಾಸರ ಪದಗಳ ಸಂಗ್ರಹವನ್ನು ಅಚ್ಚುಮಾಡಿಸಿದರು, ಇದರಲ್ಲಿ ಒಟ್ಟು ಎಂಟುನೂರ ಎರಡು ಕೃತಿಗಳು ಸೇರಿದ್ದುವು ಉಡುಪಿಯಲ್ಲಿ ಪಾವಂಜೆ ಗುರುರಾಯರು ತಮ್ಮ ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಾಲಯದಿಂದ ಪುರಂದರದಾಸರ ಒಂದುಸಾವಿರ ಐವತ್ತು ಕೀರ್ತನೆಗಳನ್ನು ಐದು ಬಾಗಗಳಲ್ಲಿ ಹೊರತಂದರು, ಕಡೆಯ ಭಾಗದಲ್ಲಿ ಒಂದುನೂರ ನಲವತ್ತನಾಲ್ಕು ಉಗಾಭೋಗಗಳೂ ಸೇರಿದುವು ಮೊದಲನೆಯ ಬಾಗ 1912 ರಲ್ಲಿಯೂ ಕಡೆಯದು 1932ರಲ್ಲಿಯೂ ಪ್ರಕಟವಾದುವು ಇದೇ ಈವರೆಗೆ ಹೊರಬಂದಿರುವ ಸಂಗ್ರಹಗಳಲ್ಲಿ ವ್ಯಾಪಕವಾದುದು ಅಂದದೇ ಇನ್ನೊಂದು ಸಂಗ್ರಹ 1925ರಲ್ಲಿ ಸುಬೋಧ ರಾಮರಾಯರ ಹರಿದಾಸಕೀರ್ತನ ತರಂಗಿಣಿ ಗ್ರಂದಮಾಲೆಯಿಂದ ಆರಂಭವಾಯಿತು ಎರಡು ಭಾಗಗಳಲ್ಲಿ ಅಚ್ಚಾದ ಈ ಸಂಗ್ರಹದಲ್ಲಿ (1926) ಪುರಂದರದಾಸರ ಐನೂರು ನಲವತ್ತಮೂರು ಕೃತಿಗಳು ಸೇರಿವೆ, ಪದಗಳೆನಿಸಿಕೊಳ್ಳುವ ಈ ಕೃತಿಗಳಲ್ಲದೆ ಒಂದುನೂರ ಇಪ್ಪತ್ತೆಂಟು ಉಗಾಭೋಗಗಳೂ, 'ದ್ರೌಪದೀವಸ್ತ್ರಾಪಹರಣ' ಮತ್ತು 'ಗಜೇಂದ್ರ ಮೋಕ್ಷ' ಎಂಬೆರಡು ಉದಯರಾಗಗಳೂ, ಹದಿನೈದು ಸುಳಾದಿಗಳೂ ಒಂದು ಗದ್ಯವೂ ಸೇರಿವೆ ಈ ಸಂಗ್ರಹದ ಪಾಠ ಶುದ್ಧವಾಗಿದ್ದು ಮುದ್ರಣವೂ ಸುಂದರವಾಗಿದೆ

ಪಣಿಯಾಡಿ ಲಕ್ಷ್ಮೀನಾರಾಯಣ ಉಪಾಧ್ಯಾಯ, ವಂಕಟರಮಣಾಚಾರ್ಯ ಮತ್ತು ಲಕ್ಷ್ಮೀನಾರಾಯಣ ಅಡಿಗರು 1940ರಲ್ಲಿ ತುಳುನಾಡು ಪ್ರೆಸ್ಸಿನಿಂದ ಒಂದು ಸಂಕಲನವನ್ನು ನಾಲ್ಕು ಭಾಗಗಳಲ್ಲಿ ಹೊರತಂದರು ಇದಾದ ನಾಲ್ಕು ವರ್ಷಗಳಲ್ಲಿ ಲಿಂಗಸೂಗೂರಿನ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲದ ಗೊರಾಬಾಳ ಹನುಮಂತರಾಯರು ಮತ್ತೊಂದು ಸಂಕಲವನ್ನು ಪ್ರಕಟಿಸಿದರು ಇವರೇ 1957ರಲ್ಲಿ ಪುರಂದರದಾಸರ ಐವತ್ತೈದು ಸುಳಾದಿಗಳನ್ನು ಪ್ರತ್ಯೇಕವಾಗಿ ಹೊರತಂದರು ಈ ಮಧ್ಯೆ ಬೆಂಗಳೂರಿನ ಕನ್ನಡ ಸಾಹಿತ್ಯ ಪರಿಷತ್ತು ಧಾರವಾಡದ ರಾಘವೇಂದ್ರಾ ಚಾರ್ಯ ಸ್ವಾ ಪಂಚಮುಖಿಯವರಿಂದ 'ಹರಿದಾಸ ಸಾಹಿತ್ಯ'ವನ್ನು ಕುರಿತು ಸಂಗ್ರಾಹ್ಯವಾದ, ವಿಮರ್ಶಾತ್ಮಕವಾದ ಪುಸ್ತಕವೊಂದನ್ನು ಬರೆಸಿ ಪ್ರಕಟಿಸಿತು (1952) ಈ ವಿದ್ವಾಂಸರೇ 1956ರಲ್ಲಿ ಪುರಂದರದಾಸರ ಜೀವನಚರಿತ್ರೆಯನ್ನೂ ಬರೆದರು (ಶ್ರೀಪುರಂದರದಾಸ ಸೇವಾ ಮಂಡಲ, ಹೊಸಪೇಟೆ) ತುಳುನಾಡು ಪ್ರೆಸ್ಸಿನ ಮೇನೇಜರಾಗಿ ಕೆಲಸ ಮಾಡುವಾಗ ದಾಸರ ಕೃತಿಗಳ ನಿಕಟ ಪರಿಚಯವನ್ನು ಪಡೆದು ಕೊಂಡಿದ್ದ ಎಸ್ ಎಸ್ ಕಾರಂತರು ಹುಬ್ಬಳ್ಳಿಯಿಂದ 1959ರಲ್ಲಿ ಆರುನೂರ

ಐವತ್ತಾರು ಪದಗಳ ಸಂಗ್ರಹವೊಂದನ್ನು ಹೊರತಂದರು , ಇದರಲ್ಲಿ ಮೂವತ್ತಾರು ಸುಳಾದಿಗಳ ಸೇರ್ಪಡೆಯಿದ್ದಿತು

ಮುಂದ, ಪುರಂದರದಾಸರ ಚತುರ್ದ ಶತಮಾನೋತ್ಸವ ಸಂದರ್ಭದಲ್ಲಿ (1963–64ರ ಸುಮಾರಿಗ) ಬೆಂಗಳೂರು ಮತ್ತು ಧಾರವಾಡಗಳಲ್ಲಿ ಉತ್ಸವಸಮಿತಿ ಗಳು ಏರ್ಪಟ್ಟು ಪುರಂದರದಾಸರ ಸಾಹಿತ್ಯ, ಅವರನ್ನು ಕುರಿತ ವಿಚಾರ, ಅವರ ಕೃತಿಗಳಿಗೆ ಸಂಗೀತಸಂಯೋಜನೆ ಈ ಬಗೆಗೆ ಪ್ರಕಟಣೆಗಳು ಬಂದುವು ಬೆಂಗಳೂರಿನ ಉತ್ಸವ ಸಮಿತಿಯು ನನ್ನಿಂದ ಪುರಂದರದಾಸರನ್ನು ಕುರಿತ ಗ್ರಂಥವೊಂದನ್ನು ಬರೆಯಿಸಿ ಕನ್ನಡ, ತೆಲುಗು, ಇಂಗ್ಲಿಷ್ ಭಾಷೆಗಳಲ್ಲಿ ಹೊರತಂದಿತು (1964) , ನನ್ನ ನಿರ್ದೇಶನದಲ್ಲಿ ದಾಸರ ಒಂದು ನೂರು ಕೃತಿಗಳಿಗೆ ಸ್ವರಪ್ರಸ್ತಾರವನ್ನು ಅಳವಡಿಸಿ ಮತ್ತೊಂದು ಗ್ರಂಥವೂ ಪ್ರಕಟವಾಯಿತು (ಕೃತಿಶತಕ) ಪುರಂದರಸಾಹಿತ್ಯವನ್ನು ಪಾಠಾಂತರಗಳೊಂದಿಗೆ ಪರಿಷ್ಕರಿಸಿ ಪ್ರಕಟಿಸಬೇಕೆಂಬ ಯೋಜನೆಯಿದ್ದಿತು , ಕೈಗೂಡ ಲಿಲ್ಲ ಆದರೆ ಧಾರವಾಡದ ಸಮಿತಿಯವರು ಮಿಂಚಿನಬಳ್ಳಿ ಕಾರ್ಯಾಲಯದ ಬುರ್ಲಿ ಬಿಂದುಮಾಧವಾಚಾರ್ಯರ ಸಮರ್ಥ ನೇತೃತ್ವದಲ್ಲಿ ದಾಸರ ಸಾಹಿತ್ಯವನ್ನು (ಒಂಬತ್ತುನೂರ ಒಂದು ಕೃತಿಗಳನ್ನು) ಆರು ಸಂಪುಟಗಳಲ್ಲಿ ಪ್ರಕಟಿಸಿದರು ಬೆಟಗೇರಿ ಕೃಷ್ಣಶರ್ಮರೂ ಬೆಂಗೇರಿ ಹುಚ್ಚೂರಾಯರೂ ಸಂಪಾದಕರಾಗಿ ಈ ಕೆಲಸವನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು ಮೊದಲನೆಯ ಸಂಪುಟವಾದ 'ಪೂಜಾತತ್ತ್ವ' 1963ರ ಕಡೆಯ ಭಾಗದಲ್ಲಿ ಪ್ರಕಟವಾಯಿತು ಮರುವರ್ಷ ಎರಡನೆಯ ಸಂಪುಟ 'ಆರ್ತಭಾವ' ಮತ್ತು ಮೂರನೆಯದಾದ 'ಮಾಹಾತ್ಮ್ಯಜ್ಞಾನ', ಮುಂದಿನ ವರ್ಷ ನಾಲ್ಕನೆಯದಾದ 'ಕೃಷ್ಣಲೀಲೆ ಮತ್ತು ಐದನೆಯದಾದ 'ಲೋಕನೀತಿ', 1965ರಲ್ಲಿ ಕಡೆಯ ಸಂಪುಟವಾದ 'ಸಂಕೀರ್ಣಸಂಗ್ರಹ' ಪ್ರಕಟವಾಗಿ ಸಂಪಾದಕರೂ ಪ್ರಕಾಶಕರೂ ಕೃತಾರ್ಥರಾದರು ಈ ಸಂಪುಟಗಳಲ್ಲಿ ಶುದ್ಧವಾದ ಪಾಠ, ಅಗತ್ಯವಾದ ಪಾಠಾಂತರಗಳು, ಪರಿಶಿಷ್ಟವಾಗಿ ಶಬ್ದಾರ್ಥ, ಸಂದರ್ಭಕಥೆ, ಭೌಗೋಲಿಕ ಮತ್ತು ಐತಿಹಾಸಿಕ ವಿವರಣೆ ಇವೆಲ್ಲವೂ ಸೇರಿದ್ದು ತುಂಬ ಉತ್ತಮವಾದ, ಉಪಯುಕ್ತವಾದ ಸಂಕಲನವಾಗಿದೆ ಇವಲ್ಲದೆ ಕಲಮದಾನಿ ಗುರುರಾಯರ ಸಂಕಲನ (ಎಂಟುನೂರು ಕೃತಿಗಳು), ಹುಬ್ಬಳ್ಳಿಯ ಎ ಎಂ ಕರಡಿಯವರ ಸಂಕಲನ (ಆರುನೂರು ಕೃತಿಗಳು), ಬೆಂಗಳೂರಿನ ಉಪಾಧ್ಯಾಯ ಪ್ರಕಟನಾಲಯದ ಸಂಕಲನ 1954, (ಇನ್ನೂರ ಐವತ್ತು ಕೃತಿಗಳು), ಗದಗ ಬಿ ಜಿ ಸಂಕೇಶ್ವರರ ಸಂಕಲನ (ಆರುನೂರ ಇಪ್ಪತ್ತಾರು ಕೃತಿಗಳು) ಇವೂ ಪ್ರಚಾರದಲ್ಲಿವೆ

ಪುರಂದರದಾಸರ ಸಾಹಿತ್ಯಕ್ಕೆ ಮಾತ್ರ ಗಮನವನ್ನು ಸೀಮಿತಗೊಳಿಸದೆ ಇತರ ದಾಸರಿಂದಲೂ ಆಯ್ದ ಪದಗಳ ಸಂಕಲನಗಳು ಹಲವಾರಿವೆ ಬೆಳಗಾವಿಯ ಅಬಾಜಿ ರಾಮಚಂದ್ರ ಸಾವಂತರ ಸಂಗ್ರಹವನ್ನು (1894) ಆಗಲೇ ಪ್ರಸ್ತಾಪಿಸಲಾಗಿದೆ , ಮದರಾಸಿನ 'ಹರಿಭಜನ ಕೀರ್ತನೆ' (1878) ಇದಕ್ಕೂ ಮೊದಲೇ ಹೊರಬಂದ

ಸಂಗ್ರಹ 1925ರಿಂದ ಮುಂದೆ ಸುಬೋಧ ರಾಮರಾಯರು 'ಹರಿದಾಸ ಕೀರ್ತನ ತರಂಗಿಣಿ' ಮಾಲೆಯಲ್ಲಿ ಹಲವಾರು ದಾಸರ ಪದಗಳನ್ನು ಪ್ರಕಟಿಸಿದರು 1935ರಲ್ಲಿ ರಂಗನಾಥ ರಾಮಚಂದ್ರ ದಿವಾಕರರು 'ಹರಿಭಕ್ತಿಸುಧೆ' (ಅಧ್ಯಾತ್ಮ ಕಾರ್ಯಾಲಯ ಹುಬ್ಬಳ್ಳಿ) ಎಂಬ ಹೆಸರಿನಿಂದ ಉತ್ತಮವಾದ ಒಂದು ಸಂಕಲನವನ್ನು ಅಂದವಾಗಿ ಹೊರ ತಂದರು ಬೆಟಗೇರಿ ಕೃಷ್ಣಶರ್ಮ ಮತ್ತಿತರರ 'ಹರಿದಾಸ ಭಕ್ತಿಸಾಧನೆ' (ಮಿಂಚಿನ ಬಳ್ಳಿ ಕಾರ್ಯಾಲಯ, ಧಾರವಾಡ, 1965), ಜಿ ವರದರಾಜರಾಯರ 'ಹರಿದಾಸ ಹೃದಯ' (ಶಾರದಾ ಮಂದಿರ, ಮೈಸೂರು, 1967), ಅವರ ಸಂಪಾದಕತ್ವದಲ್ಲಿ ಹೊರಬಂದ 'ಹರಿದಾಸ ಸಾಹಿತ್ಯ ಸಮೀಕ್ಷೆ' (ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು 1973) ಮೊದಲಾದ ಪುಸ್ತಕಗಳು ದಾಸಸಾಹಿತ್ಯವನ್ನು ಕುರಿತು ಆಸಕ್ತಿಯನ್ನು ಕೆರಳಿಸಿದುವು, ಅಧ್ಯಯನಕ್ಕೆ ನೆರವಾದುವು ಕಿನ್ನರಿ ವಿದ್ವಾಂಸರಾಗಿದ್ದ ಹುಲಗೂರು ಕೃಷ್ಣಾಚಾರ್ಯರು ದಾಸಸಾಹಿತ್ಯದಲ್ಲಿ ಸಂಗೀತದ ಪಾತ್ರವನ್ನು ಕುರಿತು 1951ರಲ್ಲಿ 'ಕರ್ನಾಟಕ ಸಂಗೀತವೂ ದಾಸಸಾಹಿತ್ಯವೂ' ಎಂಬ ಸೊಗಸಾದ, ಸಂಶೋಧನಾತ್ಮಕ ವಾದ ಗ್ರಂಥವನ್ನು ಬರೆದರು (ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ) ನನ್ನ ಸನ್ಮಾನ್ಯ ಮಿತ್ರರಾದ ರಾ ಸತ್ಯನಾರಾಯಣ ಅವರು ದಾಸಸಾಹಿತ್ಯದಲ್ಲಿ ಸುಳಾದಿ–ಉಗಾಭೋಗಗಳನ್ನು ಕುರಿತು ಆಳವಾಗಿ ಅಭ್ಯಾಸ ಮಾಡಿ ಸುದೀರ್ಘವಾದ ಪ್ರಬಂಧ ವೊಂದನ್ನು ಸಿದ್ಧಪಡಿಸಿ, ಧಾರವಾಡದ ಸಮಿತಿಯುವರು 1965ರಲ್ಲಿ ಹೊರತಂದ 'ಕೃಷ್ಣಲೀಲಾ' ಎಂಬ ನಾಲ್ಕನೆಯ ಸಂಪುಟಕ್ಕೆ ಉಪೋದ್ಘಾತ ರೂಪವಾಗಿ ಪ್ರಕಟಿಸಿದರು

ಈ ಎಲ್ಲ ಪ್ರಯತ್ನದಿಂದ ದಾಸಸಾಹಿತ್ಯ ಪ್ರಪಂಚದಲ್ಲಿ ಪುರಂದರದಾಸರ ಸ್ಥಾನ ಮಾನಗಳನ್ನು ಕುರಿತು ಹಲವಾರು ವಿವರಗಳು ಪ್ರಸಿದ್ಧಗೊಂಡುವು 'ಶ್ರೀಪುರಂದರ ದಾಸರು' (ವಿವಿಧ ಲೇಖಕರು, ಸಂಪಾದನೆ ಬುರ್ಲಿ ಬಿಂದುಮಾಧವ, ಮಿಂಚಿನಬಳ್ಳಿ ಕಾರ್ಯಾಲಯ, ಧಾರವಾಡ, 1964), 'ಪ್ರಸಾದಯೋಗ' (ವ ಅ ದಿವಾಣಜಿ, ಉಷಾ ಸಾಹಿತ್ಯಮಾಲೆ, ಮೈಸೂರು, 1972), 'ಪುರಂದರದಾಸರ ಸಾಹಿತ್ಯ ವಿಮರ್ಶೆ' (ರಾ ಸ್ವಾ ಪಂಚಮುಖಿ, ಸಾ ಕೃ ರಾಮಚಂದ್ರರಾವ್, ತ ಸು ಶಾಮರಾವ್, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, 1977), 'ಶ್ರೀ ಪುರಂದರದಾಸ ದರ್ಶನ' (ಸಂಪಾದಕರು, ಕೆ ವಿಶ್ವಂಭರ ಉಪಾಧ್ಯಾಯ, ಭಾರತೀಪ್ರಕಾಶನ, ಕುಂಭಾಸಿ, 1963), 'ಪುರಂದರ ದರ್ಶನ' (ವೆಂಕಟ್ರಾಯ ಆನಂದ ಶೆಣೈ, ಮುಂಬಯಿ, 1963) ವೀ ಸೀತಾರಾಮಯ್ಯನವರ 'ಶ್ರೀಪುರಂದರದಾಸರು' (ನ್ಯಾಷನಲ್ ಬುಕ್ ಟ್ರಸ್ಟ್, ದೆಹಲಿ, 1979) ಮೊದಲಾದ ಪ್ರಕಟಣೆಗಳು ಗಮನಾರ್ಹವಾದುವು

## 10

ಈ ವರೆಗೆ ಪ್ರಕಟವಾಗಿರುವ ಪುರಂದರ ಸಾಹಿತ್ಯದ ಸಂಕಲನಗಳಲ್ಲಿ ಒಟ್ಟು ಒಂದುಸಾವಿರ ಮುನ್ನೂರು ಕೃತಿಗಳನ್ನು ಪುರಂದರದಾಸರ ಹೆಸರಿನಿಂದ ಪ್ರಸಿದ್ಧ ವಾಗಿರುವಂತೆ ಕಾಣಿಸಲಾಗಿದೆ ವಿಮರ್ಶೆಯ ಒರೆಗಲ್ಲಿನಿಂದ ಇವನ್ನೆಲ್ಲ ತಿಕ್ಕಿ ಪರಿ ಶೀಲಿಸಿ, ಯಾವುವು ದಿಟವಾಗಿ ಪುರಂದರದಾಸರವು ಎಂದು ತಿಳಿಯಪಡಿಸುವುದು ಸಾಧ್ಯವಿಲ್ಲ ಆದರೆ ಮಾತಿನ ಮೋಡಿ, ಉಕ್ತಿಯ ಸ್ವಾರಸ್ಯ, ಶೈಲಿಯ ಶಕ್ತಿ, ತತ್ತ್ವ ಚಿಂತನೆಯ ಬಗೆ ಇವನ್ನು ಹಿಡಿದು ನೋಡಿದಾಗ, ಹಲವು ಕೃತಿಗಳು ತಿರುಳಿಲ್ಲದೆ ಜೊಳ್ಳಾಗಿ ಉಳಿದುಕೊಳ್ಳುತ್ತವೆ ಅವನ್ನು ಪುರಂದರದಾಸರವು ಎಂದು ಹೇಳಿದರೆ ಅದರಿಂದ ಪುರಂದರದಾಸರ ಕೀರ್ತಿಯೇನು ಹೆಚ್ಚುವುದಿಲ್ಲ, ಜನರಿಗೇನು ಲಾಭವಾಗು ವುದಿಲ್ಲ ಅಂಥವನ್ನು ಹೆಚ್ಚು ವಿಚಾರಮಾಡದೆ ಕೈಬಿಡುವುದೇ ಲೇಸು ಮತ್ತೆ ಕೆಲವು, ಪುರಂದರದಾಸರವೇ ಇದ್ದರೂ ಮತದ ಛಲವನ್ನು ಎತ್ತಿ ಹಿಡಿಯುವಂಥವು ಅಂಥವನ್ನು ಪುರಂದರದಾಸರಂಥ ಉದಾರಹೃದಯದ, ಸುಸಂಸ್ಕೃತ ಸಂತರು ರಚಿಸಿರ ಲಾರರೆಂದೇ ನನ್ನ ಎಣಿಕೆ ಒಂದು ವೇಳೆ ಅವರ ರಚನೆಗಳೇ ಆಗಿದ್ದರೂ, ಅವನ್ನು ನಾವಿಂದು ಮಾನ್ಯಮಾಡಬೇಕಾದ ಅಗತ್ಯವಿಲ್ಲ ಮತದ ಛಲ ಯಾವ ಕಾಲಕ್ಕೂ ಹಿತವನ್ನು ತರುವಂಥದಲ್ಲ ಮತ್ತೂ ಕೆಲವು ಪದಗಳಲ್ಲಿ ಗ್ರಾಮ್ಯವಾದ ಮಾತು, ಬಯ್ಗಳು, ಹೀನಾಯದ ನುಡಿಗಳು ಮೊದಲಾದ ಅನಪೇಕ್ಷಿತ ವಿವರಗಳಿವೆ ಪುರಂದರ ದಾಸರನ್ನು ಮೆಚ್ಚಿಕೊಳ್ಳುವ ಯಾವ ರಸಿಕನೂ ಇವೆಲ್ಲ ಪುರಂದರದಾಸರ ಕೃತಿಗಳೆಂದು ಸ್ವೀಕರಿಸಲಾರ ಇಂಥವನ್ನೆಲ್ಲ ಈ ಪ್ರಸ್ತುತ ಸಂಗ್ರಹದಿಂದ ಹೊರಗಿರಿಸಲಾಗಿದೆ ಉಳಿದ ಎಂಟುನೂರು ಚಿಲ್ಲರೆ ಕೃತಿಗಳನ್ನು ಈ ಸಂಪುಟಗಳಲ್ಲಿ ಪಾಠಶುದ್ಧಿಯ ಕಡೆ ಗಮನವಿಟ್ಟು ಓರಣವಾಗಿ ಕೊಡಲಾಗಿದೆ

ದಾಸರ ಸಾಹಿತ್ಯ ಬಹುಮಟ್ಟಿಗೆ ಆಡುಮಾತೇ ಆದುದರಿಂದ ಕ್ಲಿಷ್ಟ ಪದಗಳ ಮೇಲಾಟವಿಲ್ಲ ಆದರೂ ನಾಲ್ಕುನೂರು ವರ್ಷಗಳ ಹಿಂದೆ ಬಳಕೆಯಲ್ಲಿದ್ದ ಭಾಷೆ ಯಾದುದರಿಂದ ಅಲ್ಲಲ್ಲಿ ಅರ್ಥ ಸೂಚಿಸುವುದು ಅಗತ್ಯವೆಂದು ತೋರಿತು ಮೇಲಾಗಿ, ದಾಸರು ಬಳಸಿರುವ ಮಾತು ಬಹುಮಟ್ಟಿಗೆ ಉತ್ತರ ಕರ್ನಾಟಕ, ಮಹಾರಾಷ್ಟ್ರ, ಮಲೆನಾಡುಗಳ ಕಡೆ ಬಳಕೆಯಲ್ಲಿರುವಂಥವು ಇಂಥ ಕೆಲವು ಮಾತುಗಳು ಕನ್ನಡ ನಾಡಿನ ಇತರೆಡೆ ಇರುವ ಜನರಿಗೆ ತಟ್ಟನೆ ತಿಳಿಯುವುದಿಲ್ಲ ಆ ಬಗೆಯ ಮಾತು ಗಳನ್ನೂ ಟಿಪ್ಪಣಿಯಲ್ಲಿ ತೋರಿಸಿ ಅರ್ಥ ಕೊಡಲಾಗಿದೆ ಹಲವು ಪದಗಳಲ್ಲಿ ಬಂದಿ ರುವ ಒಕ್ಕಣೆ ಮುಖ್ಯವಾಗಿ ಪುರಾಣದ ಕತೆಗಳನ್ನು ಅವಲಂಬಿಸಿದ್ದು ಬಹುಮಟ್ಟಿಗೆ ಪುರಾಣದ ಕತೆಗಳು ಜನರಿಗೆ ತಿಳಿದೇ ಇರುತ್ತವೆ , ಕೆಲವು ಕತೆಗಳಿಗೆ ಅಷ್ಟಾಗಿ ಪ್ರಚಾರ, ಪ್ರಸಿದ್ಧಿಗಳಿಲ್ಲ ಇಂಥವನ್ನು ವಿವರಿಸಲಾಗಿದೆ

ಕೆಲವು ಕೀರ್ತನೆಗಳಿಗೆ ಸಂದರ್ಭಶುದ್ಧಿಯನ್ನು ಒದಗಿಸಲೆಂದು ದಾಸರ ಬದುಕಿ

ನಲ್ಲಿ ನಡೆದುವೆಂಬ ರೀತಿಯಲ್ಲಿ ಪ್ರಸಂಗಗಳನ್ನು ಜೋಡಿಸಿದ್ದಾರೆ ಇವುಗಳಿಗೆ ಐತಿಹಾಸಿಕವೆಂಬಂಥ ಸಮರ್ಥನೆ ಏನೇನೂ ಇರದಿದ್ದರೂ ಜನರಲ್ಲಿ ಈ ಪ್ರಸಂಗಗಳ ಪರಿಚಯ ಹರಡಿದೆ, ಇವುಗಳಲ್ಲಿ ಸ್ವಾರಸ್ಯವೂ ಇಲ್ಲದೆ ಇಲ್ಲ ಬಹುಮಟ್ಟಿಗೆ ಇವೆಲ್ಲ ಮುಂದಿನ ಕಾಲದಲ್ಲಿ ಬಂದ ಹರಿದಾಸರ ಕಲ್ಪನೆಗಳು, ಹರಿಕದಾ ಕಾಲಕ್ಷೇಪದ ವೇಳೆ ಜನರಂಜನೆಗಾಗಿ ಹೇಳಿದವು 'ಮುಯ್ಯಕ್ಕೆ ಮುಯ್ಯ ತೀರಿತಯ್ಯ', 'ಎತ್ತ ಪೋದ ನಮ್ಮಾ ವಿಪ್ರನ ಎಲ್ಲಿ ಹುಡುಕಲಮ್ಮಾ', 'ನಮ್ಮ ಭಾಗ್ಯ ದೊಡ್ಡದೋ ನಿಮ್ಮ ಭಾಗ್ಯ ದೊಡ್ಡದೋ', 'ಗಿಳಿಯು ಪಂಜರದೊಳಿಲ್ಲ' ಮುಂತಾದ ಪದಗಳಿಗೆಲ್ಲ ಹಿನ್ನೆಲೆಯ ಕತೆಗಳನ್ನು ಕಲ್ಪಿಸಿಕೊಂಡಿದ್ದಾರೆ ಬಳಕೆಯಲ್ಲಿರುವ ಈ ಕತೆಗಳನ್ನೂ ಇಲ್ಲಿ ಟಿಪ್ಪಣಿಯಲ್ಲಿ ಕಾಣಿಸಲಾಗಿದೆ

ಪುರಂದರದಾಸರು ತಮ್ಮ ಜೀವಿತ ಕಾಲದಲ್ಲಿ ಪರ್ಯಟನ ಮಾಡುತ್ತಲೇ ಇದ್ದವರು, ಹರಿದಾಸರಿಗೆ ಕ್ಷೇತ್ರಸಂದರ್ಶನ ಮುಖ್ಯವಾದ ಧರ್ಮವೆಂದು ಮೊದಲೇ ವಿವರಿಸಿದೆನಷ್ಟೆ ಹೀಗೆ ದಾಸರು ಪ್ರಸಿದ್ಧ ಕ್ಷೇತ್ರಗಳಿಗೆ ಹೋದಾಗ ಅಲ್ಲಿನ ದೇವರುಗಳನ್ನು ಕುರಿತು ಕೃತಿರಚನೆ ಮಾಡಿದುದು ಸಹಜವೇ ಉತ್ತರದ ಕೇದಾರದಿಂದ ದಕ್ಷಿಣದ ರಾಮೇಶ್ವರದವರೆಗೆ ತೀರ್ಥಕ್ಷೇತ್ರ ಮಹಿಮೆಯನ್ನು ಕುರಿತು ಒಂದು ಲಕ್ಷ, ಇಪ್ಪತ್ತೈದು ಸಾವಿರ 'ಕೃತಿ'ಗಳನ್ನು ಅವರು ರಚಿಸಿದರೆಂದು ಅವರದ್ದೇ ಹೇಳಿಕೆಯಿದೆ, 'ಪುಣ್ಯ ಕ್ಷೇತ್ರಾದಿ ಮಹಿಮೆ ಪದ'ಗಳೆಂದು ವಿಜಯದಾಸರೂ ಈ ಸಂಖ್ಯೆಯನ್ನೇ ಹಿಡಿದಿದ್ದಾರೆ ಬೇರೆ ಯಾವ ವಿಷಯವನ್ನು ಕುರಿತೂ ಇಷ್ಟು ಹೆಚ್ಚಿನ ಸಂಖ್ಯೆಯಲ್ಲಿ ಕೃತಿಗಳನ್ನು ಪಟ್ಟಿ ಕಾಣಿಸಿಲ್ಲ ಅಷ್ಟೆಲ್ಲ ಈಗ ಉಪಲಬ್ಧವಿಲ್ಲವಾದರೂ, ಅವರ ಕೃತಿಗಳಲ್ಲಿ ಇದೇ ಹೆಚ್ಚಿನ ವಿಚಾರವೆಂಬುದು ಸ್ಪಷ್ಟವಾಗುತ್ತದೆ ಆದ್ದರಿಂದ ಪ್ರಸ್ತುತ ಸಂಗ್ರಹದಲ್ಲಿ ಕ್ಷೇತ್ರಸಂದರ್ಶನದ ಪದಗಳನ್ನೇ ಒಂದು ವರ್ಗವಾಗಿ ಬಗೆದು ಕಾಣಿಸಲಾಗಿದೆ ಅಗತ್ಯವಾದಷ್ಟು ವಿವರಣೆಗಳನ್ನೂ ಕೊಡಲಾಗಿದೆ.

ಪ್ರಸ್ತುತ ಸಂಗ್ರಹದಲ್ಲಿ ಅಡಕವಾಗಿರುವ ಕೃತಿಗಳನ್ನು ನಾಲ್ಕು ಸಂಪುಟಗಳಲ್ಲಿ ಅಳವಡಿಸಿದ್ದೇವೆ ಮೊದಲನೆಯ ಸಂಪುಟದಲ್ಲಿ ಪುರಂದರದಾಸರ ಬದುಕಿಗೆ ಸಂಬಂಧಪಟ್ಟಂತೆ ಬಳಕೆಯಲ್ಲಿರುವ ಹಾಡುಗಳು, ಅವರ ಗುರುಗಳಾದ ವ್ಯಾಸತೀರ್ಥರೊಂದಿಗೆ ಅವರು ಇದ್ದಾಗ ಅವರಿಗೆ ಸಂಬಂಧಿಸಿದಂತೆ ರಚಿಸಿದ ಕೃತಿಗಳು, ದಾಸರು ಕ್ಷೇತ್ರಸಂದರ್ಶನದ ಸಂದರ್ಭದಲ್ಲಿ ರಚಿಸಿದ ಹಾಡುಗಳು ಇವೆಲ್ಲ ಸೇರಿವೆ. ಎರಡನೆಯ ಸಂಪುಟ ಅವರ ಅಧ್ಯಾತ್ಮ ಪ್ರಸಕ್ತಿಯನ್ನು ಕುರಿತದ್ದು ಭಗವತ್ಸ್ವರೂಪ, ಸಾಧನೆ, ಭಕ್ತಿ, ವಿರಕ್ತಿ, ಜ್ಞಾನ ಮೊದಲಾದ ವಿಚಾರಗಳನ್ನು ಹೇಳುವಂಥ ಹಾಡುಗಳನ್ನು ಇಲ್ಲಿ ಕಲೆಹಾಕಲಾಗಿದೆ, ಅವರು ತಳೆದ ಮಾಧ್ವದರ್ಶನನಿಷ್ಠೆಯನ್ನು ತೋರಿಸುವ ಕೃತಿಗಳೂ ಸೇರಿಕೊಂಡಿವೆ ಮೂರನೆಯ ಸಂಪುಟ ಅವರ ಸಾಮಾಜಿಕ ಪ್ರಸಕ್ತಿಯನ್ನು ಎತ್ತಿಕೊಳ್ಳುತ್ತದೆ ಹರಿದಾಸರು ಗೃಹಸ್ಥರೇ ಆಗಿದ್ದು, ಕೇರಿಕೇರಿಗಳಲ್ಲಿ ತಿರುಗಾಡಿ ಜನರೊಂದಿಗೆ ಬೆರೆತು, ಅವರ ಓರೆಕೋರೆಗಳನ್ನು ಗಮನಿಸಿ ಅವನ್ನೆಲ್ಲ ತಿದ್ದಿ ಜನರ

ಹಿತವನ್ನು ಸಾಧಿಸುವ ಹೊಣೆಯನ್ನು ಹೊತ್ತುಕೊಂಡವರು ಇವರು ಸಮಾಜದ ರೀತಿನೀತಿಗಳನ್ನೂ ಕುಟುಂಬದ ಮತ್ತು ಸಹಜೀವನದ ಮೌಲ್ಯಗಳನ್ನೂ ಕುರಿತಂತೆ ಅನೇಕ ಪದಗಳನ್ನು ರಚಿಸಿದ್ದಾರೆ ಇವನ್ನು ಈ ಸಂಪುಟ ಸಂಗ್ರಹಿಸಿದೆ ನಾಲ್ಕನೆಯ, ಕಡೆಯ, ಸಂಪುಟದಲ್ಲಿ ದಾಸರ ಸಂಗೀತಪ್ರಸಕ್ತಿ, ಶೃಂಗಾರಪ್ರಸಕ್ತಿ, ಕಾವ್ಯಪ್ರಸಕ್ತಿಗಳ ಕಡೆ ಗಮನ ಹರಿಸಲಾಗಿದೆ ಪುರಂದರದಾಸರಿಗೂ ಕರ್ನಾಟಕ ಸಂಗೀತಕ್ಕೂ ಇರುವ ಸಂಬಂಧ ನಿಕಟವಾದುದು ಈ ಸಂಬಂಧವನ್ನು ಎತ್ತಿತೋರಿಸುವ ಕೃತಿಗಳು ಇಲ್ಲಿ ಸೇರುತ್ತವೆ ದಾಸರ ಕೃತಿಗಳಲ್ಲಿ ವೈರಾಗ್ಯವೇ ಮುಖ್ಯವಾಗಿ ಉಪದೇಶಕ್ಕೆ ಬಂದರೂ, ಶೃಂಗಾರಕ್ಕೆ ಎಡೆಯಿಲ್ಲದೆ ಇಲ್ಲ ಕೃಷ್ಣಾವತಾರದ ಸ್ವಾರಸ್ಯ ದಾಸರ ರಚನೆಗಳಿಗೆ ಪ್ರಧಾನವಾದ ಪ್ರೇರಣೆ ರಾಧಾಕೃಷ್ಣರ ದಿವ್ಯಪ್ರೇಮದ ಹಲವು ವಿವರಗಳನ್ನು ಅವರು ಬಗೆ ಬಗೆಯಾಗಿ ಹಾಡಿ ಹೊಗಳಿದ್ದಾರೆ ಈ ಗುಂಪಿಗೆ ಸೇರಿದ ಕೃತಿಗಳನ್ನು ಇಲ್ಲಿ ಕಲೆ ಹಾಕಲಾಗಿದೆ ಕಡೆಯದಾಗಿ, ಪುರಂದರದಾಸರಿಗೆ ಕನ್ನಡ ಸಾಹಿತ್ಯ ಇತಿಹಾಸದಲ್ಲೂ ವಿಶಿಷ್ಟವಾದ ಸ್ಥಾನವುಂಟು ಸಂಗೀತದಲ್ಲಿ ಉತ್ತಮೋತ್ತಮ ಸ್ಥಾನವನ್ನು ಪಡೆದು ಕೊಂಡ ತ್ಯಾಗರಾಜರಿಗೆ ತೆಲುಗು ಸಾಹಿತ್ಯ ಚರಿತ್ರೆಯಲ್ಲಿ ಯಾವ ಸ್ಥಾನವೂ ಇಲ್ಲ , ಹಾಗೆಯೇ ತಾಳ್ಳಪಾಕ ಕವಿಗಳಿಗೆ ಸಂಗೀತಕ್ಷೇತ್ರದಲ್ಲಿರುವಂಥ ಹೆಗ್ಗಳಿಕೆ ಸಾಹಿತ್ಯ ಕ್ಷೇತ್ರದಲ್ಲಿ ಇರದು ಆದರೆ ಪುರಂದರದಾಸರು ಸಂಗೀತ–ಸಾಹಿತ್ಯ ಎರಡೂ ಕ್ಷೇತ್ರ ಗಳಲ್ಲಿ ಎತ್ತಿದ ಕೈ ಅವರ ರಚನೆಗಳಲ್ಲಿ ಗೇಯಗುಣವೂ ಇದೆ, ಅದಕ್ಕಿಂತ ಹೆಚ್ಚಾಗಿ ಕಾವ್ಯಧರ್ಮವೂ ಇದೆ ಕಾವ್ಯಧರ್ಮವನ್ನು ಸ್ಪಷ್ಟಪಡಿಸುವ ಕೃತಿಗಳೂ ಕಡೆಯ ಸಂಪುಟದ ಕಡೆಗೆ ಕೂಡಿಕೊಳ್ಳುತ್ತವೆ

ಈ ನಾಲ್ಕು ಸಂಪುಟಗಳ ವಿಂಗಡಣೆಯಿಂದ ಪುರಂದರದಾಸರ ಸಾಹಿತ್ಯದ ಸಮಗ್ರಸ್ವರೂಪವೂ, ವಿಶಿಷ್ಟ ಪ್ರಕಾರಗಳೂ ಜನರಿಗೆ ಮನವರಿಕೆಯಾಗುವುವೆಂದು ನನ್ನ ಎಣಿಕೆ

# ಭಾಗ ೧

## ಮಹಿಮಾದರ್ಶನ

ವ್ಯಾಸರಾಯಸ್ವಾಮಿಗಳು
ವಿಜಯದಾಸರು
ಪ್ರಸನ್ನವೇಂಕಟದಾಸರು
ಜಗನ್ನಾಥದಾಸರು
ಗುರುಪುರಂದರವಿಠಲರು
ತ್ಯಾಗರಾಜಸ್ವಾಮಿಗಳು

೧

ಕಾಂಬೋದಿ  ಝಂಪ

ದಾಸರೆಂದರೆ ಪುರಂದರದಾಸರಯ್ಯ ಪ
ವಾಸುದೇವ ಕೃಷ್ಣನ್ನ ಸೂಸಿ ಪೂಜಿಸುವ ಅ

ಗ್ರಾಸಕಿಲ್ಲದೆ ಪೋಗಿ ಪರರ ಮನೆಗಳ ಪೊಕ್ಕು
ದಾಸನೆಂದು ತುಳಸಿಮಾಲೆ ಧರಿಸಿ
ಬೇಸರಿಲ್ಲದೆ ಅವರ ಕಾಡಿ ಬೇಡಿ ಬಳಲಿಸುತ
ಕಾಸು ಗಳಿಸುವ ಪುರುಷ ಹರಿದಾಸನೇ ೧

ಡಂಭಕದಿ ಹರಿಸ್ಮರಣೆ ಮಾಡಿ ಜನರ ಮುಂದೆ
ಸಂಭ್ರಮದಿ ತಾನುಂಬ ಊಟ ಬಯಸಿ
ಅಂಬುಜೋದ್ಭವಪಿತನ ಆಗಮಗಳರಿಯದೆ
ತಂಬೂರಿ ಮೀಟಲವ ಹರಿದಾಸನೇ ೨

ಯಾಯಿವಾರವ ಮಾಡಿ ವಿಪ್ರರಿಗೆ ವ್ಯಾಖ್ಯಾನ್ನ
ಪ್ರೀಯದಲಿ ತಾನೊಂದು ಕೊಡದ ಲೋಭಿ
ಮಾಯ ಸಂಸಾರದಲಿ ಮಮತೆ ಹೆಚ್ಚಾಗಿಟ್ಟು
ಗಾಯನವ ಮಾಡಲವ ಹರಿದಾಸನೇ ೩

ಪಾಠಕನ ತೆರನಂತೆ ಪದಗಳನು ತಾ ಬೊಗಳಿ
ಕೂಟಜನರನವ ಸಂತೋಷಪಡಿಸಿ
ಗೂಟನಾಮಗಳಿಟ್ಟು ಕೊಟ್ಟರಿಯೆ ತಾನೆನುತ
ತೂಟಕವ ಮಾಡಲವ ಹರಿದಾಸನೇ ೪

ನೀತಿಯೆಲ್ಲವನರಿತು ನಿಗಮವೇದ್ಯನ ನಿತ್ಯ
ವಾತಸುತನಲ್ಲಿಹನ ವರ್ಣಿಸುತಲಿ
ಗೀತನರ್ತನದಿಂದ ಕೃಷ್ಣನ್ನ ಪೂಜಿಸುವ
ಪೂತಾತ್ಮ ಪುರಂದರದಾಸರಿವರಯ್ಯ

[ಇದನ್ನು ರಚಿಸಿದವರು ವ್ಯಾಸತೀರ್ಥರು (ವ್ಯಾಸರಾಯಸ್ವಾಮಿಗಳು), ಪುರಂದರ ದಾಸರ ದೀಕ್ಷಾಗುರುಗಳು ಶಿಷ್ಯನು ತನ್ನ ಗುರುವನ್ನು ಹಾಡಿ ಹೊಗಳುವುದು ವಾಡಿಕೆ ಪುರಂದರದಾಸರು ವ್ಯಾಸತೀರ್ಥರನ್ನು ಕುರಿತು ಹೀಗೆ ಹಲವು ಹಾಡುಗಳನ್ನು ರಚಿಸಿ ದ್ದಾರೆ ಆದರೆ ಗುರು ಶಿಷ್ಯನನ್ನು ಮೆಚ್ಚಿಕೊಂಡು ಅವನನ್ನು ಪ್ರಶಂಸಿಸುವುದು ಅಪರೂಪ ವ್ಯಾಸತೀರ್ಥರು ಪುರಂದರದಾಸರ ವ್ಯಕ್ತಿತ್ವದ ಮೇಲ್ಮೆಯನ್ನೂ, ಹರಿ ಭಕ್ತಿಯ ನೆಲೆಯನ್ನೂ ಅರಿತುಕೊಂಡಿದ್ದರು ಅವರು ತಮ್ಮ ಶಿಷ್ಯನನ್ನು ಹಾಡಿ ಹೊಗಳಿದಂತೆಯೇ, ಅವರ ಗುರುಗಳಾದ ಶ್ರೀಪಾದರಾಜರೂ ತಮ್ಮನ್ನು ಹಾಡಿ ಹೊಗ ಳಿದ್ದು ಅವರ ನೆನಪಿನಲ್ಲಿದ್ದಿರಬೇಕು ಶ್ರೀಪಾದರಾಜರು ತಮ್ಮ ಶಿಷ್ಯ ವ್ಯಾಸತೀರ್ಥ ರನ್ನು ಕುರಿತು ಹೀಗೆ ಹಾಡಿದ್ದಾರೆ

ಇದಿರದಾವನು ನಿನಗೀ ಧರೆಯೊಳು
ಪದುಮನಾಭನ ದಾಸ ಪರಮೋಲ್ಲಾಸ

ವಾದಿತಿಮಿರಮಾರ್ತಾಂಡನೆಂದೆನಿಸಿದ
ವಾದಿ ಶರಭ ಭೇರುಂಡ ವ್ಯಾಸರಾಯ

ಯತಿಗಳೊಳಗೆ ನಿಮ್ಮಂದದವರುಗಳ
ಪ್ರತಿಗಾಣೆನು ಈ ಕ್ಷಿತಿಯೊಳು ವ್ಯಾಸರಾಯ

ಹಮ್ಮನಳಿದು ಶ್ರೀಪತಿರಂಗವಿಠಲನ್ನ
ಸುಮ್ಮಾನದಿಂ ಸೇವಿಪ ವ್ಯಾಸಮುನಿರಾಯ ]

ಸೂಸಿ—ಭಕ್ತಿಯನ್ನು ಸಿಂಪಡಿಸಿ

ಅಂಬುಜೋದ್ಭವ ಪಿತನ ಆಗಮಗಳು—ಅಂಬುಜೋದ್ಭವ(ಬ್ರಹ್ಮ)ನ ಪಿತನೆಂದರೆ ವಿಷ್ಣು, ವಿಷ್ಣುವಿನ ನಾಭಿಕಮಲದಿಂದ ಚತುರ್ಮುಖ ಬ್ರಹ್ಮನು ಹೊರಬಂದ ನೆಂದು ಪ್ರತೀತಿ ವಿಷ್ಣುವಿನ ಆಗಮಗಳೆಂದರೆ ಪಾಂಚರಾತ್ರಶಾಸ್ತ್ರ, ಭಾಗವತ ಧರ್ಮಕ್ಕೆ ಮೂಲಭೂತವಾದುದು ಶ್ವೇತದ್ವೀಪದಲ್ಲಿ ನಾರಾಯಣನು ನಾರದ ನಿಗೆ ಈ ಶಾಸ್ತ್ರವನ್ನು ತಿಳಿಯಹೇಳಿದನೆಂದು ಮಹಾಭಾರತದ ನಾರಾಯಣೀಯ ವೆಂಬ ಪರಿಚ್ಛೇದದಲ್ಲಿ ವಿವರಣೆಯಿದೆ ಈ ಧರ್ಮಕ್ಕೆ ಮುಖ್ಯವಾದುದು ಭಕ್ತಿ. ಭಕ್ತಿಯ ಆಗತ್ಯವನ್ನೂ ಸ್ವಾರಸ್ಯವನ್ನೂ ಮನಗಾಣಿಸಲೆಂದೇ ಸಂಗೀತ ಅದಕ್ಕೆ ಹೊಂದಿಕೊಂಡಿರುವುದು ಭಕ್ತಿಯ ಬಲವಿಲ್ಲದೆ ತಂಬೂರಿ ಮೀಟಿಕೊಂಡು ಹಾಡಿದರೆ ಅವನು ಹರಿದಾಸನಲ್ಲ

ಯಾಯಿವಾರ—ಧರ್ಮದ ಅನುಷ್ಠಾನದಲ್ಲಿ ದಿನವೂ ಊರೂರು ತಿರುಗುತ್ತ ಭಿಕ್ಷೆ ಬೇಡಿ ಹೊಟ್ಟೆಹೊರೆದುಕೊಂಡು ತೃಪ್ತರಾಗಿರುವವರಿಗೆ 'ಯಾಯಾವರ'ರೆಂದು ಹೆಸರು ಭಾಗವತಕ್ಕೆ ಶ್ರೀಧರಸ್ವಾಮಿ ಬರೆದಿರುವ ಟೀಕೆಯಲ್ಲಿ 'ಯಾಯಾವರಂ

ಪ್ರತ್ಯಹಂ ಧಾನ್ಯಯಾಂಚಾ' ಎಂದು ವಿವರಣೆಯಿದೆ ಇದೇ ಕನ್ನಡದಲ್ಲಿ 'ಯಾಯಿವಾರ'ವಾಗಿರುವುದು ಭಾಗವತರು ಹೀಗೆ ದಿನವೂ ತಿರುಗಾಡಿ ಹಲವರು ಗೃಹಸ್ಥರ ಮನೆಗಳಿಂದ ಪಡೆದುಕೊಂಡ ಆಹಾರಸಾಮಗ್ರಿಯನ್ನು ಮನೆಗೆ ತಂದು, ಭಗವದ್ಭಕ್ತರನ್ನೂ ಭಾಗವತರನ್ನೂ ಕರೆದು ಉಣಬಡಿಸುವರು ಹಾಗೆ ಮಾಡಿ ತಿರಿದು ತಂದದ್ದನ್ನೆಲ್ಲ ತಾನೇ ಉಂಡು ನಲಿಯುವುದನ್ನು ಇಲ್ಲಿ ಜರಿಯಲಾಗಿದೆ

ಪಾರಕ—ಸ್ತುತಿಪಾರಕರು ಅಥವಾ ಭಟ್ಟಂಗಿಗಳು ಅರಸರ ಆಸ್ಥಾನಗಳಲ್ಲಿ ಅರಸನ ಗುಣಕೀರ್ತನೆಗೆಂದು ಸಂಬಳಕ್ಕೆ ಇರುವ ಹೊಗಳುಭಟ್ಟರು ಅರಸನ ಗುಣ ಇದ್ದರೂ ಸರಿ, ಇಲ್ಲದಿದ್ದರೂ ಸರಿ, ಅವನು ಕೊಡುವ ಹಣಕ್ಕೆ ಆಸೆಪಟ್ಟು ಅವನನ್ನು ಯಥೇಚ್ಛವಾಗಿ ಹೊಗಳುವುದು ಇವರ ವೃತ್ತಿ ಹೀಗೆ ಹೃದಯ ಸಂಸ್ಕಾರವಿಲ್ಲದೆ, ಮಾಹಾತ್ಮ್ಯಜ್ಞಾನವಿಲ್ಲದೆ ಹರಿಗುಣಕೀರ್ತನೆಯನ್ನು ಜೀವನೋಪಾಯಕ್ಕಾಗಿ ಕೈಗೊಳ್ಳುವವರನ್ನು ಇಲ್ಲಿ ಖಂಡಿಸಿದ್ದಾರೆ

ಕೂಟಜನ—ಪರಿಷೆಯಲ್ಲಿ ನೆರೆಯುವ ಪಾಮರರು, ಸಂಸ್ಕಾರವಿಲ್ಲದವರು, ವಿವೇಕ ಬುದ್ಧಿ ಸಾಲದವರು

ಗೂಟನಾಮಗಳು—ಸಂಸ್ಕೃತದಲ್ಲಿ ಊರ್ಧ್ವಪುಂಡ್ರ ದೇಹದ ಹಣೆ, ಕತ್ತು, ಎದೆ, ಹೊಟ್ಟೆ, ಭುಜಗಳು, ಬೆನ್ನು, ಕಿವಿಯ ಹಿಂಭಾಗ, ಈ ಸ್ಥಳಗಳಲ್ಲಿ ಗೋಪಿ ಚಂದನದ ಹನ್ನೆರಡು ನಾಮಗಳನ್ನು ದೇವರ ಹೆಸರುಗಳಿಂದ ಧರಿಸುವುದು ಭಾಗವತ ಸಂಪ್ರದಾಯದಲ್ಲಿದೆ

ತೂಟಕ—ಕಳ್ಳತನ (ತುಡುಗು), ಮೋಸ

ನಿಗಮವೇದ್ಯನ—ಭಗವಂತನನ್ನು ಅರಿಯಲು ಪ್ರತ್ಯಕ್ಷವಾಗಲೀ ಅನುಮಾನವಾಗಲೀ ನೆರವಾಗದೆ ಶ್ರುತಿಯೊಂದೇ ಕಾರಣವಾಗುವುದರಿಂದ ಭಗವಂತನನ್ನು 'ಸದಾಗಮೈಕವೇದ್ಯ'ನೆಂದು ಮಧ್ವಾಚಾರ್ಯರು ಹೇಳಿದ್ದಾರೆ

ವಾತಸುತನಲ್ಲಿಹನ—ವಾತಸುತನೆಂದರೆ ಹನುಮಂತ, ಮುಖ್ಯಪ್ರಾಣ ಅವನ ಅವತಾರವೇ ಮಧ್ವಾಚಾರ್ಯರೆಂದು ನಂಬಿಕೆ ಮುಖ್ಯಪ್ರಾಣನಲ್ಲಿ ಅಂತರ್ಯಾಮಿಯಾಗಿ ಪ್ರೇರಕನಾಗಿದ್ದುಕೊಂಡು ಹರಿಯು ಅವನಿಂದ ಎಲ್ಲ ಕೆಲಸಗಳನ್ನೂ ಮಾಡಿಸುವನೆಂದು ನಂಬಿಕೆ ಅದಕ್ಕಾಗಿಯೇ 'ಭಾರತೀರಮಣ ಮುಖ್ಯ ಪ್ರಾಣಾಂತರ್ಗತ'ನೆಂಬ ಒಕ್ಕಣೆಯಿರುವುದು , 'ಶ್ರೀಮನ್ಮಧ್ವಾಚಾರ್ಯ ಹೃತ್ಕಮಲಮಧ್ಯನಿವಾಸಿ'ಯೆಂದೂ ನಾರಾಯಣನ ವರ್ಣನೆಯಿದೆ

ಗೀತನರ್ತನದಿಂದ—ಹರಿದಾಸಪಂಥದಲ್ಲಿ ಸಂಕೀರ್ತನವೇ ಮುಖ್ಯವಾದ ಸಾಧನೆ. ಭಾವದ ಭರದಲ್ಲಿ ನರ್ತನವೂ ಸೇರುತ್ತದೆ. ಪುರಂದರದಾಸರೇ ಒಂದೆಡೆ

ತಾಳ ದಂಡಿಗೆ ನೃತ್ಯಗೀತ ಸಮ್ಮೇಳದಿ
ಊಳಿಗವನು ಮಾಳ್ಪ ಹರಿದಾಸರ

ಎಂದಿದ್ದಾರೆ ವಿಜಯದಾಸರ ವೇಂಕಟೇಶಸ್ತೋತ್ರದಲ್ಲಿ

ದಂಡಿಗೆ ಶಂಖ ತಾಳ ತಂಬೂರಿ ಜಾಗಟೆಯ
ಗೊಂಡು ನಿನ್ನಯ ಪರಮ ಪ್ರೀತ್ಯರ್ಥ ದಾಸರು
ಹಿಂಡು ಹಿಂಡಾಗಿ ಸರ್ವಾಗನಾಗಿ ನಿಂದು ಬೊಮ್ಮಾಂಡ
ಕಟಹ ಬಿಚ್ಚುವಂತೆ
ತಂಡ ತಂಡದಿ ಗೆಜ್ಜೆಕಟ್ಟಿ ಅಭಿನಯ ತಿರುಹಿ
ಕೊಂಡಾಡೆ ಶಬ್ದ ಪ್ರತಿಶಬ್ದವಾಗುತಿದೆ ಭೂ
ಮಂಡಲದೊಳಗೆ ಈ ಸೊಬಗ ಬಲ್ಲವರಾರು
ಕುಂಡಲ ಗಿರಿವಾಸ

ಎಂದು ಒಕ್ಕಣೆಯಿದೆ

ಕೃಷ್ಣನ್ನ—ಕೃಷ್ಣ, ಶ್ರೀಕೃಷ್ಣ, ಸಿರಿಕೃಷ್ಣ ಎಂಬುದು ವ್ಯಾಸತೀರ್ಥರ ಕಾವ್ಯಾಂಕಿತ

(ಈ ಕೃತಿಯು ವಿಜಯದಾಸರ ಕಾಲಕ್ಕೂ ಪ್ರಸಿದ್ಧವಾಗಿದ್ದಿತು ಅವರ ಒಂದು ಸುಳಾದಿಯಲ್ಲಿ ಇದರ ಮೊದಲ ಸಾಲನ್ನು ಉಲ್ಲೇಖಿಸಿದ್ದಾರೆ ಮಟ್ಟತಾಳದ 'ವ್ಯಾಸರಾಯರ ಉಪದೇಶವನ್ನೆ ಕೊಂಡು' ಎಂಬ ಭಾಗದಲ್ಲಿ

'ದೇಶದೊಳಗೆ ಮೆರೆದು ನಾಶರಹಿತ ರಂಗವಿಜಯವಿರಲನ್ನ
ದಾಸರೆಂದರೆ ಪುರಂದರದಾಸರೆನಿಸುತ್ತ')



## ೨

ಉದಯರಾಗ | ವಾರ್ಧಿಕಷಟ್ಪದಿ

ಬಂದ ದುರಿತ ವಿನಾಶನಾ ಪ

ಬಂದ ದುರಿತ ವಿನಾಶ ಇಂದು ಪುರಂದರನ
ಪೊಂದುತಲಿ ಅತಿ ಭಕುತಿಯಿಂದ ಸ್ಮರಿಸುವ ಜನರ
ಹಿಂದೆ ಮುಂದೇಳು ಕುಲಕೋಟಿಗಳು ಉದ್ಧಾರ ಸಂದೇಹ ಸಲ್ಲದಿದಕೆ ಅ

ದ್ವಾರಕಾಪುರದಲ್ಲಿ ಶ್ರೀರಮಣ ಸಭೆಯೊಳಗೆ
ಚಾರುಮಂಡಿತನಾಗಿ ಕುಳಿತಿರಲು ಯದು ಪರಿ
ವಾರ ವಾಲಗ ಮಾಡೆ ಸುತ್ತಲಿಹ ಗೋಪಿಕಾ ನಾರಿಯರ ಖ್ಯಾಲದಲ್ಲಿ
ವಾರ ಕಾಂತೆಯರು ಮುದವೇರಿ ನೃತ್ಯವ ಮಾಡೆ
ಬೋರೆಂಬ ವಾದ್ಯವಿಳೆಯೊಳಗೆ ಮೊಳಗೆ ದೇವತತಿ
ಧೀರರಾರಾರೆಂದು ಪೊಗಳಲಾ ನಭದಿಂದ ನಾರದನು ಧರೆಗಿಳಿದನು ೧

ಬರುತಲೇ ವೈಕುಂಠಪುರದರಸಗೆರಗಿದನು
ಕರಗಳನು ಮುಗಿದು ಕಿನ್ನರಿ ಧರಿಸಿ
ಹರುಷದಲಿ ಸ್ವರವೆತ್ತಿ ಮೂವತ್ತೆರಡು ರಾಗಗಳಲಿದಿರು ನಿಂದು
ಎರಡು ಕಂಗಳ ಧಾರೆ ಸುರಿಯೆ ಪುಳಕೋತ್ಸಹದಿ
ಕೊರಳುಬ್ಬಿ ತೊದಲುನುಡಿ ಮೈಸ್ಮರಣೆ ಹಾರೆ ಶ್ರೀ
ಹರಿ ಹರೀ ಹರಿಯೆಂದು ಹರಿದಾಡುತಿರಲಾಗ ಸುರರು ಶಿರವನೆ ತೂಗಲು ೨

ಅಚ್ಯುತನು ಪರಮಭಾಗವತನ್ನ ಭಕುತಿಗೆ
ಮೆಚ್ಚಿದೆನು ಬೇಡುವುದು ವರವಧಿಕವೆಂದೆನಲು
ಮುಚ್ಚಿದಂಬಕಗಳನು ತೆರೆದು ಗೀರ್ವಾಣಮುನಿ ಎಚ್ಚರಿಕೆಯನು ಪೇಳುತ
ಅಚ್ಚಗನ್ನಿಕೆ ರಮಣ ದೀನನನು ಮನ್ನಿಪುದು
ನಿಚ್ಚಟನ್ನಯ ಕೂಡೆ ಬಿಡದೆ ಆಡೆನಲು ಕಲಿ
ಹೆಚ್ಚಿದಾಯುಗದಲ್ಲಿ ಸಲಿಸುವೆನು ಕೀರ್ತಿಗಳ ಬಿಚ್ಚಿ ತೋರಿಸುವೆನೆಂದ ೩

ವರಪಡೆದು ನಾರದನು ಇರುತಿರಲು ತಾವಿತ್ತ
ಬರಲು ಕಲಿ ದೊರೆತನವು ಕೆಲವು ಕಾಲಾಂತರಕೆ
ಸಿರಿವರನ ದಯದಿಂದ ಜನಿತರಾದರು ಪುರಂದರವೆಂಬ ನಗರಿಯಲ್ಲಿ

ಚರಿಸಿದರು ಕೆಲವು ದಿನ ಸಂಸಾರವೃತ್ತಿಯಲಿ
ಜರಿದು ವೈರಾಗ್ಯವನು ತೊಟ್ಟು ದೃಢ ಮನಸಿನಲಿ
ತರುಣಿ ಮಕ್ಕಳು ಸಹಿತ ಸೇರಿದರು ಕಿಷ್ಕಿಂಧಗಿರಿ ತುಂಗಪಂಪದಲ್ಲಿ ೪

ಅಂದು ಭಕುತಗೆ ಇತ್ತ ಭಾಷೆ ತಪ್ಪಲಿ ಬಾರ
ದೆಂದು ಇಂದಿರಾಪತಿಯು ದಯದಿಂದ ಒಲಿದವರ
ಮುಂದೆ ಒಂದರಘಳಿಗೆ ತೊಲಗದೆಲೆ ಕುಣಿಕುಣಿದಾನಂದವನೆ ತೋರಿಕೊಳುತಾ
ಮಂದ್ಯಭಾಗ್ಯರಿಗೆಲ್ಲ ಈ ಪರಿಯು ಸೊಬಗುಂಟೆ ನಾ
ರಂದರಿವರಾದ ಕಾರಣದಿಂದ ಪರಬೊಮ್ಮ
ಬಂದು ನಿಲುಕಿದನೆಂಬುದಿದಕೆ ಪ್ರಮಾಣವೆಂದು ತಿಳಿವುದು ಸುಜನರು ೫

ವಾಸವನೆ ಮಾಡಿದರು ಪ್ರಹ್ಲಾದನವತಾರ
ವ್ಯಾಸರಾಯರ ಬಳಿಯೆ ಮುದ್ರೆ ಗುರುಮಂತ್ರ ಉಪ
ದೇಶ ಕೈಗೊಂಡು ವೈಷ್ಣವರಾಗಿ ಪುರಂದರದಾಸರೆಂಬುವ ಪೆಸರಲಿ
ದೇಶಗಳ ತಿರುಗಿ ಪುಣ್ಯಕ್ಷೇತ್ರಗಳ ಮೆಟ್ಟಿ
ಲೇಸಾಗಿ ಅಲ್ಲಿದ್ದ ಮಹಿಮೆಗಳ ಪೇಳಿ ದು
ರಾಸೆಯನು ತೊರೆದು ವಿಠ್ಠಲನ ಸನ್ನಿಧಿಯಲ್ಲಿ ವಸಿಸಿದರು ಧರ್ಮ ಬಿಡದೆ ೬

ಉಪಾದಾನವನು ಬೇಡಿ ವಿಪ್ರರಿಗೆ ಮೃಷ್ಟಾನ್ನ
ಅಪರಿಮಿತವಾಗಿ ಉಣಿಸುತ್ತಿರಲು ಅವರಲ್ಲಿ
ಗುಪಿತಚರಿತೆಯ ಕಂಡು ದೇವಮುನಿ ತಟನಿಗಳು ತಪಸು ಫಲವಾಯಿತೆಂದು
ತಪನಕಾಲದಲೆದ್ದು ದಾಸರಾ ಸದನದಲಿ
ಜಪಿಸಿ ತಮತಮ ತಕ್ಕ ತಾರತಮ್ಯಗಳಿಂದ
ಉಪಚಾರ ಕೈಕೊಂಡು ಧನ್ಯರಾದೆವೆಂದು ಸುಪಥವನು ಇಚ್ಛಿಸುವರು ೭

ಅವರಂದ ವಚನಗಳೆಲ್ಲ ವೇದಾರ್ಥವಾಗಿ
ಅವನಿಯೊಳು ತುಂಬಿಹವು ಒಂದರೆ ಗ್ರಹಿಸಿದರ
ಭವರೋಗ ಭಸಿತರಾಗಿ ಸುಜ್ಞಾನವೆಂಬಂಥ ಭುವನನದಿಯೊಳಗೆ ಮುಳುಗಿ
ಪವನಮತವಿಡಿದು ಪರಿಪೂರ್ಣಮಾಚಾರದಲಿ
ತವಕದಿಂದಲಿ ಹರಿಯ ಪಾದವನೆ ಪಡಕೊಂಡು
ಜವನಪುರದಾಟಿ ಜನ ತಪ ಸತ್ಯ ಲೋಕದಲಿ ನವರೂಪಿನಲಿ ಇಪ್ಪರು ೮

ಏನು ಇದು ಎಂದು ದೂಷಿಸದಿರಿ ದಾಸರ
ಸೂನು ಪೇಳಿದನು ಗುರುವ್ಯಾಸಮುನಿರಾಯರಿಗೆ
ಆ ನಾರದರೆ ಪುರಂದರದಾಸರೆಂಬಂಥ ಸೂನೃತದಸಿದ್ಧಾಂತದ
ಧ್ಯಾನದಲಿ ತಿಳಿದು ಸುಜ್ಞಾನಿಗಳ ಪದನಖದ
ರೇಣಿನವನಾಗಿ ಬಿನ್ನೈಸಿದೆನು ಜ್ಞಾನಮಯ
ಆನಂದಮಯ ವಿಜಯವಿಠಲನ ಪಾದಾಂಬುಜವ ಕಾಣುವಾ ಜನ ಲಾಲಿಸಿ ೯

[ವಿಜಯದಾಸರು ಕನಸಿನಲ್ಲಿ ಪುರಂದರದಾಸರಿಂದ ಅಂಕಿತವನ್ನು ಪಡೆದು ಹರಿದಾಸ ರಾದವರು ಅವರ ಕಾಲ 1687 ರಿಂದ 1755ರವರೆಗೆ ಪುರಂದರದಾಸರ ಪದ ಗಳನ್ನು ಸಂಗ್ರಹಿಸಿ ಪ್ರಚಾರ ಮಾಡಿದವರಲ್ಲಿ ಅವರೇ ಮೊದಲಿಗರು ಅವರಿಂದ ದಾಸ ಕೂಟದ ಎರಡನೆಯ ಘಟ್ಟ ಮೊದಲಾಯಿತು ]

ದ್ವಾರಕಾಪುರದಲ್ಲಿ—ಇಲ್ಲಿ ದ್ವಾರಕಾಪುರವೆಂದರೆ ವಿಶ್ವಕರ್ಮನಿಂದ ನಿರ್ಮಿತವಾದ 'ವೈಕುಂಠಸದೃಶ'ವಾದ ಸ್ಥಳ, 'ಸರ್ವೇಷಾಮಪಿ ಸ್ವರ್ಗಾಣಾಂಪರ' ಎಂಬ ವರ್ಣನೆಯಿದೆ ಭಾಗವತರಿಗೆ ಪರಮಪ್ರೀತ್ಯಾಸ್ಪದವಾದ ಧಾಮ

ವಾಲಗಮಾಡೆ—ಓಲಗ, ಓಲೈಸುತ್ತಿರಲು, ವಿನಮ್ರರಾಗಿ ನೆರೆದಿರಲು

ವಾರಕಾಂತೆಯರು—ಅಪ್ಸರೆಯರು

ಮೂವತ್ತೆರಡು ರಾಗಗಳಲಿ—ಆ ಕಾಲದಲ್ಲಿ ಪ್ರಚುರವಾಗಿದ್ದ ರಾಗಗಳು, 'ಬತ್ತೀಸ' ರಾಗಗಳೆಂದೂ ಉಲ್ಲೇಖವಿದೆ ನಾಲ್ಕನೆಯ ಸಂಪುಟದ ಪ್ರಸ್ತಾವನೆ ನೋಡಿ

ಗೀರ್ವಾಣಮುನಿ—ದೇವಲೋಕದ ಋಷಿಯಾದ ನಾರದ

ಎಚ್ಚರಿಕೆಯನು ಪೇಳುತ—ದೇವರಲ್ಲಿ ಅತಿಶಯವಾದ ಪ್ರೀತಿಯಿಂದ, ಅವನಿಗೆ ಎಲ್ಲಿ ಏನಾದೀತೋ ಎಂದು ತಾಯಿಗೆ ಸಹಜವಾದ ಆತಂಕದಿಂದ, 'ಜೋಪಾನ ವಾಗಿರು' ಎಂದು ಎಚ್ಚರಿಸುವುದು ಭಕ್ತರಲ್ಲಿ ಬಳಕೆಯಿದೆ

ಅಚ್ಚಗನ್ನಿಕೆ ರಮಣ—ಲಕ್ಷ್ಮಿಯ ಗಂಡ, ನಾರಾಯಣ ಲಕ್ಷ್ಮಿ > ಅಚ್ಚಿ

ಪುರಂದರವೆಂಬ ನಗರಿಯಲಿ—ಪುರಂದರದಾಸರೆಂಬ ಹೆಸರು ಅವರು ಹುಟ್ಟಿದೂರು ಪುರಂದರವೆಂಬ ಕಾರಣದಿಂದ ಬಂದಿತು ಎಂದು ಬಗೆದು, ಪುಣೆಯ ಹತ್ತಿರ ಇರುವ ಪುರಂದರಘಡದಲ್ಲಿ ಹುಟ್ಟಿದರು ಎಂಬ ನಂಬಿಕೆಯಿದೆ 'ಪುರಂದರಗಡ' ವೆಂದು ಒಂದು ಪದದಲ್ಲಿ ವಿಜಯದಾಸರೇ ಹೇಳಿದ್ದಾರೆ ಇನ್ನೊಂದು ಪದ

ದಲ್ಲಿ 'ಪಾಕಶಾಸನಪುರ'ವೆಂದು ಪರ್ಯಾಯವಾಗಿ ಹೇಳಿದ್ದಾರೆ ಆದಕೆ ಪುರಂದರದಾಸರ ಜನ್ಮಸ್ಥಳ ಪುರಂದರಘಡವೆನ್ನಲು ಆಧಾರ ಸಾಲದು

ಕಿಷ್ಕಿಂಧಗಿರಿ ತುಂಗ ಪಂಪದಲ್ಲಿ—ಹಂಪಿಯಲ್ಲಿ

ಮುದ್ರೆ—ಮುದ್ರಾಂಕನ, ಮಾಧ್ವವೈಷ್ಣವನಾಗಲು ಅಗತ್ಯವಾದ ಒಂದು ಸಂಸ್ಕಾರ, ತಪ್ತ–ಮುದ್ರಾಂಕನ, ಕಾವ್ಯಾಂಕಿತವೂ ಆಗುತ್ತದೆ ಹೀಗೆ ಮುದ್ರಾಂಕನ ಕೊಟ್ಟು ವ್ಯಾಸತೀರ್ಥರು 'ಪುರಂದರವಿಠಲ'ನೆಂದು ಪುರಂದರದಾಸರನ್ನು ಕರೆದರು ಅಲ್ಲಿಂದಾಚೆ ಅವರು ಹರಿದಾಸರು, ತಮ್ಮೆಲ್ಲ ರಚನೆಗಳಲ್ಲೂ ಇದೇ ಅಂಕಿತವನ್ನೇ ಬಳಸುತ್ತ ಬಂದರು

ಗುರುಮಂತ್ರ—ಹರಿಯೇ ಸರ್ವೋತ್ತಮನೆಂಬ ಅರಿವನ್ನು ಮೂಡಿಸುವವನು ಗುರು; ಅವನನ್ನು ನಂಬಿ ಪಡೆದುಕೊಂಡದ್ದೇ ಮುಕ್ತಿಗೆ ಕಾರಣವಾಗುವ ಜ್ಞಾನ 'ಗುರುವಿನ ಗುಲಾಮನಾಗುವ ತನಕ ಮುಕ್ತಿ ದೊರೆಯದು' ಎಂದು ಪುರಂದರ ದಾಸರೇ ಹೇಳಿದ್ದಾರೆ ಹರಿಯ ಒಲುಮೆಯನ್ನು ಗುರುವಿನ ಮೂಲಕವೇ ಪಡೆದುಕೊಳ್ಳಬೇಕಾದುದರಿಂದ ಗುರುನಿಷ್ಠೆ ಅಗತ್ಯ ಇದು ಗುರುಮಂತ್ರದ ಪ್ರಯೋಜನ ಮಾಧ್ವ ಸಂಪ್ರದಾಯದಲ್ಲಿ 'ಗುರು'ವೆಂದರೆ ಮಧ್ವಾಚಾರ್ಯರು 'ಹರಿ–ಗುರು'ವೆಂದು ಹರಿಯ ನಂತರ ಅವರದ್ದೇ ಹಿರಿಮೆ ಹರಿಯ ಅನುಜ್ಞೆ ಯಿಂದ ಗುರುವೇ ಮೋಕ್ಷಪ್ರದರು ಹರಿ ಸರ್ವೋತ್ತಮನಾದರೆ ಗುರು ಜೀವೋತ್ತಮ

ಉಪದೇಶ—ಹರಿಯು ಸ್ವತಂತ್ರ, ಸರ್ವೋತ್ತಮ, ಜೀವರಿಗೆ ನಿಯಾಮಕ ಜೀವರಲ್ಲಿ ತ್ರೈವಿಧ್ಯ, ತಾರತಮ್ಯ, ಪಂಚಭೇದ, ಸಾಧನಾತ್ರೈವಿಧ್ಯ (ಶ್ರವಣ, ಮನನ, ನಿದಿಧ್ಯಾಸನ) ಮೊದಲಾದ ಪ್ರಮೇಯಗಳು ಮತ್ತು ಹರಿನಾಮದ ಮಹಿಮೆ, ಅವತಾರತ್ರಯದ ಸ್ವಾರಸ್ಯ, ಭಕ್ತಿಯ ಬಗೆಗಳು ಮೊದಲಾದ ಸಿದ್ಧಾಂತಗಳ ಬೋಧನೆ

ವೈಷ್ಣವರಾಗಿ—ಹರಿದಾಸರಾಗುವ ಮೊದಲು ಪುರಂದರದಾಸರ ಧಾರ್ಮಿಕ ನಿಲುವು ಏನಾಗಿದ್ದಿತೆಂದು ತಿಳಿದುಬರುವುದಿಲ್ಲ ಭಾಗವತರಾಗಿದ್ದಿರಬೇಕೆಂದು ಊಹೆ ಯಿದೆ ಭಾಗವತರು ವೈಷ್ಣವರೇ ಆದರೂ ಇಲ್ಲಿ ವೈಷ್ಣವ ಎಂಬ ಮಾತನ್ನು 'ಮಾಧ್ವವೈಷ್ಣವ' ಎಂಬರ್ಥದಲ್ಲಿ ಬಳಸಿದ್ದಾರೆ

ಉಪಾದಾನವನು ಬೇಡಿ—ಹರಿದಾಸರು ಲೌಕಿಕವಾದ ಯಾವ ವೃತ್ತಿಯನ್ನೂ ವ್ಯಾಪಾರವನ್ನೂ ಹಿಡಿಯದೆ ಹರಿಯ ಸೇವೆಗೇ ಬದುಕನ್ನು ಮುಡಿಪಾಗಿಡು ತ್ತಾರೆ. ಹರಿಯ ಸಂಕೀರ್ತನೆಯನ್ನು ಮಾಡುತ್ತ ಮನೆ ಮನೆಗೆ ಹೋಗಿ ಅವ ರಿವರು ಕೊಡುವ ಅಕ್ಕಿ, ಕಾಳು, ದವಸ, ಧಾನ್ಯಗಳನ್ನು ಮನೆಗೊಯ್ದು

ಅಡಿಗೆ ಮಾಡಿ ಭಾಗವತರಿಗೆ ಉಣಬಡಿಸುತ್ತಾರೆ ಇದಕ್ಕೆ 'ಯಾಯಾವರ' ವೆಂದೂ ಮದುಕರ ವೃತ್ತಿಯೆಂದೂ ಹೆಸರು

ಗುಪಿತರೂಪನ—ಅವರಲ್ಲಿ ಅಂತರ್ಯಾಮಿಯಾಗಿ ಪ್ರೇರಕನಾಗಿ ನಿಂತಿರುವ ಪರಮಾತ್ಮ ನನ್ನು ಗುಪ್ತರೂಪನೆಂದು ಇಲ್ಲಿ ಹೇಳಿದ್ದಾರೆ

ತಮ ತಮತಕ್ಕ ತಾರತಮ್ಯ—ಮಾಧ್ವಸಿದ್ಧಾಂತದಲ್ಲಿ ಹೇಳಿರುವ ದೇವತಾ ತಾರತಮ್ಯ, "ಸಿರಿ, ವಿರಿಂಚಿ, ಸಮೀರ, ಗರುಡ, ಶಂಕರ, ಶಕ್ರಾದ್ಯಮರರಿಗೆ ಪರದೈವ" (ವಾದಿರಾಜರ ಒಂದು ಪದ) ನಿತ್ಯಾರ್ಚನೆಯಲ್ಲಿ ಕ್ರಮವರಿತು ದೇವತೆಗಳಿಗೆ ಪೂಜೆ ಸಲ್ಲುತ್ತದೆ

ಅವರಂದ ವಚನಗಳೆಲ್ಲ ವೇದಾರ್ಥವಾಗಿ—ವ್ಯಾಸರಾಯಸ್ವಾಮಿಗಳು ಪುರಂದರದಾಸರ ರಚನೆಗಳನ್ನು 'ಪುರಂದರೋಪನಿಷತ್' ಎಂದು ಕರೆದರು, ಉಪನಿಷತ್ತು ವೇದದ ಪರಮ ಪ್ರಯೋಜನವಾದುದರಿಂದ 'ವೇದಾರ್ಥ' ಉಪನಿಷತ್ತು ಗಳಲ್ಲಿಯೂ ಹರಿಯ ಸರ್ವೋತ್ತಮತ್ವ, ಸಾಕಾರತ್ವ, ಸರ್ವಸಾಕ್ಷಿತ್ವ, ಸರ್ವೇಶ್ವರತ್ವ, ಸ್ವಾತಂತ್ರ್ಯ ಮೊದಲಾದ ಪ್ರಮೇಯಗಳೂ, ಭಕ್ತಿಯ ಅಗತ್ಯವೂ ಸಾರಭೂತವಾಗಿ ಬರುತ್ತವೆ, ಪುರಂದರದಾಸರ ಪದಗಳಲ್ಲಿಯೂ ಇದೇ ಧೋರಣೆಯಿದೆಯಾಗಿ ಉಪನಿಷತ್ತಿಗೆ ಸಮಾನ

ಭುವನನದಿ—ತ್ರಿಪಥಗಾಮಿನಿಯಾದ ಗಂಗೆ

ಪವನಮತ—ಹನುಮಂತನೇ ಮಧ್ವಾಚಾರ್ಯರಾಗಿ ಅವತರಿಸಿ ಬೋಧಿಸಿದ ದ್ವೈತ ಸಿದ್ಧಾಂತ

ಜವನಪುರ—ಯಮನ ಪಟ್ಟಣ, ಮೃತ್ಯು 'ಜವನಪುರ ದಾಟಿ' ಎನ್ನುವುದು 'ಮೃತ್ಯುಂ ತೀರ್ತ್ವಾ' ಎಂಬ ಮಾತಿನ ಕನ್ನಡ ರೂಪ

ಸೂನೃತ—ರಮ್ಯವೂ ಸತ್ಯವೂ ಆದ ಮಾತು



ಪಂತುವರಾಳಿ　　　　　　ಏಕ

ಬೇಸರದೆ ಭಜಿಸಿರೊ ಪುರಂದರದಾಸರಾಯರ　　ಪ
ಶ್ರೀಶ ನಿಮ್ಮನುದಾಸೀನ ಮಾಡದೆ
ಪೋಷಿಸುವ ಸಂತೋಷದಿಂದಲಿ　　ಅ

ಪುರಂದರ ಗಡದ ಒಳಗೆ ಹಿರಿಯ ಸಾಹುಕಾರನೆನಿಸಿ
ಪರಿಪರಿಯ ಸೌಖ್ಯಗಳ ಸುರಿಸುತ್ತ ಇರುತಿರಲು ನರಹರಿ
ಕರುಣದಿಂದಲಿ ಬ್ರಾಹ್ಮಣನಾಗುತ್ತ ಯಾಚಕರ ತೆರದಲಿ
ಹರುಷದಿಂದಲಿ ಮನೆಗೆ ಹೋಗುತ್ತ ಯಜಮಾನ ಕಂಡು
ಜರಿದು ಬ್ರಾಹ್ಮಣನ್ಹೊರಗೆ ನೂಕಲು ಮರುದಿವಸ ಮತ್ಹೋಗಿ ನಿಂತ　　೧

ಬಾರಿಬಾರಿಗೆ ಸಾಹುಕಾರನ ಮೇರೆಯಿಲ್ಲದೆ
ಆರುತಿಂಗಳು ಬೆನ್ನ ಬೀಳುತ್ತ ನಾಯಕನು ಕಾಣುತ
ಆರು ಬಿಡುತಾರೆಂದು ಬೈಯುತ್ತ ಬೇಸತ್ತು ಎರಡು
ಹೇರು ರೊಕ್ಕವ ಮುಂದೆ ಸುರಿಯುತ್ತ ಇದರೊಳಗೆ ದುಡ್ಡೊಂ
ದಾರಿಸಿಕೊಳ್ಳೆಂದು ಪೇಳಲು ನಾರಾಯಣ ಬಿಟ್ಹೋದ ನೆಗುತ　　೨

ಹಿತ್ತಲ ಬಾಗಿಲಲಿ ಹೋಗಿ ಮತ್ತೆ ಆತನ ಮಡದಿಯ ಬೆ
ನ್ಹತ್ತಿ ಬಿದ್ದನು ವಿತ್ತ ತಾರೆನುತ ಮಗನ ಮುಂಜಿಯೆಂದು
ಅತ್ಯಧಿಕದಿಂ ಬಾಯ ತೆರೆಯುತ್ತ ಆ ಪ್ರಾಣಿ ನುಡಿದಳು
ಎತ್ತಣ ದ್ರವ್ಯವು ತನಗೆನುತ ನಿನ್ನ ಮೂಗಿನ
ಮುತ್ತಿನ ಮೂಗುತಿಯ ಕೊಡು ಎನೆ ಉತ್ತಮಳು ತೆಗದಿತ್ತಳು ತ್ವರಿತ　　೩

ಜೋಕೆಯಿಂದಲಿ ಮೂಗುತಿ ಒಯಿದು ಆಕೆ ಗಂಡನ ಕಣ್ಣೆದುರಿಗೆ
ಹಾಕಿದನು ತಾ ಪಾಕಿ ಕೊಡು ಎನುತ ಅದ ಕಂಡು ಇದು ನಂ
ಮ್ಮಾಕೆಯದು ಎಂದು ನುಡಿಯುತ್ತ ಅನ್ಯರದು ಇಂಥಾ
ದ್ಯಾಕೆ ಇರಬಾರದು ಎನುತ ಬೆಲೆ ಹೇಳು ಎನಲು
ನಾಲ್ಕು ನೂರು ಶುಭ್ರ ಕೊಡು ಎಂದ್ಹಾಕಿ ಪೋದನು ತಿರುಗಿ ಬಾರದೆ　　೪

ತಿರುಗಿ ಬ್ರಾಹ್ಮಣ ಬಾರದಿರಲು ಕರೆದು ತನ್ನ ಹೆಂಡತಿಯ
ಬರಿಯ ನಾಸಿಕವನ್ನೆ ಕಂಡನು ಮೂಗುತಿಯು ಎಲ್ಲೆನೆ
ಮುರಿದಿಹುದು ಎಂದಾಕೆ ಪೇಳಿದಳು ಒಳಗ್ಹೋಗಿ ತರದಿರೆ
ಅರೆವೆ ನಿನ್ನ ಜೀವವೆಂದನು ವಿಷಗೊಂಬೆನೆಂದು
ಕರದಿ ಬಟ್ಟಲ ಧರಿಸಲಾಕ್ಷಣ ತ್ವರಿತ ನರಹರಿ ಅದರೊಳ್ಹಾಕಿದ　　೫

ಹರುಷದಿಂದಾಭರಣ ತಂದು ಪುರುಷನ ಕೈಯೊಳಗಿಡಲು
ತರಿಸಿ ತನ್ನಲ್ಲಿದ್ದ ಪೆಟ್ಟಿಗೆಯ ಅದು ಕಾಣದಿರಲು
ಬೆರಗಾಗಿ ನೋಡಿದ ತನ್ನ ಮಡದಿಯ ನಿಜಪೇಳು ಎನಲು
ಅರಸಿ ಪೇಳ್ದಳು ಕೊಟ್ಟ ಸುದ್ದಿಯ ಅಭಿಮಾನಕಂಜಿ
ಅರೆದು ವಿಷವನು ಕುಡಿಯ ಪೋಗಲು ಸಿರಿರಮಣ ತಾ ಕೊಟ್ಟ ಖರೆಯ ೭

ದೇವ ದೇವ ಎನ್ನ ಮನದ ಭಾವವನ್ನು ತಿಳಿವುದಕ್ಕೆ
ತಾ ವೃದ್ಧ ಬ್ರಾಹ್ಮಣನಾಗಿ ಬಂದಿದ್ದ ಪರಿಪಕ್ವವೆನಗಿ
ನ್ನಾವ ಕಾಲಕ್ಕಾಗಬೇಕೆಂದ ವೈರಾಗ್ಯ ಭಾವದಿ
ಜೀವಿಸಿ ಕೊಂಡಿರುವುದೇ ಚೆಂದ ಹೀಗೆಂದು ಮನೆ ಧನ
ಕೋವಿದರ ಕರೆದಿತ್ತು ಹರುಷದಿ ಕಾವನಯ್ಯನ ದಾಸನಾದ ೭

ಲಕ್ಷ್ಮೀಪತಿಯ ಪಾದದಲ್ಲಿ ಲಕ್ಷ್ಯವಿಟ್ಟು ವ್ಯಾಸರಾಯರ
ಶಿಕ್ಷೆಯಿಂದಂಕಿತವಗೊಳ್ಳುತ್ತ ಪದಕೊರತೆ ಐದು
ಲಕ್ಷಪದ ಸುಳಾದಿಗಳ ಪೇಳುತ್ತ ಪ್ರತಿದಿವಸದಲ್ಲಿ
ಪಕ್ಷಿವಾಹನ ನಾಟ್ಯವಾಡುತ್ತ ಅಪರೋಕ್ಷ ಪುಟ್ಟಲು
ಮೋಕ್ಷಸ್ಥಾನಕ್ಕೆ ಕರೆದೊಯ್ದು ಅಧೋಕ್ಷಜನು ಸಂರಕ್ಷಿಸಿದ ೮

ಘೋರನರಕದಲ್ಲಿ ಬಿದ್ದ ಅಪಾರ ಜನರು ಚೀರುತಿರಲು
ದ್ಧಾರಮಾಡಿದ ನಾರದರಿವರು ಅವತಾರಮಾಡಿ
ಧಾರುಣಿಯೊಳ್ ಮತ್ತೆ ಬಂದರು ಸರ್ವೋತ್ತಮನು
ನಾರಾಯಣನೆಂದು ಸಾರಿದರು ಹೀಗೆಂದು ತಿಳಿಯಲು
ಮಾರಜನಕ ವಿಜಯವಿಠ್ಠಲ ಆರಿಗಾದರು ಒಲಿವ ಕಾಣಿರೊ ೯

[ವಿಜಯದಾಸರ ಈ ಪದದಲ್ಲಿ ಮುತ್ತಿನ ಮೂಗುತಿಯ ಕಥೆ ಮೊಟ್ಟಮೊದಲ ಬಾರಿಗೆ ಕಾಣಸಿಗುತ್ತದೆ ಈ ಪದವನ್ನು ಬಿಟ್ಟು ವಿಜಯದಾಸರು ಬೇರೆಲ್ಲಿಯೂ ಈ ಕಥೆಯನ್ನು ಪ್ರಸ್ತಾಪಿಸಿಲ್ಲವೆಂಬುದನ್ನು ಗಮನಿಸಬೇಕು ಅವರ ಕಾಲದಲ್ಲೇ ಇದ್ದ ಪ್ರಸನ್ನವೆಂಕಟ ದಾಸರಾಗಲಿ, ವಿಜಯದಾಸರ ಶಿಷ್ಯರೇ ಆಗಿದ್ದ ಜಗನ್ನಾಥದಾಸರಾಗಲಿ ಈ ಕಥೆಯನ್ನು ತಿಳಿದಿದ್ದಂತೆ ತೋರುವುದಿಲ್ಲ ]

ಕರುಣದಿಂದಲಿ—ಅವನನ್ನು ಉದ್ಧರಿಸಬೇಕೆಂಬ ಬುದ್ಧಿಯಿಂದ

ಹೇರು ರೊಕ್ಕ—ಥೈಲಿ ಹಣ

ದುಡ್ಡು—ಅಲ್ಪ ಬೆಲೆಯು ನಾಣ್ಯ

ಪಾಕಿ—ತಾಮ್ರದ ನಾಣ್ಯ

ಶುಭ್ರ—ಬೆಳ್ಳಗಿರುವ ಬೆಳ್ಳಿ ರೂಪಾಯಿ

ಖರೆ—ಸತ್ಯ ಸಂಗತಿ

ಕೋವಿದರ—ದಾನಕ್ಕೆ ಯೋಗ್ಯರಾದ ಪಂಡಿತರನ್ನು

ಕಾವನಯ್ಯ—ಕಾವ=ಕಾಮ, ಮನ್ಮಥನ, ಅಯ್ಯ=ತಂದೆ—ವಿಷ್ಣು

ವ್ಯಾಸರಾಯರ ಶಿಕ್ಷೆಯಿಂದ ಅಂಕಿತವಗೊಳ್ಳುತ್ತ—ವ್ಯಾಸತೀರ್ಥರಿಂದ ಉಪದೇಶವನ್ನು (ಶಿಕ್ಷಣ) ಪಡೆದು, 'ಪುರಂದರ ವಿಠಲ'ನೆಂಬ ಕಾವ್ಯಾಂಕಿತವನ್ನು ಪಡೆದುಕೊಂಡು.

ಪದ ಕೊರತೆ ಐದುಲಕ್ಷ ಪದ ಸುಳಾದಿಗಳ—ಲಕ್ಷದಲ್ಲಿ ಒಂದು ಪಾದ (ಎಂದರೆ ಇಪ್ಪತ್ತೈದು ಸಾವಿರ) ಕೊರತೆ (ಎಂದರೆ ಕಡಮೆ) ಐದುಲಕ್ಷವಾಗಲು ಇಷ್ಟು ಕಡಮೆ , ಎಂದರೆ ನಾಲ್ಕುಲಕ್ಷ ಎಪ್ಪತ್ತೈದು ಸಾವಿರ ಇದು ಅವರು ರಚಿಸಿದ ಪದ–ಸುಳಾದಿಗಳ ಸಂಖ್ಯೆ

ಅಪರೋಕ್ಷ ಪುಟ್ಟಲು—ಬಿಂಬಾಪರೋಕ್ಷವೆಂಬ ಜ್ಞಾನ ಹುಟ್ಟಲು , ಈ ಜ್ಞಾನವೇ ಮೋಕ್ಷಕ್ಕೆ ಹಿಂದಿನ ಘಟ್ಟ



ಧ್ರುವ

ಗುರುದಾಸರಾಯರಿಗೆ ದಾಸತ್ವ ನೀಡೋಕ್ರಮ
ಕರುಣದಿಂದಲಿ ವ್ಯಾಸಕಾಶಿಯಲ್ಲಿ
ಹರುಷದಿ ಮನಮುಟ್ಟಿ ಪೇಳಿದ್ದ ಪೇಳುವೆನು
ನರಶಿರೋಮಣಿಗಳು ಕೇಳುವುದು
ಸಿರಿ ಮಧ್ವಮುನಿಕೃತ ಸಿದ್ಧಾಂತಸಾರವನ್ನು
ಗುರುವ್ಯಾಸಮುನಿಮುಖದಿಂದ ತಿಳಿದುಕೊಂಡು
ತರತಮ್ಯ ಪಂಚಭೇದ ಮೊದಲಾದ ತತ್ತ್ವಗಳ
ಪರಿಶೋದನವಗೈದು ಮಂದರಿಗೆ
ಹರಿಕರುಣವ ಮಾಳ್ಪ ತತ್ತ್ವ ರಹಸ್ಯವನ್ನು
ಪರಿಪರಿಸುಳಾದಿ ಪದಮುಖ ಪ್ರಾಕೃತದಿ
ಸಿರಿ ವಿಜಯವಿಠ್ಠಲನ ಪ್ರೀತಿಗೋಸುಗ
ತಿರಿ (ತ್ರಿ) ಪಾದೋನ ಪಂಚಲಕ್ಷ ಪೇಳಿಹರೆಂದು  ೧

ಪಾದಪೂರೈಸುತ ಪೋದ ಸಂಸ್ಕೃತವೆಂದು
ಸಾದರದಲಿ ಪರಿಸಿ ಭೂಧರ ವಿಜಯವಿಠ್ಠಲನ್ನ
ಪಾದವನೆ ಕಾಂಬುವುದು ಸತ್ಯ ಸತ್ಯ  ೨

ತ್ರಿವಿಡೆ

ಮುನಿಮಧ್ವ ಹೃದಯವೆ ಪ್ರಾಕೃತ ಗ್ರಂಥವಿದು
ಜನರಿಗೆ ಪೇಳ ಬೇಕಾದುದೆ
ಘನವಾದ ತೈತರೇಯದಲ್ಲಿ ಪೇಳಿದ ಶಾಂತಿ
ಮನದಿ ಪೇಳಿಸುತ್ತ ತತ್ತ್ವಗಳ
ಅನುವಾಗಿ ತಿಳಿಸುತ್ತ ಶ್ರೀನಿವಾಸನ ಪಾದ
ವನರುಹ ತೋರಬಹುದು ನಂಬಿದವರಿಗೆ
ವನಜನಾಭನ ಪಾದ ತುತಿಪಂಥ ಶಕ್ತಿಗೆ
ಘನಪದರೂಪದಂಕಿತವ ಕೊಟ್ಟು ಮತ್ತು
ಅನುನಯದಿಂದ ಶಾಂತಿಪೇಳಿಸಿ ತತ್ತ್ವಗಳ
ಮನದಿಂದಲರುಹಬಹುದು ಸುಗುಣರಿಗೆ
ಮನುಜರಿಗಂಕಿತವು ಶಾಂತಿಯು ಇಲ್ಲದೆಲೆ

ಅನುವಾಗಿ ಪೇಳ್ದ ತತ್ತ್ವಗಳು ವ್ಯರ್ಥಕಾಣೊ
ದನುಜದಲ್ಲಣ ವಿಜಯವಿಠ್ಠಲನ್ನ ದಾಸತ್ವ
ತನ ಧರಿಸೋದು ಬಹುಕಷ್ಟ ಕಷ್ಟವೆಂದು ೩

ಅಟ್ಟ

ಸ್ವಾತಂತ್ರ ದಾಸನು ತುತಿಸಲು ಫಲವೇನು
ಸತತ ಮಾಡುವ ಪುಣ್ಯ ಜಿತಕೆ ನಿಲ್ಲದೆಲೆ ಆ
ಸತಿಯು ವ್ರತದಂತೆ ಚ್ಯುತವಾಗಿ ಪೋಪುದು
ಗತಿಗೆ ಸಾಧನವಿಲ್ಲ ರತಿಪತಿಪಿತ ನಮ್ಮ ವಿಜಯವಿಠ್ಠಲನ್ನ
ಅತಿದಯ ಪಡೆದವರ ಶಿಷ್ಯನಾಗದೆ ಗತಿಯಿಲ್ಲ ೪

ಆದಿ

ಗುರುದ್ವಾರವೆ ಗತಿ ಎಂಬ ಮಾನವನಿಗೆ
ಪರಮಶಾಂತನಿಗೆ ವರವೈಷ್ಣವನಿಗೆ
ದುರಬುದ್ಧಿ ಇರದವಗೆ ನಿರತ ಶಿಷ್ಯನಿಗೆ
ಉರುತರ ತತ್ತ್ವಗಳ ಅವಿರತ ಪೇಳಲು
ದೊರೆವನಾಕ್ಷಣದಲ್ಲಿ ವಿಜಯವಿಠ್ಠಲರೇಯ
ಪರಮ ಹರುಷಪಟ್ಟು ನಲಿದಾಡುವನೆಂದು ೫

ಜೊತೆ

ಗುರುರಾಯರಾಜ್ಞೆ ಸ್ವೀಕರಿಸುವ ನರರಿಗೆ
ಸಿರಿ ವಿಜಯವಿಠ್ಠಲನೆ ಪೊಳೆವನು ನಿಶ್ಚಯ

[ಈ ಸುಳಾದಿಯಲ್ಲಿ ವಿಜಯದಾಸರು ವ್ಯಾಸಕಾಶಿಯಲ್ಲಿ ಪುರಂದರದಾಸರೇ ತಮಗೆ ತಿಳಿಸಿದ ವಿವರವನ್ನು ನಿರೂಪಿಸಿದ್ದೇನೆಂದು ಹೇಳಿದ್ದಾರೆ ಈ ಸುಳಾದಿಯ ಮೊದಲ ತಾಳದಲ್ಲಿ ಪುರಂದರದಾಸರ ಕೃತಿಗಳ ಸಂಖ್ಯೆ ನಾಲ್ಕುಲಕ್ಷ ಇಪ್ಪತ್ತೈದು ಸಾವಿರ ಎಂದು ಹೇಳಿರುವುದು, ಹಿಂದಿನ ಪದದಲ್ಲಿ ಬರುವ ವಿವರಕ್ಕಿಂತ ಬೇರೆಯಾಗಿದೆ ಯೆಂಬುದನ್ನು ಗಮನಿಸಬೇಕು ]

ತರತಮ್ಯ ಪಂಚಭೇದ ಮೊದಲಾದ ತತ್ತ್ವಗಳ—ದೇವತಾ ತಾರತಮ್ಯ (ಹರಿ–ಸಿರಿ (ಲಕ್ಷ್ಮೀ)–ಬ್ರಹ್ಮ – ವಾಯು – ಭಾರತಿ – ಗರುಡಶೇಷರುದ್ರರು – ಷಣ್ಮಹಿಷಿಯರು–ಸೌಪರ್ಣಿವಾರುಣಿ ಪಾರ್ವತಿಯರು–ಇಂದ್ರಕಾಮರು – ತೈಜಸಾಹಂಕಾರಜ ಪ್ರಾಣ–ದಕ್ಷಾನಿರುದ್ಧ ರತಿ ಸ್ವಾಯಂಭುವ ಮನು ಬೃಹಸ್ಪತಿ ಶಚಿಯರು–ಪ್ರವಹಣವಾಯು – ಸೂರ್ಯ ಚಂದ್ರಯಮಾದಿಗಳು – ವರುಣ – ನಾರದ ಇತ್ಯಾದಿ) , ಪಂಚಬೇದ (ಜೀವ–ಜಡ–ಈಶ ಈ ಮೂರರ ನಡುವೆ ಇರುವ ಐದು ಬಗೆ ಭೇದಗಳು), ಹರಿಯ ಸ್ವಾತಂತ್ರ್ಯ, ಜೀವನ ಪಾರತಂತ್ರ್ಯ, ಜಗತ್ತಿನ ಸತ್ಯತ್ವ, ಭಕ್ತಿಯ ಅಗತ್ಯ ಇವೇ ಮೊದಲಾದ ತತ್ವಗಳು ಮಾಧ್ವ ಸಿದ್ಧಾಂತದ ಪ್ರಮೇಯಗಳು

ಪರಿಪರಿಸುಳಾದಿ—ಹಲವು ಪ್ರಮೇಯಗಳನ್ನು ಹಿಡಿದು ಸುಳಾದಿಗಳೂ ಬೇರೆಬೇರೆಯಾಗುತ್ತವೆ ಪ್ರಾರ್ಥನಾ ಸುಳಾದಿ, ಹರಿಸರ್ವೋತ್ತಮ ಸುಳಾದಿ, ವೀರ ನಾರಾಯಣ ಸುಳಾದಿ, ಮುಕ್ತಿ ಸುಖ ಸುಳಾದಿ, ಜನ್ಮ ಸುಳಾದಿ, ಉಡುಪಿ ಕೃಷ್ಣ ಸುಳಾದಿ ಇತ್ಯಾದಿ

ಪ್ರಾಕೃತದಿ—ಕನ್ನಡ ಭಾಷೆಯಲ್ಲಿ

ತ್ರಿಪಾದೋನ ಪಂಚಲಕ್ಷ—ಮೂರು ಪಾದಗಳು (ಎಂದರೆ ಎಪ್ಪತ್ತೈದು ಸಾವಿರ) ಊನ (ಕಡಮೆ)ವಾಗಿ ಐದುಲಕ್ಷ, ಎಂದರೆ ನಾಲ್ಕುಲಕ್ಷ ಇಪ್ಪತ್ತೈದು ಸಾವಿರ

ತೈತರೇಯದಲಿ ಪೇಳಿದ ಶಾಂತಿ—ಗುರುವು ಉಪದೇಶಮಾಡುವಾಗ ಶಾಂತಿಪಾರವನ್ನು ಮಾಡಲೇಬೇಕೆಂಬ ವಿಧಿಯಿದೆ ಹಾಗೆ ಶಾಂತಿಪಾರವನ್ನು ಮಾಡದೆ ಇದ್ದರೆ, ಉಪದೇಶ ವ್ಯರ್ಥವಾಯಿತೆಂದು ನಂಬಿಕೆ

ತುತಿಪಂಥ—ಸ್ತುತಿಸುವಂಥ

ದನುಜದಲ್ಲಣ—ರಾಕ್ಷಸರನ್ನು ನಾಶಗೊಳಿಸುವವನು, ಹರಿ

ಸ್ವತಂತ್ರ ದಾಸನು ತುತಿಸಲು ಫಲವೇನು—ಗುರೂಪದೇಶವಿಲ್ಲದೆ, ಗುರುವಿನಿಂದ ಅಂಕಿತವನ್ನು ಪಡೆದುಕೊಳ್ಳದೆ ಹರಿದಾಸನೇ ಅಲ್ಲ , ಅಂಥವನು ಸ್ತೋತ್ರ ಮಾಡಿದರೂ ಹರಿಯು ಪ್ರಸನ್ನನಾಗುವುದಿಲ್ಲ

ಗತಿಗೆ ಸಾಧನವಿಲ್ಲ—ಮೋಕ್ಷಕ್ಕೆ ಅದು ದಾರಿಯಾಗುವುದಿಲ್ಲ

ರತಿಪತಿಪಿತ—ರತಿಯ ಗಂಡ ಮನ್ಮಥ, ಮನ್ಮಥನ ತಂದೆ ಕೃಷ್ಣ

ಗುರುದ್ವಾರವೇ ಗತಿ—'ಗುರುಮಂತ್ರ' ಪದದ ವಿವರಣೆ ನೋಡಿ

ದುರಬುದ್ಧಿ —ದುರ್ಬುದ್ಧಿ

ಉರುತರ ತತ್ತ್ವಗಳು—ಶ್ರೇಷ್ಠವಾದ ಸಿದ್ಧಾಂತಪ್ರಮೇಯಗಳು(ಹರಿಸರ್ವೋತ್ತಮತ್ವ ಇತ್ಯಾದಿ)

ಧ್ರುವ

ಜಗದ ಪಾವನ್ನಗೋಸುಗವಾಗಿ ಸುರಮುನಿ
ನಗದರನನ್ನೆ ಭಜಿಸಿ ಸುಗುಣದಲ್ಲಿ
ಮಿಗೆಮಾನವರಾಗಿ ಭೂಸುರಗರ್ಭದಲ್ಲಿ ಬಂದು
ಅಘದೂರರಾಗಿ ಬಲು ಪೆಸರಿಸುತ್ತ
ಅಗಣಿತ ಜ್ಞಾನ ಭಕುತಿ ವೈರಾಗ್ಯಪರರಾಗಿ
ಜಗಧರಸುತೆ ಬಳಿಯ ಪಂಚಕೂಟಿ
ನಗ ಪಂಪಾನಿಧಿಯಲ್ಲಿ ವಾಸವಾಗಿ ನಿತ್ಯ
ಜಗದ ಗುರು ವ್ಯಾಸರಾಯರಲ್ಲಿ
ಬಗೆಬಗೆಯಿಂದಲಿ ವಿಶ್ವಾಸವನ್ನುಯಿಟ್ಟು
ಯುಗಳ ಕರವ ಮುಗಿದು ಮುದದಿಂದಲಿ
ಜಗದ ಪಾಲಕ ನಮ್ಮ ವಿಜಯವಿಠ್ಠಲನುಪಾ
ಸಿಗನಾಗಿ ವಿಷಯದಲಿ ಸಿಗದೆ ಹರುಷದಲಿ ೧

ಮಟ್ಟ

ವ್ಯಾಸರಾಯರ ಉಪದೇಶವನ್ನೆ ಕೊಂಡು
ಭಾಸುರಜ್ಞಾನ ಪ್ರಕಾಶಿತಮಯದಿಂದ
ವಾಸುದೇವನ ಪಾದಸರಸಿಜ ಹೃದಯಾ
ಕಾಶದಲಿ ನೋಡಿ ಮಿಾಸಲಮತಿಯಲ್ಲಿ
ದೇಶದೊಳಗೆ ಮೆರೆದು ನಾಶರಹಿತರಂಗ ವಿಜಯವಿಠ್ಠಲನ್ನ
ದಾಸರೆಂದರೆ ಪುರಂದರದಾಸರೆನಿಸುತ್ತ ೨

ರೂಪ

ಪವನಮತವನುಸರಿಸಿ ನವನಾಮವನು ಧರಿಸಿ
ಶ್ರವಣಮನನ ಧ್ಯಾನವನು ಅಂಗೀಕರಿಸಿ
ಅವನಿಯೊಳಗೆ ಹೀನ ದೈವವ ನಿರಾಕರಿಸಿ
ಜವನ ದೂತರಿಗೆ ಭಯವನ್ನೆಲ್ಲ ತೋರಿಸಿ
ಭವರೋಗಗಳ ಪರಾಭವಮಾಡಿ ದೂರಿರಿಸಿ
ಕವಿಗಳ ಮನದ ತಾಪವನು ಪರಿಹರಿಸಿ

ಕವನಕ್ಕೆ ಸರಿಯಿಲ್ಲೆಂದವನಿಯೊಳಗೆ ಮೆರೆಸಿ
ಕವಿತಾಜನರ ಪ್ರೀಯ ವಿಜಯವಿಠ್ಠಲರೇಯ
ದಿವಿಜಾದ್ಯರೊಳು ದೈವವೆಂದು ಪತಿಕರಿಸಿ
ಸವಿನುಡಿಯಿಂದ ನಮ್ಮನ್ನೆಲ್ಲ ಉದ್ಧರಿಸಿ ೩

ಝಂಪೆ

ಲಕ್ಷದಿಪ್ಪತ್ತೈದು ಸಾವಿರ ಪದಗಳು ಪು
ಣ್ಯಕ್ಷೇತ್ರ ತೀರ್ಥಾದಿ ಮಹಿಮೆಯನೆ ಪೇಳಿ ಪ್ರ
ತ್ಯಕ್ಷವಾದ ಗುರುಮಧ್ವರಾಯರ ಮಹಿಮೆ
ಲಕ್ಷಣತತಿಗಳ ಸಂತತಿ ತಂತ್ರಸಾರೋಕ್ತ
ಈಕ್ಷಿತಿಯೊಳಗೆ ತರತಮ್ಯಗುರುಧ್ಯಾನಾ
ಧ್ಯಕ್ಷ ಅವರವರು ಮಾಡುವ ಮೂರುತಿ ಧ್ಯಾನ
ತೀಕ್ಷಣದಿಂದಲಿ ಅವರವರ ಚಾರಿತ್ರೆ
ಅಕ್ಷಯದಿಂದ ಇಪ್ಪತ್ತೈದು ಸಾವಿರ
ಅಕ್ಷರಾಕ್ಷರಪುರುಷ ವಿಜಯವಿಠ್ಠಲನೆಂದು
ದ್ರಾಕ್ಷಾಪಾಕದಂತೆ ಪೇಳಿದರು ಮುಂದೆ ೪

ತ್ರಿವಿಡೆ

ಸುಳಾದಿಗಳು ಅರವತ್ತುನಾಲ್ಕುಸಾವಿರ
ಬಲು ವೃತ್ತನಾಮ ಮುವ್ವತ್ತಾರುಸಾವಿರ
ಸಲೆ ಶ್ವೇತದ್ವೀಪಾನಂತಾಸನ ವೈಕುಂಠ
ನಳಿನಜ ನಗರ ಕೈಲಾಸ ದಿ
ಕ್ಪಾಲಕರ ನಿಲವರ ಪೇಳುವೆನು ಅರವತ್ತು ಸಾವಿರ
ಒಲಿದು ಕೇಳಿ ದಶಕಲ್ಯಾಣ ದಶಚರಿತೆ
ತಿಳಿವುದು ನಾಲ್ವತ್ತು ಸಾವಿರ ನಿಜವೆಂದು
ಇಳೆಯವಲ್ಲಭ ರಂಗ ವಿಜಯವಿಠ್ಠಲನ್ನ
ಕೆಲಕಾಲ ಮನದೊಳು ನಿಲಿಸಿ ಕೊಂಡಾಡುತ್ತ ೫

ಅಟ್ಟ

ನಿಷ್ಠ ಅಹನ್ನೀಕ ಏಕಾದಶೀ ಜನ್ಮ
ಅಷ್ಟವಿಧಾನಿರ್ಣಯ ಗಂಡಕಿ ಶಿಲೆಗಳ
ನಿಷ್ಠಶೋಧಕ ಉಗಾಭೋಗಾದಿ
ಕಷ್ಟಹರ ಬಲ್ಲರೆ ಕಥೆ ಪೀಯೂಷ

ವಷ್ಟು ಎಪ್ಪತ್ತೈದು ಸಾವಿರ ಮಿಳಿತವು
ಸೃಷ್ಟಿಯೊಳಗೆ ಎಲ್ಲ ಗಣಿತ ಮಾಡಲಾಗಿ
ಮೆಟ್ಟಿಗೆ ತ್ರಿವಾದ ಕಡಿಮೆ ಐದು ಲಕ್ಷ
ಇಷ್ಟಾದವು ದಾಸರು ಪೇಳಿದ ಪದ
ಇಷ್ಟದೈವನಾದ ವಿಜಯವಿಠ್ಠಲ ಹರಿಯು
ಗುಟ್ಟಿನಿಂದಲಿ ಸಲಿಸಿ ಕುಣಿಕುಣಿಸುತಲಿ ೬

ಆದಿ

ಭಕ್ತಗೆಲ್ಲಿ ಸರಿಗಾಣೆ ಮುಕ್ತಗೆಲ್ಲಿ ಸರಿಗಾಣೆ
ಮುಕ್ತಾರ್ಥಹರಿ ಪಾದಾಸಕ್ತರಾಗಿ ಧೇನಿಸುತ
ರಕ್ತಾಕ್ಷಿವತ್ಸರದ ಅರ್ಕವಾರ ಇಂದುಕ್ಷಯು
ಯುಕ್ತ ಪುಷ್ಯಮಾಸದಿ ಉದ್ಯುಕ್ತರಾಗಿ ಪುಷ್ಪಕದಿ
ವ್ಯಕ್ತವಾಗಿ ಪೊಳೆದು ಮಧುರೋಕ್ತಿಯಲ್ಲಿ ತರಣಿಯಂತೆ
ಮುಕ್ತಿಗೆ ನಾರಿದರು ವಿರಕ್ತಮಾರ್ಗವನ್ನೆ ಪಿಡಿದು
ಮುಕ್ತಾಮುಕ್ತಾಶ್ರಯು ನಮ್ಮ ವಿಜಯವಿಠ್ಠಲರೇಯನ
ಶಕ್ತನೆಂದು ಪೊಗಳಿ ಬಲುರಿಕ್ತರಿಗಾಧಾರವಿತ್ತು ೭

ಜೊತೆ

ಈಸುಪದಗಳೊಮ್ಮೆ ನೆನೆಸಿದ ಮನುಜನ್ನ
ದಾಸರ ಪೊರೆದಂತೆ ಪೊರೆವ ವಿಜಯವಿಠ್ಠಲ

[ಈ ಸುಳಾದಿಯಲ್ಲಿ ವಿಜಯದಾಸರು ಪುರಂದರದಾಸರು ರಚಿಸಿದ ನಾಲ್ಕು ಲಕ್ಷ ಇಪ್ಪತ್ತೈದು ಸಾವಿರ ಕೃತಿಗಳ ವಿವರಗಳನ್ನು ಹೇಳಿದ್ದಾರೆ ಇದರ ವಿಮರ್ಶೆಗೆ ಈ ಸಂಪುಟದ ಪ್ರಸ್ತಾವನೆ ನೋಡಿ ]

ಜಗದ ಪಾವನ್ನಗೋಸುಗ—ಜಗತ್ತಿನ ಜನರನ್ನು ಪಾವನಗೊಳಿಸಲೆಂದು
ಸುರಮುನಿ—ನಾರದರು
ನಗಧರನನ್ನು—ಗೋವರ್ಧನವೆಂಬ ಬೆಟ್ಟವನ್ನೆತ್ತಿದ್ದ ಕೃಷ್ಣನನ್ನು
ಅಘದೂರರಾಗಿ—ಪಾಪಗಳನ್ನು ಮಾಡದೆ ಶುದ್ಧ ಜೀವನವನ್ನು ನಡೆಸುತ್ತ

ಬಲು ಪಸರಿಸುತ್ತ—ಯಾಯುವಾರ ವೃತ್ತಿಯಿಂದ ಹಲವು ಕ್ಷೇತ್ರಗಳಲ್ಲಿ ಸಂಚರಿಸಿ

ಜಗಧರೆಸುತೆ ಬಳಿಯು ಪಂಚಕೂಟ ನಗ ಪಂಪಾನಿಧಿಯಲ್ಲಿ—ತುಂಗಾತೀರದ ಹಂಪಿಯಲ್ಲಿ

ಪವನಮತವನನುಸರಿಸಿ—ಮಧ್ವಾಚಾರ್ಯರ ಸಿದ್ಧಾಂತವನ್ನು ಸ್ವೀಕರಿಸಿ

ನವನಾಮವನು ಧರಿಸಿ—ಹೊಸ ಹೆಸರಿಟ್ಟು ಕೊಂಡು

ದಿವಿಜಾದ್ಯರೊಳು ದೈವವೆಂದು ಪತಿಕರಿಸಿ—ಹರಿಯೇ ಎಲ್ಲ ದೇವತೆಗಳಿಗೂ ಒಡೆಯನೆಂಬುದನ್ನು ಕಾಣಿಸಿ

ಲಕ್ಷದಿಪ್ಪತ್ತೈದು ಸಾವಿರ—ಇಲ್ಲಿ ಬಂದಿರುವ ಒಕ್ಕಣೆಯಂತೆ 1,25,000 (ಪುಣ್ಯ ಕ್ಷೇತ್ರಾದಿ ಮಹಿಮೆ), 25,000 (ಗುರು ಮಧ್ವರಾಯರ ಮಹಿಮೆ ಇತ್ಯಾದಿ), 64,000 (ಸುಳಾದಿಗಳು), 36,000 (ವೃತ್ತನಾಮ), 60,000 (ಶ್ವೇತ ದ್ವೀಪಾನಂತಾಸನ ಇತ್ಯಾದಿ), 40,000 (ದಶಕಲ್ಯಾಣ ದಶಚರಿತೆ), 74,000 (ನಿಷ್ಠ ಅಹನ್ನೀಕ ಏಕಾದಶೀ ಇತ್ಯಾದಿ), ಒಟ್ಟು 4,25,000

ರಕ್ತಾಕ್ಷಿವತ್ಸರದ —ಪುರಂದರದಾಸರ ನಿರ್ಯಾಣ ತಿಥಿಯನ್ನು ಇಲ್ಲಿ ನಿರ್ದೇಶಿಸಿದ್ದಾರೆ ರಕ್ತಾಕ್ಷಿಸಂವತ್ಸರ, ಪುಷ್ಯಮಾಸ, ಕೃಷ್ಣಪಕ್ಷದ ಅಮಾವಾಸ್ಯೆ (ಇಂದು ಕ್ಷಯಯುಕ್ತ) ಭಾನುವಾರ (ಅರ್ಕವಾರ)



ಶಂಕರಾಭರಣ ಅಟ್ಟ

ತಂದೆ ಪುರಂದರದಾಸರ ಸ್ಮರಿಸುವೆ ಎನ್ನ
ಮಂದಮತಿ ಕಳೆದು ಹರಿಭಟನೆನಿಸುವ ಪ

ಗುರುವ್ಯಾಸರಾಜರ ಚರಣಾಬ್ಜ ಪಟ್ಚರಣ
ವಿರಕುತಿ ಭಕುತಿ ಜ್ಞಾನಾರ್ಣವನ
ವರ ಉಪನಿಷದ್ವಾರಿನಿಧಿಗೆ ತಿಮಿಂಗಿಲನಹನ
ಧರೆಯ ಕವಿಕುಲ ಶಿಖಾಮಣಿ ಎನಿಪನ ೧

ದಿನದಿನ ದ್ರವ್ಯಾರ್ಥಲಾಭದಲಿ ತುಷ್ಟನ
ಕನಕಲೋಷ್ಟ ಸಮಾನ ಈಕ್ಷಿಸುವನ
ಘನಸಿದ್ಧಿಗಳು ತಾವು ಬರಲೊಡಂಬಡದೆ ಹರಿ
ಗುಣಕೀರ್ತಿಯಲ್ಲಿ ಪರವಶದಲ್ಲಿಹನ ೨

ಭವಜಲ ಗೋಷ್ಪಾದಕ್ಕೆ ಸರಿದಾಟಿ ಕಾಮ ಕ್ರೋ
ಧವ ಮೆಟ್ಟಿ ಭಕ್ತಿಸುಧೆಯನುಂಡು ತೇಗಿ
ಭುವಿಯೊಳು ನಿಜಕೀರ್ತಿ ಹರಹಿ ಪವನಮತ
ದವರೆನಿಪ ದಾಸರಿಗೆ ತವರೂಪ ತೋರಿದವನ ೩

ಕವನೋಕ್ತಿ ಮಳೆಗರೆದು ಹರಿದಾಸ ಅ
ಪವರ್ಗಗಳಿಗೆ ವಿರಳಾನಂದವಿತ್ತರ್ಥಿಸುವರ
ನವಭಕುತಿ ಮನಗಂಡು ಸವೆಯದಾನಂದಪುರ ಪ
ಥವನು ತೋರಿಸಿದಂಥ ಬಹುಕೃಪಾಕರನ ೪

ಗೀತರಾಯಿ ಸುಳಾದ್ಯುಗಾಭೋಗ ಪದಪದ್ಯ
ವ್ರಾತ ಪ್ರಬಂಧ ರಚಿಸಿ ವಿರಲನ
ಪ್ರೀತಿಬಡಿಸಿ ಪ್ರತ್ಯಕ್ಷ ಕಂಡು ನಲಿವ ವೈಷ್ಣವಾಗ್ರ
ನಾಥ ಪ್ರಸನ್ನ ವೇಂಕಟಕೃಷ್ಣಪ್ರಿಯನ ೫

[ಈ ಕೃತಿಯನ್ನು ರಚಿಸಿದ ಪ್ರಸನ್ನವೇಂಕಟಕೃಷ್ಣ'ನೆಂಬ ಅಂಕಿತದ ಹರಿದಾಸರು ವಿಜಯದಾಸರ ಸಮಕಾಲಿಕರು , ಬಿಜಾಪುರ ಪ್ರಾಂತ್ಯದಲ್ಲಿದ್ದವರು ]

ಗುರುವ್ಯಾಸರಾಜರ ಚರಣಾಬ್ಜ ಷಟ್ಚರಣ—ವ್ಯಾಸರಾಯರೆಂಬ ಗುರುಗಳ ಅಡಿದಾವರೆಯಲ್ಲಿ ದುಂಬಿಯಂತೆ (ಷಟ್ಚರಣ) ಇದ್ದವರು ಪುರಂದರದಾಸರು

ವಿರಕುತಿ—ವಿರತಿಕ್ತಿ , ವೈರಾಗ್ಯ

ದಿನ ದಿನ ದ್ರವ್ಯಾರ್ಥಲಾಭದಲಿ ತುಷ್ಟನ—ದಿನದಿನವೂ ಮದುಕರ ವೃತ್ತಿಯನ್ನು ಹಿಡಿದು ತಾನಾಗಿ ಬಂದದ್ದರಲ್ಲಿ ತೃಪ್ತರಾಗಿದ್ದವರು , ಯದೃಚ್ಛಾಲಾಭ ಸಂತುಷ್ಟರು

ಕನಕಲೋಷ್ಟಸಮಾನ —ಬಂಗಾರವನ್ನೂ ಮಣ್ಣಿನ ಹೆಂಟೆಯನ್ನೂ ಸಮಾನವಾಗಿಯೇ ಕಾಣುವ ಉದಾಸೀನಮನೋವೃತ್ತಿಯುಳ್ಳವರು

ಘನಸಿದ್ಧಿಗಳು —ಅವರು ಕೈಗೊಂಡ ತಪಸ್ಸು, ಯೋಗ, ಸತ್ಕಾರ್ಯಗಳ ಫಲವಾಗಿ ಅನೇಕ ಸಿದ್ಧಿಗಳು ಸಹಜವಾಗಿಯೇ ಒದಗುತ್ತಿದ್ದುವು , ಆದರೆ ಈ ಸಿದ್ಧಿಗಳಿಂದ ಹರಿಭಕ್ತಿ ಮೊಟಕಾದೀತು ಎಂಬ ಭಯದಿಂದ ಅವನ್ನು ಹತ್ತಿರ ಸೇರಿಸದೆ ಎಚ್ಚರದಿಂದಿರುತ್ತಿದ್ದರು

ಭವಜಲಗೋಷ್ಪಾದಕ್ಕೆ—ಗೋಷ್ಪಾದವೆಂದರೆ ಕಾಡಿನಲ್ಲಿ ದನಕರುಗಳು ಓಡಾಡಲು ತಕ್ಕಂಥ ಕಿರುದಾರಿ , ಸಂಸಾರವೆಂಬ ಸಮುದ್ರವನ್ನು ಇಷ್ಟು ಕಿರಿದಾಗಿ ಮಾಡಿ ಅದನ್ನು ದಾಟಿದರು ಎಂದರ್ಥ

ಪವನಮತದವರಿಗೆ ತವರೂಪ—ಮಾಧ್ವಸಿದ್ಧಾಂತವನ್ನು ನಂಬಿದವರಿಗೆ ನಿನ್ನ ರೂಪ.

ನವಭಕುತಿ—ನವವಿಧಭಕ್ತಿ, 'ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ' ಇವು ಒಂಬತ್ತೂ ಒಂಬತ್ತು ಮೆಟ್ಟಲುಗಳು ಕಡೆಯದಾದ ಆತ್ಮನಿವೇದನದಲ್ಲಿ ಭಕ್ತನು ಸಂಸಾರಾವಸ್ಥೆಯಲ್ಲಿಯೂ ಮುಕ್ತಿಯಲ್ಲಿಯೂ ಹರಿಯೇ ತನ್ನ ನಿಯಾಮಕನೆಂದು ಅರಿತುಕೊಳ್ಳುತ್ತಾನೆ

ಸವೆಯದಾನಂದಪುರಪಥ—ಎಂದೆಂದಿಗೂ ಕ್ಷೀಣವಾಗದ ಆನಂದವೆಂದರೆ ಮುಕ್ತಿ ಅಥವಾ ವೈಕುಂಠಪುರ , ಅದಕ್ಕೆ ದಾರಿಯಾದ ಜ್ಞಾನಸಹಿತವಾದ ಭಕ್ತಿ

ಗೀತ–ರಾಯಿ–ಸುಳಾದ್ಯುಗಾಭೋಗ—ನಾಲ್ಕನೆಯ ಸಂಪುಟದ ಪ್ರಸ್ತಾವನೆ ನೋಡಿ.

ನಾದನಾಮಕ್ರಿಯ ಅಟ್ಟ

ದಾಸರಾಯಾ ಪುರಂದರದಾಸರಾಯಾ ಪ
ದಾಸರಾಯ ಪ್ರತಿವಾಸರದಲಿ ಶ್ರೀನಿ
ವಾಸನ್ನ ತೋರೊ ದಯಾಸಾಂದ್ರ ಪುರಂದರ ಅ

ವರದನಾಯಕ ಭೂಮಿಸುರನ ಮಡದಿಯ ಬ
ಸಿರಲಿ ಜನಿಸಿ ಬಂದು ಮೆರೆದೆ ಧಾರುಣಿಯೊಳು ೧

ಕುಲಿಶಧರಾಹ್ವಯ ಪೊಳಲೊಳು ಮಡದಿ ಮ
ಕ್ಕಳ ಕೂಡಿ ಸುಖದಿಂದ ಕೆಲವು ಕಾಲದಲಿದ್ಯೊ ೨

ಮನೆಧನಧಾನ್ಯ ವಾಹನ ವಸ್ತುಗಳೆಲ್ಲ
ತೃಣಕೆ ಬಗೆದು ಕೃಷ್ಣಾರ್ಪಣವೆಂದೆ ಬುಧರಿಗೆ ೩

ವ್ಯಾಸರಾಯರಲಿ ಭಾಸುರಮಂತ್ರೋಪ
ದೇಶವ ಕೊಂಡು ರಮೇಶನ ಒಲಿಸಿದ್ಯೊ ೪

ಪ್ರಾಕೃತಭಾಷೆಯಲಿ ಈ ಕೃತಿ ಪೇಳಿ ಅ
ಪ್ರಾಕೃತ ಹರಿಯಿಂದ ಸ್ವೀಕೃತ ನೀನಾದ್ಯೊ ೫

ತೀರ್ಥಕ್ಷೇತ್ರಂಗಳ ಮೂರ್ತಿಮಹಿಮೆಗಳ
ಕೀರ್ತಿಸಿ ಜಗದಿ ಕೃತಾರ್ಥನೆಂದೆನಿಸಿದೆ ೬

ಪಾತಕವನನಿಧಿ ಪೋತನೆನಿಪ
ಜಗನ್ನಾಥವಿಠಲನ್ನ ಸಂಪ್ರೀತಿಯ ಪಡೆದ್ಯೊ ೭

[ಜಗನ್ನಾಥದಾಸರು ವಿಜಯದಾಸರ ಪ್ರಶಿಷ್ಯರಲ್ಲಿ ಅಗ್ರಗಣ್ಯರು , ಗೋಪಾಲದಾಸ ರಿಂದ ದೀಕ್ಷೆಪಡೆದವರು ಇವರಿಂದಲೇ ಹರಿದಾಸ ಪಂಥ ಮತ್ತೆ ಊರ್ಜಿತವಾದದ್ದು ಇವರ 'ಹರಿಕಥಾಮೃತಸಾರ'ವು ದಾಸಕೂಟದಲ್ಲಿ ಪ್ರಮಾಣಭೂತವಾದದ್ದೆಂದು ಪ್ರಸಿದ್ಧವಾಗಿದೆ ಇವರ ಕಾಲ 1727–1809 ]

ಪ್ರತಿವಾಸರದಿ—ದಿನದಿನವೂ , ಎಡೆಬಿಡದೆ

ಭೂಮಿಸುರನ—ಬ್ರಾಹ್ಮಣನ

ಕುಲಿಶಧರಾಹ್ವಯ —ಕುಲಿಶವೆಂದರೆ ವಜ್ರ, ಕುಲಿಶಧರನೆಂದರೆ ಇಂದ್ರ ಇವನ ಹೆಸರನ್ನು (ಪರ್ಯಾಯವಾಗಿ ಪುರಂದರ ಎಂಬ ಹೆಸರನ್ನು) ಹೊತ್ತ ಊರು (ಪೊಳಲು), ಪುರಂದರಘಡ. ಇದು ಪುರಂದರದಾಸರ ಹುಟ್ಟೂರೆಂಬ ಪ್ರತೀತಿ ಅವರ ಕಾಲದಲ್ಲಿದ್ದಿತು

ಪ್ರಾಕೃತಭಾಷೆಯಲಿ—ಕನ್ನಡದಲ್ಲಿ.

ಅಪ್ರಾಕೃತಹರಿಯಿಂದ—ಪ್ರಕೃತಿ ತ್ರಿಗುಣಾತ್ಮಕವಾದದ್ದು , ಅದರ ನಂಟು ಎಂದೂ, ಎಷ್ಟೂ ಇರದ ಪರಮಪುರುಷ, ಹರಿ, ಅವನಿಂದ

ಪಾತಕವನನಿಧಿಪೋತ—ಪಾಪಗಳೆಂಬ (ಪಾತಕ) ಸಮುದ್ರವನ್ನು (ವನನಿಧಿ) ದಾಟುವ ದೋಣಿ (ಪೋತ) ಎಂದು ಪ್ರಸಿದ್ಧನಾದ



ನೀಲಾಂಬರಿ ಝಂಪೆ

ವ್ಯಾಸ ಮುನಿರಾಯರಾ ದಾಸರೊಳು ಪುರಂದರ
ದಾಸರ ಮಹಿಮೆ ವರ್ಣಿಸಲಾರೆನವ್ವಾ ಪ

ಮೂರು ಲೋಕದ ಅರಸು ಸಿರಿ ಭೂ ದುರ್ಗೆ ಸಹಿತ
ದಾರುಣಿಯ ಮೇಲೆ ಅವತರಿಸಿ ದಯಮಾಡಿ
ನಾರದರೆ ಇವರೆಂದು ಪುರಂದರದಾಸರಿಗೆ
ಕಾರುಣ್ಯದಿಂದ ಕಾಣಿಸಿಕೊಂಡನವ್ವಾ ೧

ಗಂಗೆ ಗೌತಮೆ ತುಂಗೆ ಮೊದಲಾದ ತೀರ್ಥಗಳು
ಶೃಂಗಾರವಾಗಿ ನಮ್ಮಂಗಳದೊಳಗೆ
ರಂಗವಲ್ಲಿ ಇಕ್ಕುತಲಿ ಮಂಗಳವ ಪಾಡುವುದ
ಕಂಗಳಿಂದಲಿ ಕಂಡೆ ತಂಗಿ ಕೇಳವ್ವ ೨

ಹರಿದಾಸರ ಉದರದಲಿ ನಾನು
ಗುರು ವ್ಯಾಸರಾಯರ ಚರಣಗಳ ಕಂಡೆ
ಪರಮ ಸಾರ್ಥಕವಾಯಿತಿದೀಗ ನರಜನ್ಮ
ಗುರು ಪುರಂದರವಿಠಲನಂತೆಯಿವರಿಂದ ೩

[ಇದು 'ಗುರುಪುರಂದರವಿಠಲ' ಎಂಬ ಅಂಕಿತವನ್ನು ಪಡೆದ ಹರಿದಾಸರೊಬ್ಬರ ರಚನೆ ಇವರು ಪುರಂದರದಾಸರ ಮಕ್ಕಳೇ ಎಂದೂ, ಮೊದಲಿಗೆ ಗುರುರಾಯ ನೆಂಬ ಹೆಸರಿನವರೆಂದೂ ವ್ಯಾಸರಾಯಸ್ವಾಮಿಗಳ ಬಳಿಯೇ ಹರಿದಾಸದೀಕ್ಷೆಯನ್ನು ಪಡೆದುಕೊಂಡರೆಂದೂ ಪ್ರತೀತಿ ಹಲವಾರು ಪದಗಳನ್ನೂ ಸುಳಾದಿಗಳನ್ನೂ ಇವರು ರಚಿಸಿದ್ದಾರೆ ಪುರಂದರದಾಸರ ನಿರ್ಯಾಣವನ್ನು ಉಲ್ಲೇಖಿಸಿರುವ ಪದವೂ ಇವರದ್ದೇ ಈ ಪದದಲ್ಲಿ ಪುರಂದರದಾಸರು ಸುರಮುನಿಯಾದ ನಾರದರ ಅವತಾರ ವೆಂಬ ಹೇಳಿಕೆಯಿದೆ ]

ಮೂರುಲೋಕದ ಅರಸು —ಭೂಲೋಕ, ಭುವರ್ಲೋಕ, ಸ್ವರ್ಲೋಕಗಳ ಒಡೆಯ, ನಾರಾಯಣ ಇವನ ನಿತ್ಯವಾಸಸ್ಥಳವಾದ ವೈಕುಂಠಪುರಿಯಲ್ಲಿ

ಶ್ರೀಭಾಗ, ಭೂಭಾಗ, ದುರ್ಗಾಭಾಗಗಳೆಂಬ ಮೂರು ಪ್ರದೇಶಗಳಿವೆಯೆಂದು ವೈಕುಂಠ ವರ್ಣನೆಯಲ್ಲಿದೆ ವೈಕುಂಠದ ಮೂರು ಅಂಗಗಳಾದ ಇವು ವಿಕುಂಠನ (ಎಂದರೆ ನಾರಾಯಣನ) ಮೂರು ಶಕ್ತಿಗಳೆಂದು ಸಂಕೇತ

ಧಾರುಣಿಯ ಮೇಲೆ—ಭೂಮಿಯ ಮೇಲೆ

ಗಂಗೆ ಗೌತಮಿ ತುಂಗೆ —ಗಂಗೆ, ಕಾವೇರಿ, ತುಂಗಾ ಮೊದಲಾದ ತೀರ್ಥಗಳೆಲ್ಲವೂ ಮುಂಜಾನೆ ಹರಿದಾಸರ ಮನೆಯಂಗಳದಲ್ಲಿ ಊಳಿಗಮಾಡುವುದನ್ನು ತಾವು ಕಂಡರೆಂದು ಹೇಳಿದ್ದಾರೆ ಹರಿದಾಸರ ಮನೆ ಅಷ್ಟು ಪವಿತ್ರವಾದುದು, ಭಗವಂತನ ಆವಾಸಸ್ಥಾನವೇ ಎಂದು ತಾತ್ಪರ್ಯ

ಹರಿದಾಸರ ಉದರದಲಿ —ತಾವು ಪುರಂದರದಾಸರ ಮಗನಾಗಿ ಹುಟ್ಟಿದುದನ್ನು ಸೂಚಿಸಿದ್ದಾರೆ

ಗುರು ವ್ಯಾಸರಾಯರ —ಪುರಂದರದಾಸರ ದೀಕ್ಷಾಗುರುಗಳಾದ ವ್ಯಾಸತೀರ್ಥರಿಂದಲೇ ತಮಗೂ ದೀಕ್ಷೆ ದೊರೆಯಿತೆಂದು ಸೂಚಿಸಿದ್ದಾರೆ ಇವರಿಂದ ತಮಗೆ ಹರಿಸರ್ವೋತ್ತಮತ್ವದ ಅರಿವು ಉಂಟಾಯಿತೆಂದೂ, ಹಾಗಾಗಿ ಜನ್ಮ ಸಾರ್ಥಕವಾಯಿತೆಂದೂ ಹೇಳಿದ್ದಾರೆ



ದುರಿತವ್ರಾತಮುಲೆಲ್ಲನು
ಬರಿಮಾರ್ಚೆಡಿ
ಹರಿಗುಣಮುಲು ಪಾಡುಚುನೆಪುಡನ್
ಪರವಶುಡೈ ವೆಲಯು ಪುರಂ–
ದರದಾಸುನಿ ಮಹಿಮಮುಲನು
ದಲಚೆದನು ಮದಿಲೊನ್

[ತ್ಯಾಗರಾಜಸ್ವಾಮಿಗಳು (1767–1847) ಕರ್ನಾಟಕ ಸಂಗೀತದ ಮಹಿಮಾ ಪುರುಷರು , ಭಕ್ತರು ವಾಗ್ಗೇಯಕಾರರು ಅವರ ತೆಲುಗು ಪ್ರಬಂಧಗಳಲ್ಲಿ ಒಂದಾದ 'ಪ್ರಹ್ಲಾದ ಭಕ್ತವಿಜಯ'ದ ಮೊದಲ ಅಂಕದಲ್ಲಿ ದೇವತಾಗುರು ಸ್ತುತಿ ಮಾಡುವ ಸಂದರ್ಭದಲ್ಲಿ ರಾಮ, ಗಣೇಶ, ಸರಸ್ವತಿಯರಾದನಂತರ ನಾರದ, ತುಳಸೀ ದಾಸ, ಪುರಂದರದಾಸ, ಭದ್ರಾಚಲ ರಾಮದಾಸ ಇವರನ್ನು ಸ್ಮರಿಸಿದ್ದಾರೆ ಪುರಂದರ ದಾಸರನ್ನು ಕುರಿತ ಅವರ ಸ್ತುತಿ (6) ಇದು ]

ಇದರ ಅರ್ಥ—"ಪಾಪಗಳ ರಾಶಿಯನ್ನೆಲ್ಲ ಹೋಗಲಾಡಿಸುವ ಹರಿಯ ಮಹಿಮೆಯನ್ನು ಎಂದೂ ಹಾಡುತ್ತ ಮೈಮರೆಯುವ ಪುರಂದರದಾಸರ ಹಿರಿಮೆಯನ್ನು ನನ್ನ ಮನದಲ್ಲಿ ನೆನೆದು ಸುಖಿಸುವೆನು "



೧೦

ಸುರಟಿ ಆದಿ

ಎತ್ತ ಪೋದನಮ್ಮ ವಿಪ್ರನ
ಎಲ್ಲಿ ಹುಡುಕಲಮ್ಮ ಪ

ಮುತ್ತಿನ ಮೂಗುತಿ ಮುತ್ತಿಲಿ ಬ್ರಾಹ್ಮಣ
ಇಕ್ಕೊ ಈಗಲೆಂದು ಮಾಯವಾದನು ಅ

ಪಂಢರಪುರವಂತೆ ಅಲ್ಲಿ
ಪಾಂಡುರಂಗನಂತೆ
ತಂಡತಂಡದಿ ಹರಿಕೀರ್ತನೆ ಮಾಡುತ
ಕಂದನ ಲಗ್ನಕೆ ಪೋಗಬೇಕೆನುತ ೧

ಅಂದಿನ ದಿನದಲ್ಲಿ ನಾರಿಯು
ಕಂಬಕ್ಕೆ ಕಟ್ಟಿರಲು
ಮಂದರೋದ್ಧರನ ಮೊರೆಯಿಟ್ಟು ಕೂಗಲು
ಬಂಧನ ಬಿಡಿಸಿ ಮುಕುತಿಯ ಕೊಟ್ಟನು ೨

ಪತ್ನಿಪತಿಯರ ಕೂಡಿ ಬಹಳ
ಅನ್ನದಾನವ ಮಾಡಿ
ಕನಕಾಭರಣವನೀಯಲು ಪತಿವ್ರತೆ ಪು
ರಂದರವಿಠಲನ ಪಾದ ಸೇರಿದಳು ೩

[ಈ ಪದಕ್ಕೆ ಹಿನ್ನೆಲೆ ಮುತ್ತಿನ ಮೂಗುತಿಯು ಕತೆಯೊಂದು ಪ್ರತೀತಿ ಈ ಕತೆಯನ್ನು ವಿಜಯದಾಸರ 'ಬೇಸರದೆ ಭಜಿಸಿರೋ' ಎಂಬ ಪದವೊಂದು ಮೊಟ್ಟಮೊದಲಿಗೆ ನಿರೂಪಿಸುತ್ತದೆ ನೋಡಿ ಪು 68 ನಾಯಕರ ಹೆಂಡತಿಯಿಂದ ಮುತ್ತಿನ ಮೂಗುತಿಯನ್ನು ದಾನವಾಗಿ ಪಡೆದುಕೊಂಡು, ನಾಯಕರ ಬಳಿಯೇ ಅದನ್ನು ಒತ್ತೆಯಾಗಿಡಲು ಬಂದು, ಮತ್ತೆ ಈಗಲೇ ಬರುವೆನೆಂದು ಹೋದ ಬ್ರಾಹ್ಮಣ ಎಷ್ಟು ಹೊತ್ತಾದರೂ ಹಿಂದಿರುಗಲಿಲ್ಲ ನಾಯಕರು ಸಂಶಯದಿಂದ ಮೂಗುತಿಯನ್ನು ಕಪಾಟದಲ್ಲಿ ಭದ್ರಪಡಿಸಿ, ಮನೆಗೆ ಬಂದು ಹೆಂಡತಿಯ ಮೂಗಿನಲ್ಲಿ ಮೂಗುತಿಯನ್ನು ಕಾಣದೆ ಆಕೆಯನ್ನು ದಂಡಿಸಲು, ಮತ್ತೆ ಮೂಗುತಿ ಮಾಯದಿಂದ ದೊರೆತದ್ದು ಇಲ್ಲಿ ಸೂಚಿತವಾಗಿರುವ ಪ್ರಸಂಗ ಆಶ್ಚರ್ಯದಿಂದ ನಾಯಕರು ಮಾಯದ ಬ್ರಾಹ್ಮಣನನ್ನು ಹುಡುಕಲು ಹೊರಟಾಗ ಹೊರಬಂದ ಹಾಡು ಇದು ಎಂದು ಸೂಚನೆ ಬ್ರಾಹ್ಮಣ ತಾನು ಪಂಢರಪುರದಿಂದ ಬಂದವನೆಂದು ಹೇಳಿಕೊಂಡನಾಗಿ, ಅವನು ದಿಟವಾಗಿ ಪಾಂಡುರಂಗ ವಿಠಲನೇ ಎಂದು ದಾಸರ ವಿಶ್ವಾಸ ]



ಪಂತುವರಾಳಿ ಆದಿ

ಆದದ್ದೆಲ್ಲ ಒಳಿತೇ ಆಯಿತು, ನಮ್ಮ ಪ

ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು ಅ

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ ೧

ಗೋಪಾಳ ಬುಟ್ಟಿ ಹಿಡಿಯುವುದಕ್ಕೆ
ಭೂಪತಿಯೆಂದು ಗರ್ವಿಸುತ್ತಿದ್ದೆ
ಆ ಪತ್ನೀಕುಲ ಸಾವಿರವಾಗಲಿ
ಗೋಪಾಳ ಬುಟ್ಟಿ ಹಿಡಿಸಿದಳೆಯ್ಯ ೨

ತುಳಸೀ ಮಾಲೆ ಹಾಕುವುದಕ್ಕೆ
ಅರಸನೆಂದು ತಿರುಗತಲಿದ್ದೆ
ಸರಸಿಜಾಕ್ಷ ಪುರಂದರವಿಠಲನು
ತುಳಸೀಮಾಲೆ ಹಾಕಿಸಿದನು ೩

[ಇದು ಬಹುಶಃ ಪುರಂದರದಾಸರ ಜೀವನಕ್ಕೆ ಸಂಬಂಧಿಸಿದ ಒಂದು ಪದ ಎಂಬ ಪ್ರತೀತಿಯಿದೆ ವ್ಯಕ್ತಿಯ ಆಂತರಿಕ ವಿಕಾಸಕ್ಕೆ ಪತ್ನಿ ಹೇಗೆ ಸಹಾಯಕಳಾಗಬಲ್ಲಳು ಎಂಬ ವಿವರಣೆ ಇಲ್ಲಿದೆ ಈ ಪದಕ್ಕೆ ಹಿನ್ನೆಲೆಯಾಗಿ 'ಮುತ್ತಿನ ಮೂಗುತಿ' ಎಂದು ಪ್ರಸಿದ್ಧವಾಗಿರುವ ಪುರಂದರದಾಸರ ಜೀವನದ ಬಗ್ಗೆ ಇರುವ ಐತಿಹ್ಯವೊಂದನ್ನು ನೆನಪಿಸಿಕೊಳ್ಳಬಹುದು ವಿವರಗಳಿಗೆ ನೋಡಿ ವಿಜಯದಾಸರ 'ಬೇಸರದೆ ಭಜಿಸಿರೋ" ಎಂಬ ಪದ, ಪು 68 ]

ಪುರಂದರದಾಸರ ಬದುಕಿನಲ್ಲಿ ಒಂದು ಮಹತ್ವದ ತಿರುವಿನ ಘಟನೆ ನಡೆದಿರಬೇಕು, ಪುರಂದರದಾಸರಿಗೆ ಮೊದಲಲ್ಲಿ ಅದು ಪಥ್ಯವಾಗದೆ ಇದ್ದರೂ ಪರಿಣಾಮದಲ್ಲಿ ಅದರಿಂದ ಹಿತವೇ ಆಯಿತು ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ ಅವರ ಪತ್ನಿಯ ಆಧ್ಯಾ

ತ್ರಿಕ ಪ್ರವೃತ್ತಿ ಇವರು ಹರಿದಾಸರಾಗಲು ಮೂಲಕಾರಣವೆಂದು ತೋರುತ್ತದೆ ಅವರ ಪೂರ್ವಜೀವನದ ರೀತಿಯು ಸೂಚನೆಗಳೂ ಈ ಪದದಲ್ಲಿ ಕಾಣಿಸಿಕೊಳ್ಳುತ್ತವೆ ಮೊದಲಿನ ಪುರಂದರರು ತುಂಬ ಶ್ರೀಮಂತರಾಗಿದ್ದು, ಅಧಿಕಾರದಲ್ಲಿ ಮೆರೆದು ಹರಿದಾಸರನ್ನು ಸ್ವಲ್ಪ ಹೀನಾಯದಿಂದಲೇ ನೋಡುತ್ತಿದ್ದರೆಂದು ಊಹಿಸಿಕೊಳ್ಳಬಹುದು ತಮ್ಮನ್ನು ಇಂಥದೊಂದು ಹೊಸ ತತ್ತ್ವಲೋಕಕ್ಕೆ ಎಳೆದೊಯ್ದ ಹೇಡತಿಯನ್ನು ಪುರಂದರ ದಾಸರು ಇಲ್ಲಿ ಕೃತಜ್ಞತೆಯಿಂದ ಸ್ಮರಿಸಿದ್ದಾರೆ

ಅಲ್ಲದೆ ಈ ಪದದಲ್ಲಿ ಆ ಕಾಲದ ಹರಿದಾಸರ ವೇಷಭೂಷಣಗಳ ಅವರ ಬಳಕೆಯ ಸಾಮಗ್ರಿಗಳ ಉಲ್ಲೇಖವಿದೆ ]

ದಂಡಿಗೆ ಬತ್ತ—ನಡೆದಾಡುವಾಗ ನುಡಿಸಲು ಅನುಕೂಲವಾಗುವಂತೆ ಹೆಗಲಿನಿಂದ ಇಳಿ ಬೀಳಬಹುದಾದ ಒಂದು ತಂತೀವಾದ್ಯ ಸಣ್ಣ ತಂಬೂರಿ (ವಿವರಗಳಿಗೆ ನಾಲ್ಕನೆಯ ಸಂಪುಟ ನೋಡಿ)

ಗೋಪಾಳ ಬುಟ್ಟಿ—ಹರಿದಾಸರು ಹೆಗಲಿಗೇರಿಸಿಕೊಂಡು, ಉಪಾದಾನದಿಂದ ಪಡೆಯು ತ್ತಿದ್ದ ದವಸಧಾನ್ಯಗಳನ್ನು ಹಾಕಿಕೊಳ್ಳುತ್ತಿದ್ದ ಬಿದಿರಿನ ಅಥವಾ ಯಾವುದೇ ಲೋಹದ ಬುಟ್ಟಿ , ಪಾತ್ರೆ

ತುಳಸೀಮಾಲೆ—ಭಾಗವತರಿಗೂ ಹರಿದಾಸರಿಗೂ ದೀಕ್ಷೆ ದೊರೆತಾಗ ಗುರುವಿನಿಂದ ಹಾಕಲ್ಪಡುವ ಕಂಠಮಾಲೆ, ಹರಿಸೇವೆಗಾಗಿ ಬದುಕು ಮುಡುಪು ಎಂಬ ಸಂಕೇತ



೧೨

ಧ್ರುವ

ವ್ಯಾಸರಾಯರ ಚರಣಕಮಲ ದರುಶನವೆಂಗ
ಯೇಸು ಜನ್ಮದ ಸುಕೃತ ಫಲದಿ ದೊರಕಿತೊ ಎನ್ನ
ಸಾಸಿರ ಕುಲಕೋಟಿಪಾವನ್ನವಾಯಿತು
ಶ್ರೀಶನ ಭಜಿಸುವದಧಿಕಾರಿ ನಾನಾದೆ
ದೋಷ ವಿರಹಿತನಾದ ಪುರಂದರ ವಿಠಲನ್ನ
ದಾಸರ ಕರುಣವು ಯೆನಮ್ಯಾಲ ಇರಲಾಗಿ ೧

ಮಟ್ಟ

ಗುರುವುಪದೇಶವಿಲ್ಲದಾ ಮಂತ್ರ
ಗುರುವುಪದೇಶವಿಲ್ಲದಾ ಭಕ್ತಿ
ಗುರುವುಪದೇಶವಿಲ್ಲದಾ ಕ್ರಿಯೆಗಳು
ಉರಗನ ಉಪವಾಸದಂತೆ ಕಾಣಿರೋ

ಗುರುವ್ಯಾಸರಾಯರ ಪರವೆಂದನಿಸಿ
ವರಮಹಾಮಂತ್ರವುಪದೇಶವಾಗಿ
ಪುರಂದರವಿಠಲ ಪರನೆಂದೆನಿಸಿ
ದುರಿತ ಭಯಗಳೆಲ್ಲ ಪರಿಹರಿಸಿದನಾಗಿ ೨

ರೂಪಕ

ಅಂಕಿತವಿಲ್ಲದ ದೇಹ ನಿಷಿದ್ಧ
ಅಂಕಿತವಿಲ್ಲದ ಕಾಯ ಶೋಭಿಸದು
ಅಂಕಿತವಿಲ್ಲದ ಇರಬಾರದೆಂದು ಎನಗ ಚ
ಕ್ರಾಂಕಿತವನು ಮಾಡಿಯೆನಗೆ
ಪಂಕಜನಾಭ ಪುರಂದರ ವಿಠಲನ್ನ
ಅಂಕಿತವೆನಗಿತ್ತ ಗುರುವ್ಯಾಸ ಮುನಿರಾಯ ೩

ಝಂಪೆ

ನ್ಯಾಯಾಮೃತ ತರ್ಕತಾಂಡವ ಚಂದ್ರಿಕೆ ಮೊದಲಾದ
ನ್ಯಾಯಗ್ರಂಥಗಳ ರಚಿಸಿ ತನ್ನಯ ಭಕ್ತರಿಗಿತ್ತೆ
ಮಾಯಾವಾದಿ ಮೊದಲಾದ ಇಪ್ಪತ್ತೊಂದು ಕುಭಾಷ್ಯದವರಾ

ಬಾಯು ಮಂಚ್ಚಿಸಿದೆ ಮಧ್ವರಾಯರ ಕರುಣದಿಂದ ಸಿ
ರಿಯರಸ ಪುರಂದರ ವಿಠಲನ್ನ ಭಕ್ತರೊಳು
ನಾಯಕನೆನಿಸಿಕೊಂಡೆ ರಾಯ ಗುರುವ್ಯಾಸಮುನಿಯೆ ೪

ತ್ರಿವಿಡೆ

ಶೇಷಾವೇಷ ಪ್ರಹ್ಲಾದನವತಾರನೆನಿಸಿದೆ
ವ್ಯಾಸರಾಯರೆಂಬೊ ಪೆಸರು ನೀನಾಂತೆ
ದೇಶಾದಿಪಗೆ ಬಂದ ಕುಹುಯೋಗವನು ನೂಕಿ ನೀ ಸಿಂ
ಹಾಸನವೇರಿ ಮೆರೆದೆ ಜಗವರಿಯೆ
ವ್ಯಾಸಾಬ್ಧಿಯನೆ ಕಟ್ಟಿಸಿ ದೇಶದಾವೊಳಗೆಲ್ಲ
ಭೂಸುರ ಕೀರ್ತಿಯನು ಪಡೆದೆ ಗುರುರಾಯಾ
ವಾಸುದೇವ ಪುರಂದರ ವಿಠಲನ್ನ ದಾಸರೊಳು ಹೆಗ್ಗಳಯೆನಿಸಿಕೊಂಡೆ ೫

ಅಟ್ಟ

ಶ್ರೀನಾರಾಯಣ ಯೋಗಿಯಾದ ಶ್ರೀಪಾದರಾಯರೊಳು
ವಿಹಿತವಾದ ವಿದ್ಯಾಭ್ಯಾಸವ ಮಾಡಿದೆ
ನೀನು ಧರೆಯೊಳು ವಿಜಯಿಾಂದ್ರವಾದಿರಾಜರೆಂಬೊ
ಪರಮಶಿಷ್ಯರ ಪಡೆದು ಮೆರೆದೆ ಕೀರ್ತಿಯ
ಯೆಲ್ಲ ಸುರೇಂದ್ರ ಪುತ್ರಭಿಕ್ಷವಬೇಡಿ ವಿಜಯಿಾಂದ್ರನ
ಕರುಣಿಸಿದವನನುದ್ಧರಿಸಿದ ಕಾರಣ
ಗುರುವ್ಯಾಸರಾಯರು ಪರಮಗುರುಗಳು
ಪುರಂದರ ವಿಠಲನೆ ಪರದೈವ ಕಾಣಿರೊ ೬

ಆದಿ

ಮಾನಸಪೂಜೆಯು ಮಾಡಿ
ದಾನವಾಂತಕ ರಂಗನ್ನ ಮೆಚ್ಚಿ
ತಾನೆ ಬಂದು ಗೋಪಾಲಕೃಷ್ಣನ
ಯೇನೆಂದು ಧ್ಯಾನಿಪೆನೊ
ಯೇನೆಂದು ಪೇಳುವೆ ನಿಮ್ಮ ಮಹಿಮೆಯ
ಜ್ಞಾನಿಗಳರಸ ವ್ಯಾಸ ಮುನಿರಾಯಾ
ಹೀನ ಜನರು ನಿನ್ನ ಮಾನವನೆಂದು
ನಾನಾ ನರಕಕೆ ಉರುಳುವರು

ಶ್ರೀನಿವಾಸ ಪುರಂದರ ವಿಠಲನು
ಆನಂದದಿಂದಲಿ ನಿನ್ನ ಮುಂದೆ
ಗಾನವ ಮಾಡುತ್ತ ಆಡುತ್ತಲಿಪ್ಪನು
ಯೇನು ಮಹಿಮೆಯೋ ದಾವ ಬಲ್ಲನೊ ೭

ಏಕ

ಈಸು ಮುನಿಗಳಿದ್ದೇನು ಮಾಡಿದರು ನಮ್ಮ
ವ್ಯಾಸಮುನಿ ಮಧ್ವಮತವನುದ್ಧರಿಸಿ
ಕಾಶಿಗದಾಧರ ಮಿಶ್ರನ ಸೋಲಿಸಿ
ದಾಸನ ಮಾಡಿಕೊಂಡೆ ಧಾರುಣಿಯೊಳಗೆ
ಕಾಶಿಮಿಶ್ರ ಪಕ್ಷಧರ ವಾಸುದೇವಾ
ವಾಲಿಲೇಯ ನಾರಸಿಂಹ ಯೋಗಿ ಲಿಂಗಾ
ಮಿಶ್ರನೇ ಮೊದಲಾದ ವಿದ್ವಾಂಸರು
ನೂರೆಂಟು ಜಯ ಜಯ ಪತ್ರಿಕೆಯನ್ನು
ವಾಸುದೇವ ಗೋಪಾಲಕೃಷ್ಣನಿಗೆ
ಭೂಷಣವ ಮಾಡಿ ಹಾರಿಸಿದೆ
ಶ್ರೀಶಾ ಪುರಂದರ ವಿಟ್ಠಲನೆ
ಈಶಯೆಂದಾ ಬ್ರಹ್ಮಾದಿಗಳಿಗೆ
ಈಶನೆಂದು ಡಂಗುರ ಹೊಯ್ಸಿ ಮೆರೆದೆ ಜಗದೊಳಗೆ ೮

[ಇದೊಂದು ಸುಳಾದಿ 'ವ್ಯಾಸರಾಯರ ಸುಳಾದಿ'ಯೆಂದೇ ಪ್ರಸಿದ್ಧವಾಗಿದೆ ಇದರಲ್ಲಿ ತಮ್ಮ ದೀಕ್ಷಾಗುರುಗಳಾದ ವ್ಯಾಸತೀರ್ಥರ ಸ್ಮರಣೆಯಿದೆ 'ಸುಳಾದಿ' ಎಂಬ ಶಬ್ದದ ವಿವರಣೆಗೆ ನಾಲ್ಕನೇ ಸಂಪುಟ ನೋಡಿ ]

ಯೇಸು—ಎಷ್ಟು, ಗುರುಕೃಪೆ ಒದಗುವುದು ಹಲವಾರು ಜನ್ಮಗಳಲ್ಲಿ ಗಳಿಸಿದ ಪುಣ್ಯದ ಫಲವಾಗಿ ಎಂದು ನಂಬಿಕೆ

ಶ್ರೀಶನ ಬಜಿಸುವುದಕೆ ಅಧಿಕಾರಿ —ಗುರುವಿನ ಮಂತ್ರೋಪದೇಶವಿಲ್ಲದೆ ಭಕ್ತಿಗೆ ಸರಿಯಾದ ದಾರಿ ಕಾಣಿಸುವುದಿಲ್ಲ ಗುರುಕಾರುಣ್ಯವಿಲ್ಲದೆ ಹರಿಯ ಪ್ರಸಾದವಿರದೆಂದು ಭಾಗವತ ಸಂಪ್ರದಾಯದ ಶ್ರದ್ಧೆ ಗುರುವಿನಿಂದ ಚಕ್ರಾಂಕನ, ಮೂಲ

ಮಂತ್ರೋಪದೇಶಗಳು ದೊರತದ್ದರಿಂದ ಅಧಿಕಾರ ಒದಗುತ್ತದೆ ಪುರಂದರ ದಾಸರ 'ಗುರುವಿಗೆ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ' ಎನ್ನುವ ಪದವನ್ನು ನೋಡಿ

ಗುರು ಉಪದೇಶವಿಲ್ಲದಾ ಮಂತ್ರ—ಮಂತ್ರವೆಂದರೆ ಬರಿಯ ಶಬ್ದವಲ್ಲ, ಅದರಲ್ಲಿ ಆಧ್ಯಾತ್ಮಿಕ ಶಕ್ತಿ ಅಡಗಿರುತ್ತದೆ ಮಂತ್ರವನ್ನು ಉಪದೇಶ ಮಾಡು ವಾಗ ಗುರುವು ಈ ಶಕ್ತಿಯನ್ನೂ ಶಿಷ್ಯನಿಗ ಒದಗಿಸುತ್ತಾನೆ ಇದನ್ನೇ ದೀಕ್ಷೆ ಯೆಂದು ಕರೆಯುವುದು

ಉರಗನ ಉಪವಾಸದಂತೆ—ಹಾವು ಒಮ್ಮೆ ಆಹಾರ ದೊರಕಿತೆಂದರೆ ಬಹುಕಾಲ ಉಪ ವಾಸವಿರುತ್ತದೆ, ಗಾಳಿಯನ್ನೇ ಕುಡಿದು ಜೀವಿಸುವುದೆಂದು ಪ್ರತೀತಿ ಆದರೆ ಅದರ ನಂಜೇನು ಕಡಮೆಯಾಗುವುದಿಲ್ಲ, ಹಿಂಸಾಪ್ರವೃತ್ತಿಯೂ ಹೋಗು ವುದಿಲ್ಲ ಉಪವಾಸದಿಂದ ಅದರ ಸಾತ್ತ್ವಿಕತೆ ಹೆಚ್ಚುವುದಿಲ್ಲ ಹಾವಿಗೆ 'ಎಲರುಣಿ' ಎಂಬ ಹೆಸರೇ ಇದೆ ಅಂದರೆ ಗಾಳಿಯೇ ಅದರ ಆಹಾರವಾದ್ದ ರಿಂದ ವಾಸ್ತವವಾಗಿ ಅದು ಉಪವಾಸ ಮಾಡಿದಂತಾಗಲಿಲ್ಲ

ಅಂಕಿತವಿಲ್ಲದ ದೇಹ —ವೈಷ್ಣವರಲ್ಲಿ ತಪ್ತಮುದ್ರಾಂಕನವೆಂಬ ಸಂಸ್ಕಾರವಿದೆ ದೀಕ್ಷಾ ಕಾಲದಲ್ಲಿ ಗುರುವು ವಿಷ್ಣುವಿನ ಆಯುಧವಿಶೇಷವೂ ಪ್ರತೀಕವೂ ಆದ ಚಕ್ರ ವನ್ನು ಮುದ್ರೆಯಾಗಿ ಬಳಸಿ, ಅದನ್ನು ಬೆಂಕಿಯಲ್ಲಿ ಕಾಸಿ ದೇಹದಲ್ಲಿ ಹಣೆ, ಭುಜ, ಉದರಗಳ ಮೇಲೆ ಮಂತ್ರಪೂರ್ವಕವಾಗಿ ಒತ್ತುತ್ತಾನೆ ಅದರಿಂದ ದೇಹ ಪವಿತ್ರವಾಯಿತೆಂದೂ, ಅಧ್ಯಾತ್ಮಸಾಧನೆಗೆ ಅವಕಾಶ ಒದಗಿತೆಂದೂ ಭಾವನೆ ಇದನ್ನೇ 'ಚಕ್ರಾಂಕನ'ವೆಂದೂ ಕರೆಯುತ್ತಾರೆ

ಹರಿದಾಸ ದೀಕ್ಷೆಯಲ್ಲಿ ಮತ್ತೊಂದು ವಿವರವೂ ಸೇರುತ್ತದೆ ಹರಿದಾಸ ನಾದವನು ಎಂದೂ ಹರಿಸಂಕೀರ್ತನೆ ಮಾಡುತ್ತಲೇ ಇರಬೇಕಾದುದರಿಂದ, ತಾನೇ ರಚಿಸುವ ಕವಿತೆಗಳಿಗೆ ನಿರ್ದಿಷ್ಟವಾದ ಒಂದು ಅಂಕಿತವನ್ನೂ ಗುರುವಿ ನಿಂದ ಪಡೆದುಕೊಳ್ಳುತ್ತಾನೆ ಇದು 'ಕಾವ್ಯಾಂಕಿತ', 'ಪುರಂದರವಿಠಲ' ನೆಂಬುದು ದಾಸರಿಗೆ ಗುರುಗಳಿಂದ ದೊರೆತದ್ದು ದೀಕ್ಷೆಯ ಸಂದರ್ಭದಲ್ಲಿ

ನ್ಯಾಯಾಮೃತ —ವ್ಯಾಸತೀರ್ಥರು ಸಂಸ್ಕೃತದಲ್ಲಿ ರಚಿಸಿದ ಶಾಸ್ತ್ರಗ್ರಂಥಗಳಲ್ಲಿ ಮೂರನ್ನು ಇಲ್ಲಿ ಹೆಸರಿಸಿದ್ದಾರೆ 'ನ್ಯಾಯಾಮೃತ'ವೆನ್ನುವುದು ಅದ್ವೈತ ಮತಖಂಡನರೂಪವಾದ ನಾಲ್ಕು ಪರಿಚ್ಛೇದಗಳುಳ್ಳ ಗ್ರಂಥ 'ತರ್ಕತಾಂಡವ'ವು ನ್ಯಾಯವೈಶೇಷಿಕ ಮತಗಳ ಖಂಡನೆಗಾಗಿ ಬರೆದ ಮೂರು ಪರಿಚ್ಛೇದಗಳ ಗ್ರಂಥ ಇದಕ್ಕೆ 'ಗ್ರಂಥಾಧಿರಾಜ'ವೆಂಬ ವರ್ಣನೆ ಮಾಧ್ವ ಪಂಡಿತರಲ್ಲಿ ಬಳಕೆಯಲ್ಲಿದೆ 'ಚಂದ್ರಿಕೆ'ಯ ಪೂರಾ ಹೆಸರು 'ತತ್ತ್ವಪ್ರಕಾಶಿಕಾ ತಾತ್ಪರ್ಯಚಂದ್ರಿಕಾ', ಇದು ಜಯತೀರ್ಥರ 'ತತ್ತ್ವಪ್ರಕಾಶಿಕಾ' ಎಂಬ ಬ್ರಹ್ಮಸೂತ್ರಮಾಧ್ವಭಾಷ್ಯ

ಟೀಕಾಗ್ರಂಥಕ್ಕೆ ಟಿಪ್ಪಣಿರೂಪವಾಗಿದೆ ಈ ಗ್ರಂಥದ ಹಿರಿಮೆಯಿಂದ ವ್ಯಾಸ ತೀರ್ಥರನ್ನು 'ಚಂದ್ರಿಕಾಚಾರ್ಯ'ರೆಂದೂ ಕರೆಯುವುದಿದೆ ಈ ಮೂರು ಗ್ರಂಥಗಳನ್ನು 'ವ್ಯಾಸತ್ರಯ' ಎಂದು ಒಟ್ಟಾಗಿ ಕರೆಯುವ ವಾಡಿಕೆಯಿದೆ ಅವರ ಶಿಷ್ಯರಾದ ವಿಜಯೀಂದ್ರರು ಇವಕ್ಕೆ ಕ್ರಮವಾಗಿ 'ಲಘು ಆಮೋದ', 'ಯುಕ್ತಿರತ್ನಾಕರ', 'ನ್ಯಾಯಮೌಕ್ತಿಕಮಾಲಾ' ಎಂಬ ಟೀಕಾಗ್ರಂಥಗಳನ್ನು ರಚಿಸಿದ್ದಾರೆ

'ನ್ಯಾಯಗ್ರಂಥಗಳ ರಚಿಸಿ'—ಈ ಗ್ರಂಥಗಳು ಬ್ರಹ್ಮಸೂತ್ರದಲ್ಲಿ ಬರುವ ಪ್ರಮೇಯಗಳನ್ನು ಕುರಿತು, ಪ್ರತಿವಾದಿಗಳ ಖಂಡನೆಗಾಗಿ ಸಿದ್ಧವಾದುದರಿಂದ 'ನ್ಯಾಯಗ್ರಂಥಗಳು' ಬಾದರಾಯಣರ ಬ್ರಹ್ಮಸೂತ್ರಕ್ಕೆ 'ನ್ಯಾಯಪ್ರಸ್ಥಾನ' ವೆಂದು ಹೆಸರಿದೆ , ನ್ಯಾಯದರ್ಶನದಲ್ಲಿ ವಾದ–ವಿವಾದಗಳ ಪ್ರಕ್ರಿಯೆ ಬಹು ಮಟ್ಟಿಗೆ ಬರುತ್ತದೆ

ಮಾಯಾವಾದಿ ಮೊದಲಾದ—ಮಧ್ವಾಚಾರ್ಯರಿಗೆ ಮೊದಲು ಬಾದರಾಯಣರ ಬ್ರಹ್ಮಸೂತ್ರಗಳಿಗೆ ಇಪ್ಪತ್ತೊಂದು ಭಾಷ್ಯಗಳಿದ್ದುವೆಂದೂ, ಇವನ್ನೆಲ್ಲ ನಿರಾ ಕರಿಸಿ ಮಧ್ವಾಚಾರ್ಯರ ಭಾಷ್ಯ ಸಿದ್ಧವಾಯಿತೆಂದೂ ಪ್ರತೀತಿ ಈ ಇಪ್ಪ ತ್ತೊಂದು ಭಾಷ್ಯಗಳನ್ನು ಬರೆದವರು ಭಾರತೀವಿಜಯ, ಸಚ್ಚಿದಾನಂದ, ಬ್ರಹ್ಮ ಘೋಷ, ಶತಾನಂದ, ಉದ್ಧತ, ವಿಜಯ, ರುದ್ರಭಟ್ಟ, ವಾಮನ ಯಾದವ, ಪ್ರಕಾಶ, ರಾಮಾನುಜ, ಭರ್ತೃಪ್ರಪಂಚ, ದ್ರವಿಡ, ಬ್ರಹ್ಮದತ್ತ, ಭಾಸ್ಕರ, ಪಿಶಾಚ, ವೃತ್ತಿಕಾರ, ವಿಜಯಭಟ್ಟ, ವಿಷ್ಣುಕ್ರಾಂತ, ವಾದೀಂದ್ರ, ಮಾಧವ ದಾಸ, ಶಂಕರ ಎಂದು ಪ್ರತೀತಿ ಶಂಕರಾಚಾರ್ಯರ ಸಿದ್ಧಾಂತವು ಮಾಯಾ ವಾದವೆಂದು ಮಾಧ್ವಸಂಪ್ರದಾಯದ ಎಣಿಕೆ

ಶೇಷಾವೇಶ ಪ್ರಹ್ಲಾದನವತಾರ—ದೇವತಾತಾರತಮ್ಯದಲ್ಲಿ ಮೂರನೆಯ ಕಕ್ಷೆಯಲ್ಲಿ ರುವ ಶೇಷನ ಅಂಶಾವತಾರವೇ ಹಿರಣ್ಯಕಶಿಪುವಿನ ಮಗನಾಗಿ ಹರಿಭಕ್ತನಾದ ಪ್ರಹ್ಲಾದನೆಂದೂ, ದೈತ್ಯವಂಶಜನಾದರೂ ಸತ್ತ್ವಪ್ರಧಾನವಾದ ಚೇತನವುಳ್ಳ ಈ ಪ್ರಹ್ಲಾದನೇ ಮುಂದೆ ವ್ಯಾಸತೀರ್ಥರಾಗಿ ಜನ್ಮವೆತ್ತಿದನೆಂದೂ ನಂಬಿಕೆ

ದೇಶಾಧಿಪತಿಗೆ ಬಂದ ಕುಹುಯೋಗ —ವಿಜಯನಗರ ಸಾಮ್ರಾಜ್ಯದ ಅರಸನಾಗಿದ್ದ ಕೃಷ್ಣದೇವರಾಯ ಮಹಾರಾಯನು ಆಳಿದ್ದು 1509 ರಿಂದ 1530ರವರೆಗೆ ಆ ನಡುವೆ 1521ರಲ್ಲಿ ಕುಹು ಯೋಗವು ಒದಗಿ ಆಗ ಅವನು ಸಿಂಹಾಸನದ ಮೇಲಿದ್ದರೆ ಅವನಿಗೆ ಮಾರಕವೆಂದು ತಿಳಿದಾಗ, ವ್ಯಾಸತೀರ್ಥರು ಆ ಯೋಗದ ಆದ್ಯಂತಕಾಲ ಸಿಂಹಾಸನಾರೋಹಣಮಾಡಿ, ಅವನ ಆಪತ್ತನ್ನು ಪರಿಹರಿಸಿದ ರೆಂದು ಕತೆ 'ಕುಹೂ' ಎಂದರೆ ಅಮಾವಾಸ್ಯೆ, ಚಂದ್ರನು ಏನೇನೂ ಕಾಣ ದಿರುವ ಕಾಲ ('ನಷ್ಟೇಂದು ಕಲಾಮಾವಾಸ್ಯಾ') , ಚಂದ್ರನ ಕಲೆ ಕೊಂಚ

ವಾದರೂ ಕಣ್ಣಿಗೆ ಬಿದ್ದರೆ ಅದು 'ಸಿನೀವಾಲೀ' ಎನಿಸಿಕೊಳ್ಳುತ್ತದೆ ('ದೃಷ್ಟ ಚಂದ್ರಾ ಸಿನೀವಾಲೀ ನಷ್ಟಚಂದ್ರಾ ಕುಹೂರ್ಮತಾ') ಜ್ಯೋತಿಃಶಾಸ್ತ್ರದಲ್ಲಿ ಇದೊಂದು ಗ್ರಹಣಕಾಲವೆಂದು ಹೇಳಿದೆ ರಾಹು, ಸೂರ್ಯ, ಶನಿ, ಮಂಗಳ ಈ ನಾಲ್ಕು ಗ್ರಹಗಳು ನೀಚರಾಗಿ ಅಮಾವಾಸ್ಯೆಯ ಒಂದು ಕಾಲದಲ್ಲಿ ಮಕರ ರಾಶಿಯಲ್ಲಿ ಕೂಡಿಕೊಳ್ಳುವುವೆಂದೂ, ಆಗ ರಾಜನಿಗೆ ಸಾವು ತಪ್ಪಿದ್ದಲ್ಲವೆಂದೂ ಜ್ಯೋತಿಃಸಾರ'ವೆಂಬ ಗ್ರಂಥ ತಿಳಿಸುತ್ತದೆ ಈ ಪ್ರಸಂಗವನ್ನು ಸೋಮನಾಥ ಕವಿಯ 'ವ್ಯಾಸಯೋಗಿ ಚರಿತೆ'ಯಲ್ಲೂ ಕಾಣುತ್ತೇವೆ ಆದರೆ ಇತಿಹಾಸ ದಲ್ಲೆಲ್ಲೂ ಇದರ ಉಲ್ಲೇಖವನ್ನು ಕಾಣಲಾರೆವು

ವ್ಯಾಸಾಬ್ಧಿಯನೆ —ವ್ಯಾಸತೀರ್ಥರು ತಮಗೆ ಕೃಷ್ಣದೇವರಾಯನು ಏಕಭೋಗ್ಯ ದತ್ತಿಯಾಗಿ ಕೊಟ್ಟಿದ್ದ ಬೆಟ್ಟಕೊಂಡ ಎಂಬ ಸರ್ವಮಾನ್ಯ ಗ್ರಾಮದಲ್ಲಿ ಕೆರೆ ಯೊಂದನ್ನು ತೋಡಿಸಿದರು , ಅದಕ್ಕೆ ವ್ಯಾಸಸಮುದ್ರ (ಅಥವಾ ವ್ಯಾಸಾಬ್ಧಿ, ವ್ಯಾಸನಕೆರೆ) ಎಂದೇ ಹೆಸರಾಯಿತು ಇದರ ಉಲ್ಲೇಖ ಶಾಸನದಲ್ಲಿಯೂ ದೊರೆಯುತ್ತದೆ ಈಗ ಇದು ಆಂಧ್ರಪ್ರದೇಶದ ಮದನಪಲ್ಲಿಯ ನೆರೆಯಲ್ಲಿದೆ

ಶ್ರೀನಾರಾಯಣ ಯೋಗಿಯಾದ ಶ್ರೀಪಾದರಾಯರೊಳು —ವ್ಯಾಸತೀರ್ಥರ ವಿದ್ಯಾ ಗುರುಗಳಾದ ಶ್ರೀಪಾದರಾಜರ ದಿಟವಾದ ಹೆಸರು ಲಕ್ಷ್ಮೀನಾರಾಯಣತೀರ್ಥ ರೆಂದು, ತಿರುಪತಿಯಲ್ಲಿ ಅವರನ್ನು ಕಂಡ ಉತ್ತರಾದಿಮಠದ ರಘುನಾಥತೀರ್ಥರು "ನಾವೆಲ್ಲ ಶ್ರೀಪಾದರಾದರೆ ತಾವು ಶ್ರೀಪಾದರಾಜರು" ಎಂದು ಹೇಳಿದ ಮೇಲೆ ಆ ಹೆಸರೇ ಅವರಿಗೆ ಉಳಿಯಿತು ಮಧ್ವಾಚಾರ್ಯರ ಸಾಕ್ಷಾತ್ ಶಿಷ್ಯರಾದ ಪದ್ಮನಾಭತೀರ್ಥರ ಪರಂಪರೆಯಲ್ಲಿ ಬಂದ ಇವರು ಪಾಂಡಿತ್ಯದಲ್ಲಿ ಆದಿಶೇಷ ನಿಗೆ ಸಮಾನರೆಂದು ಪ್ರಸಿದ್ಧರಾದರು ಚನ್ನಪಟ್ಟಣದ ಬಳಿ ಅಬ್ಬೂರಿನಲ್ಲಿ ಬ್ರಹ್ಮಣ್ಯತೀರ್ಥರಿಂದ ಸಂನ್ಯಾಸಾಶ್ರಮವನ್ನು ಪಡೆದುಕೊಂಡ ವ್ಯಾಸತೀರ್ಥರು ಮುಳುಬಾಗಿಲಿನಲ್ಲಿ ಶ್ರೀಪಾದರಾಜರ ಬಳಿ ಹಲವು ವರ್ಷಗಳು ವಿದ್ಯಾಭ್ಯಾಸ ಮಾಡಿದರು ಶ್ರೀಪಾದರಾಜರು 'ನ್ಯಾಯಸುಧಾವಾಗ್ವಜ್ರ'ವೆಂಬ ವಾದಗ್ರಂಥ ವನ್ನು ರಚಿಸಿದರೆಂದು ಪ್ರತೀತಿಯಿದೆ, ಅವರು ಹಲವಾರು ಸೊಗಸಾದ ದೇವರ ನಾಮಗಳನ್ನೂ ರಚಿಸಿದ್ದಾರೆ , ಅವರ ಅಂಕಿತ 'ರಂಗವಿಠಲ'ನೆಂದು ಹರಿದಾಸ ಪಂಥವನ್ನು ಪ್ರೋತ್ಸಾಹಿಸಿದ ಮಠಾಧಿಪತಿಗಳಲ್ಲಿ ಇವರೇ ಮೊದಲಿಗರು ಅವರ ಆಶ್ರಮಕಾಲ 1422–1480

ವಿಜಯೀಂದ್ರ–ವಾದಿರಾಜರೆಂಬೊ —ವ್ಯಾಸತೀರ್ಥರ ಶಿಷ್ಯರಲ್ಲಿ ಹಲವು ಯತಿಗಳೂ ಮಠಾಧಿಪತಿಗಳೂ ಇದ್ದರು ಇವರಲ್ಲಿ ಸುಪ್ರಸಿದ್ಧ ರಾಘವೇಂದ್ರಸ್ವಾಮಿಗಳ ಪರಮಗುರುಗಳಾದ ವಿಜಯೀಂದ್ರತೀರ್ಥರು (1514–1565) ಮತ್ತು ಉಡುಪಿ ಸೋದೆಮಠದ ವಾದಿರಾಜಸ್ವಾಮಿಗಳೂ (ಬೃಂದಾವನ ಪ್ರವೇಶ

1480–1600) ಸೇರಿದ್ದರು ಇಬ್ಬರೂ ಸಂಸ್ಕೃತದಲ್ಲಿ ಹತ್ತಾರು ಗ್ರಂಥಗಳನ್ನು ರಚಿಸಿದ್ದಾರೆ ವಿಜಯೀಂದ್ರತೀರ್ಥರ ನ್ಯಾಯದೀಪಿಕಾ, ಬ್ರಹ್ಮಸೂತ್ರಾರ್ಥಸಂಗ್ರಹ, ಕಂಟಕೋದ್ಧಾರ, ಭೇದವಿದ್ಯಾವಿಲಾಸ, ಚಕ್ರಮೀಮಾಂಸ ಇವೂ ವಾದಿರಾಜಸ್ವಾಮಿಗಳ ಗುರ್ವರ್ಥದೀಪಿಕಾ, ಲಾಕ್ಷಾಭರಣ, ಯುಕ್ತಿಮಲ್ಲಿಕಾ, ತೀರ್ಥಪ್ರಬಂಧ, ಸರಸಭಾರತೀವಿಲಾಸ, ರುಕ್ಮಿಣೀಶವಿಜಯ ಇವೂ ಪ್ರಸಿದ್ಧವಾಗಿವೆ ವಿಜಯೀಂದ್ರತೀರ್ಥರು ಮಾಡಿರುವ ಕನ್ನಡ ದೇವರನಾಮಗಳೂ ಕೆಲವು ದೊರೆತಿವೆ ಇವರ ಅಂಕಿತ 'ವಿಜಯೀಂದ್ರರಾಮ' ವಾದಿರಾಜರಂತೂ ಅನೇಕ ಪದಗಳನ್ನೂ ಸುಳಾದಿಗಳನ್ನೂ ರಚಿಸಿ ದಾಸಸಾಹಿತ್ಯದ ಸಂಪತ್ತನ್ನು ಹಿಗ್ಗಿಸಿದ್ದಾರೆ ಬಿಡಿರಚನೆಗಳಲ್ಲದೆ ಇವರ 'ಲಕ್ಷ್ಮೀ ಶೋಭಾನೆ' (ಸಾಂಗತ್ಯ ಪದ್ಧತಿಯಲ್ಲಿ ನೂರ ಹದಿಮೂರು ಪದಗಳು), 'ವೈಕುಂಠವರ್ಣನೆ' (ನಾಲ್ಕು ಸಂಧಿಗಳ ಕನ್ನಡ ಕಾವ್ಯ) ಇವು ಮುಖ್ಯವಾದವು ಇವರ ಕಾವ್ಯಾಂಕಿತ 'ಹಯವದನ' ಎಂದು

ಸುರೇಂದ್ರ ಪುತ್ರಭಿಕ್ಷವ ಬೇಡಿ —ಸುರೇಂದ್ರತೀರ್ಥರು ಈಗ ರಾಘವೇಂದ್ರಸ್ವಾಮಿಗಳ ಮಠವೆಂದು ಪ್ರಸಿದ್ಧವಾಗಿರುವ ಯತಿಪರಂಪರೆಗೆ ಸೇರಿದವರು , ವ್ಯಾಸತೀರ್ಥರ ಸಮಕಾಲಿಕರು ಅವರು ಒಮ್ಮೆ ಶ್ರೀರಂಗಕ್ಕೆ ಬಂದಾಗ ವ್ಯಾಸತೀರ್ಥರೂ ಅಲ್ಲಿದ್ದರು ವ್ಯಾಸತೀರ್ಥರನ್ನು ಕಾಣಲು ಅವರ ಮಠಕ್ಕೆ ಹೋದಾಗ ಅವರಿಗೆ ವ್ಯಾಸತೀರ್ಥರ ಬಳಿ ವಿದ್ಯಾಭ್ಯಾಸಮಾಡುತ್ತಿದ್ದ ವಿಜಯೀಂದ್ರತೀರ್ಥರನ್ನು ಕಂಡು ಅವರನ್ನು ತಮ್ಮ ಮಠದ ಉತ್ತರಾಧಿಕಾರಿಯಾಗಿ ಮಾಡಿಕೊಳ್ಳುವ ಮನಸ್ಸಾಯಿತು ವ್ಯಾಸತೀರ್ಥರೊಂದಿಗೆ ಪಂಕ್ತಿ ಭೋಜನಮಾಡುವಾಗ, 'ತಮ್ಮ ಬೇಡಿಕೆಯೊಂದನ್ನು ಪೂರೈಸಿದರೇ ತಾವು ಊಟ ಮಾಡುವುದಾ'ಗಿ ವ್ಯಾಸತೀರ್ಥರಿಗೆ ತಿಳಿಸಿದರು ವ್ಯಾಸತೀರ್ಥರು ಆಗಲೆಂದು ಒಪ್ಪಿದಾಗ ವಿಜಯೀಂದ್ರತೀರ್ಥರನ್ನು 'ಪುತ್ರಭಿಕ್ಷೆ'ಯಾಗಿ ಬೇಡಿದರು ಇಲ್ಲಿ 'ಪುತ್ರ'ನೆಂದರೆ ಸ್ವಾಮಿಗಳ ಉತ್ತರಾಧಿಕಾರಿ, 'ಕರಕಮಲ ಸಂಜಾತ' ಆಗ ವ್ಯಾಸತೀರ್ಥರು ವಿಜಯೀಂದ್ರರನ್ನು ಸುರೇಂದ್ರತೀರ್ಥರಿಗೆ ಒಪ್ಪಿಸಿಬಿಟ್ಟರು ಮುಂದೆ 1539ರಲ್ಲಿ ಅವರು ಆ ಮಠದ ಅಧಿಪತಿಗಳಾಗಿ ಐವತ್ತೈದು ವರ್ಷಗಳು ಮೆರೆದರು ಮಠದ ಎಣಿಕೆಯಂತೆ ಸುರೇಂದ್ರತೀರ್ಥರೇ ವಿಜಯೀಂದ್ರರ ಗುರುಗಳಾದರೂ, ಸುರೇಂದ್ರತೀರ್ಥರಿಗೆ 'ಪುತ್ರಭಿಕ್ಷೆ'ಯನ್ನು ವ್ಯಾಸತೀರ್ಥರು ನೀಡಿದರಾಗಿ, ವ್ಯಾಸತೀರ್ಥರು ವಿಜಯೀಂದ್ರರಿಗೆ ಪರಮಗುರುಗಳಾದರು

ಕಾಂಭೋದಿ　　　　　　　　　　　　　　　　　　　　　　　　ಝಂಪೆ

ವಾಸುದೇವನ ಚರಣವನಜ ವಂದಿಪನೆ, ಸ　　　ಪ

ನ್ಯಾಸಿರತ್ನಾಕರನೆ ವ್ಯಾಸಮುನಿರಾಯ　　　ಅ

ವಾದಿಗಜ ಸಿಂಹ ದುರ್ವಾದಿ ಮೃಗಭೇರುಂಡ
ವಾದಿಫಣಿ ಗರುಡ ತತ್ವಾದಿ ರಚಿತ
ವಾದಿಭಯಂಕರ ದುರ್ವಾದಿ ಕೋಲಾಹಲ
ವಾದಿಮಸ್ತಕ ಶೂಲ ಮದುರ ಗುಣಶೀಲ　　　೧

ವೈಷ್ಣವೋತ್ತಮನೆ ಸದ್ವೈಷ್ಣವ ವ್ರಜಾನಂದ
ವೈಷ್ಣವಾಗಮಭರಿತ ವೈಷ್ಣವ ಸುಪ್ರೀತ
ವೈಷ್ಣವ ಕಮಲಸೂರ್ಯ ವೈಷ್ಣವ ಕುಮುದಚಂದ್ರ
ವೈಷ್ಣವ ಕುಲೋತ್ಕೃಷ್ಟ ವೈಷ್ಣವವಿಶಿಷ್ಟ　　　೨

ಹರಿಯಿಲ್ಲದ ಕ್ಷೇತ್ರವರಿಯದ ಮಹಾಮಹಿಮ
ಸಿರಿಕೃಷ್ಣ ಚರಣ ಸರಸೀರುಹ ಭೃಂಗ
ಗುರು ಪುರಂದರವಿಠಲನೆ ಪರದೈವವೆಂ
ದರುಹಿ ಸುಜನರ ಪೊರೆವ ವ್ಯಾಸಮುನಿರಾಯಾ　　　೩

[ಇದು ತಮ್ಮ ಗುರುಗಳಾದ ವ್ಯಾಸತೀರ್ಥರನ್ನು ಕುರಿತ ಬರೆದ ಹಾಡು ]

ಚರಣವನಜ—ಅಡಿದಾವರೆ, ಪಾದಪದ್ಮ, ವನ (ನೀರಿನಲ್ಲಿ)—ಜ (ಹುಟ್ಟಿದ್ದು)
ವಾದಿಗಜಸಿಂಹ—ವಾದಿಗಳೆಂಬ ಆನೆಗೆ ಸಿಂಹದಂತೆ ಇರುವವನು
ದುರ್ವಾದಿಮೃಗಭೇರುಂಡ—ಕುಯುಕ್ತಿಗಳಿಂದ ವಾದಮಾಡುವವರೆಂಬ ಸಿಂಹಕ್ಕೆ (ಮೃಗ) ಗಂಡಭೇರುಂಡದಂತೆ ಇರುವ; ಭೇರುಂಡವೆಂಬುದು ಮೃಗ–ಪಕ್ಷಿ ಸಮನ್ವಯವಾಗಿ, ಮೂವತ್ತೆರಡು ಕೈಗಳಿದ್ದು ಭಯಂಕರವಾದ ಆಯುಧಗಳನ್ನು ಧರಿಸಿರುವ ಪುರಾಣಪ್ರಸಿದ್ಧವಾದ ಶಿವ–ವಿಷ್ಣುರೂಪ ನರಸಿಂಹನ

ಉಗ್ರತೆಯನ್ನು ಅಡಗಿಸಲು ಶಿವನು ಶರಭರೂಪವನ್ನು ತಾಳಿದನೆಂದೂ, ಶರಭನ ಕ್ರೌರ್ಯವನ್ನು ಕೊನೆಗಾಣಿಸಲು ಬೇರುಂಡರೂಪದಿಂದ ವಿಷ್ಣುವು ಮೈದಾಳಿ ಶಿವರೂಪವನ್ನು ಕೂಡಿಸಿಕೊಂಡನೆಂದೂ ಪುರಾಣದ ಕತೆ

ವಾದಿಫಣಿಗರುಡ—ವಾದಿಗಳೆಂಬ ಹಾವಿಗೆ ಗರುಡನಂತೆ ಅಂಜಿಕೆಯನ್ನು ತರುವವನು

ತತ್ತ್ವಾದಿ ರಚಿತ —ಸಿದ್ಧಾಂತ ಪ್ರಮೇಯಗಳಿಂದಲೇ ವಾದಿಗಳಲ್ಲಿ ಜಯವನ್ನು ಒದಗಿಸುವವನು

ವಾದಿಮಸ್ತಕಶೂಲ—ವಾದಿಗಳ ತಲೆಯನ್ನು ತಿವಿಯುವ ಶೂಲ

ಮಧುರ ಗುಣಶೀಲ—ಶಾಸ್ತ್ರಗಳಿಗೆ ಸಮಂಜಸವಾದ, ಸಜ್ಜನರಿಗೆ ಪ್ರಿಯವಾದ ಗುಣ ಗಳನ್ನು ಹೊಂದಿದವನು

ಸದ್ವೈಷ್ಣವ ವ್ರಜಾನಂದ—ಒಳ್ಳೆಯ ವಿಷ್ಣುಭಕ್ತರ ಗುಂಪಿಗೆ (ವ್ರಜ) ಸುಖವನ್ನುಂಟು ಮಾಡುವವನು

ವೈಷ್ಣವ ಕಮಲ —ಕಮಲವು ಸೂರ್ಯೋದಯವಾದಾಗ ಅರಳುವಂತೆ ನೈದಿಲೆಯು ಚಂದ್ರೋದಯವಾದಾಗ ಅರಳುವುದು ಇಲ್ಲಿನ ತಾತ್ಪರ್ಯ

ವೈಷ್ಣವ ವಿಶಿಷ್ಟ—ಹರಿಸರ್ವೋತ್ತಮತ್ವವೇ ಎದ್ದುಕಾಣುವ ಮನೋಧರ್ಮವನ್ನ ಉಳ್ಳವನು

ಹರಿಯಿಲ್ಲದ ಕ್ಷೇತ್ರವರಿಯದ —ಎಲ್ಲೆಲ್ಲೂ ದೇವರನ್ನು ಕಂಡವರು

ಸರಸೀರುಹಭೃಂಗ—ತಾವರೆಯಲ್ಲಿ ಸುಳಿದಾಡುವ ದುಂಬಿ



ಆರಭಿ　　　　　　　　　　　　　　　　　　　　ಅಟ್ಟ

ವರಗುರು ಉಪದೇಶ ನೆರವಾಯಿತೆನಗೀಗ ಇನ್ನೇನಿನ್ನೇನು　　ಪ

ಹರಿದಾಸರ ಸಂಗ ದೊರಕಿತು ಎನಗೀಗ ಇನ್ನೇನಿನ್ನೇನು　　ಅ

ಮಾಯದ ಸಂಸಾರ ಮಮಕಾರ ಹಿಂಗಿತು ಇನ್ನೇನಿನ್ನೇನು
ತೋಯಜಾಕ್ಷನ ನಾಮ ಜಿಹ್ವೆಯೊಳ್ ನೆಲೆಸಿತು ಇನ್ನೇನಿನ್ನೇನು ೧

ಹಲವು ದೈವಗಳೆಂಬ ಹಂಬಲಂ ಬಿಟ್ಟಿತು ಇನ್ನೇನಿನ್ನೇನು
ಜಲಜನಾಭನ ಧ್ಯಾನ ಹೃದಯದೊಳ್ನೆಲೆಸಿತು ಇನ್ನೇನಿನ್ನೇನು　೨

ತಂದೆತಾಯಿ ಮುಚುಕುಂದವರದನಾದ ಇನ್ನೇನಿನ್ನೇನು
ಸಂದೇಹವಿಲ್ಲ ಮುಕುಂದ ದಯಮಾಡಿದನಿನ್ನೇನಿನ್ನೇನು　　೩

ಏನೆಂದು ಪೇಳಲಿ ಆನಂದ ಸಂಭ್ರಮ ಇನ್ನೇನಿನ್ನೇನು
ಆ ನಂದಗೋಪನ ಕಂದನ ಮಹಿಮೆಯ ಇನ್ನೇನಿನ್ನೇನು　　೪

ಎನ್ನ ವಂಶಗಳೆಲ್ಲ ಪಾವನ್ನವಾದವು ಇನ್ನೇನಿನ್ನೇನು
ಚಿನ್ಮಯ ಪುರಂದರವಿಠಲಯ್ಯ ದೊರಕಿದ ಮೇಲಿನ್ನೆನ್ನಿನ್ನೇನು　೫

ಕರಿರಾಜವರದನ ಕರುಣ ಸ್ಥಿರವಾಯಿತು ಇನ್ನೇನಿನ್ನೇನು
ನರರ ಪಾಮರರ ಸಂಗತಿಗಳ ಬಿಡಿಸಿತು ಇನ್ನೇನಿನ್ನೇನು　　೬

ವರಗುರು ಉಪದೇಶ —ವ್ಯಾಸತೀರ್ಥರಿಂದ ದೊರೆತ ಮಂತ್ರೋಪದೇಶ, ಮುದ್ರಾಂಕನ, ಕಾವ್ಯಾಂಕಿತಗಳು, ಪುರಂದರದಾಸರ ಹರಿದಾಸಜೀವನಕ್ಕೆ ಮೂಲಾಧಾರವಾದ ಪಾಥೇಯವಾದುವು ಗುರುವಿನ ಅನುಗ್ರಹ ದೊರೆತಮೇಲೆ ಹರಿಯ ಕರುಣೆಗೆ ಯಾವ ಅಡ್ಡಿಯೂ ಇರದು 'ಗುರುವಿನ ಒಲುಮೆ ಆಗೋತನಕ ದೊರಕೋಣೆಲ್ಲ ಮುಕುತಿ' ಎಂದು ಪುರಂದರದಾಸರದ್ದೇ ಒಂದು ಪದವಿದೆ.

ಆದ್ದರಿಂದ ಗುರುಭಕ್ತಿಯೆನ್ನುವುದು ಪ್ರಧಾನ ಸಾಧನ 'ಗುರುವೇ ಮುಖ್ಯನು ಕಾಣೋ ಸದ್ಗತಿಗೆ' ಎಂದು ವಿಜಯದಾಸರೂ ಹೇಳಿದ್ದಾರೆ

ತೋಯಜಾಕ್ಷನ ನಾಮ —ನೀರಿನಲ್ಲಿ ಹುಟ್ಟಿದ ತಾವರೆಯಂತೆ ಚೆಲುವಾದ ಕಣ್ಣುಳ್ಳವನು, ಹರಿ, ಅವನ ನಾಮಸ್ಮರಣೆ

ಹಲವು ದೈವಗಳೆಂಬ ಹಂಬಲ —ದಾಸರು ತಮ್ಮ ಪೂರ್ವಜೀವನದಲ್ಲಿ ಹರಿಯ ಸರ್ವೋತ್ತಮತ್ವವನ್ನೂ ಸರ್ವೇಶ್ವರತ್ವವನ್ನೂ ಸ್ವಾತಂತ್ರ್ಯವನ್ನೂ ಅರಿತುಕೊಳ್ಳದೆ ಹಲವಾರು ಆನುಷಂಗಿಕ ಫಲಪ್ರದಗಳಾದ ದೈವಗಳನ್ನು ನಂಬಿ ಪೂಜಿಸುತ್ತಿದ್ದರೆಂದೂ, ಈಗ ವ್ಯಾಸತೀರ್ಥರಿಂದ ತತ್ತ್ವ ತಿಳಿದುಬಂದಮೇಲೆ ಈ ಹಂಬಲ ತೊಲಗಿತೆಂದೂ ಹೇಳುತ್ತಾರೆ

ಮುಚುಕುಂದವರದ—ಮಾಂಧಾತ ರಾಜನಿಗೆ ಪುರುಕುತ್ಸ, ಮುಚುಕುಂದ ಎಂಬಿಬ್ಬರು ಮಕ್ಕಳಿದ್ದುದೂ, ಮುಚುಕುಂದನು ಕೃಷ್ಣಭಕ್ತನಾಗಿದ್ದುದೂ ಭಾಗವತದಲ್ಲಿ ಬರುತ್ತದೆ ದೇವ-ದೈತ್ಯರ ಸಮರದಲ್ಲಿ ದೇವತೆಗಳಿಗೆ ನೆರವಾಗಿ ವರವನ್ನು ಪಡೆದುಕೊಂಡು, ನಿದ್ರೆಯಿಂದ ಎದ್ದೊಡನೆ ಕಾಲಯಮನನ್ನು ನೋಟದಿಂದಲೇ ಸುಟ್ಟು ಕೃಷ್ಣನ ಮೆಚ್ಚುಗೆಯನ್ನು ಪಡೆದುಕೊಂಡವನು

ನರರ ಪಾಮರರ ಸಂಗತಿಗಳೆ —ಪಾಮರನೆಂದರೆ ಮೂರ್ಖನೆಂದು ಹೇಮಚಂದ್ರನ ವಿವರಣೆ, ಶಾಸ್ತ್ರಗಳನ್ನೋದದವನು, ಶ್ರುತಿಯ ತಾತ್ಪರ್ಯವನ್ನು ಅರಿತುಕೊಳ್ಳದವನು ಎಂದರೆ,ಬದುಕಿನ ಗೊತ್ತುಗುರಿಗಳನ್ನು ತಿಳಿದುಕೊಳ್ಳದೆ ಹೊಟ್ಟೆ ಹೊರೆದುಕೊಳ್ಳುವುದು, ನೈಸರ್ಗಿಕ ಬಯಕೆಗಳನ್ನು ತೀರಿಸಿಕೊಳ್ಳುವುದು ಇಷ್ಟರಲ್ಲೇ ತೊಡಗಿರುವ ಜನರ ಸಹವಾಸವು ತಪ್ಪಿತೆಂದು ಈ ಸಾಲಿನ ಅರ್ಥ



ಘಂಟಾರವ ರೂಪಕ

ನೆರೆ ನಂಬಿರೊ ಎಲೆ ಅಣ್ಣ ಪ

ಸಿರಿಯುರಸನ ಕರುಣಾಳುವ ಸರಸಿಜಸಂಭವನ ಪಿತನ
ಸುರರೊಡೆಯನ ಸಕಲ ವೇದ ಒರಲೊ ಹರಿಯು
ಪರದೇವತೆ ಇದೆ ಇದೆ ಎಂದು ಕರಕಮಲದೊಳಿಟ್ಟು ಮೆರೆವ
ಪರಮಹಂಸರಾದ ವ್ಯಾಸರಾಯರ ೧

ಜ್ಞಾನ ಭಕ್ತಿ ವೈರಾಗ್ಯ ನಿಧಾನವ ನಮಗಿತ್ತು ಮರೆವ
ದಾನವಾರಿ ಗುಣಗಣದಲಿ ಮನವೊಳೆತಿಪ್ಪನ
ತಾನೆ ದೈವವೆಂಬಾಸುಠ ಕಾನನಗಳ ತರಿದಟ್ಟುವ
ಆನಂದತೀರ್ಥರ ಪಟ್ಟದಾನೆ ವ್ಯಾಸರಾಯರ ೨

ಅಂದು ಸಾಸಿರ ಮುಖದಲಿ ವೋದದಲಿ ಮು
ಕುಂದನ ಅಹಿರಾಜ ಪೊಗಳಿದಂದದಲಿಂದು ಕೃಪೆ
ಯಿಂದ ಪೊರೆವ ಅಭಿನವ ಪುರಂದರವಿಠಲನ ಜಗಕೆ ತಂದು ತೋರಿದ
ವೈಷ್ಣವಕುಮುದೇಂದು ವ್ಯಾಸರಾಯರ ೩

[ಇದು ದಾಸರು ವ್ಯಾಸತೀರ್ಥರನ್ನು ಕುರಿತು ರಚಿಸಿದ ಇನ್ನೊಂದು ಪದ ಅಂಕಿತ ದಲ್ಲಿ ಅಭಿನವ ಪುರಂದರವಿಠಲ'ನೆಂದಿದ್ದರೂ ಇದು ಪುರಂದರದಾಸರ ಪದವೆಂದೇ ದಾಸಕೂಟದಲ್ಲಿ ಪ್ರಸಿದ್ಧಿಯಿರುವುದರಿಂದ, ಇಲ್ಲಿ 'ಅಭಿನವ' ಎಂದರೆ ಅವರಿಗೆ ಹರಿದಾಸದೀಕ್ಷೆ ಒದಗಿದ ತರುಣದಲ್ಲೇ ರಚಿಸಿದ ಪದವೆಂದು ಭಾವಿಸಬೇಕು ]

ಸಿರಿಯುರಸನ—ಶ್ರೀ (ಲಕ್ಷ್ಮಿ)ಯ ಗಂಡನಾದ ವಿಷ್ಣುವಿನ

ಸರಸಿಜಸಂಬವನ ಪಿತನ— ವಿಷ್ಣುವಿನ ನಾಭಿಕಮಲದಿಂದ ಹುಟ್ಟಿದ ಬ್ರಹ್ಮನಿಗೆ ತಂದೆ ಯಂತೆ ಇರುವ

ಸಕಲ ವೇದ ಒರಲೊ ಹರಿಯ—'ಸದಾಗಮೈಕವೇದ್ಯ' ಎಂಬ ಆಚಾರ್ಯರ ಮಾತಿನ ಕನ್ನಡ ರೂಪ , ಎಲ್ಲ ವೇದಗಳೂ ಹರಿಯೇ ಪರದೈವವೆಂದು ಬಾರಿಬಾರಿಗೆ ಸಾರಿ ಹೇಳುತ್ತವೆ (ಒರಲುತ್ತವೆ)

ಪರಮಹಂಸರಾದ—ಪೂಜ್ಯರಾದ ಸಂನ್ಯಾಸಿಗಳಿಗೆ ವಿಶೇಷಣವಾಗಿ ಬಳಸುವ ಪದ

ನಿಧಾನ—ನಿದಾನ, ನಿಧಿ, ದನ, ಇರಿಸುವುದು ಎಂಬರ್ಥದಲ್ಲಿ ಭಂಡಾರ, ಸಂಗ್ರಹ

ದಾನವಾರಿಗುಣ —ದಾನವರನ್ನು ಹತ್ತಿಕ್ಕುವ ನಾರಾಯಣನ ಗುಣಗಳಲ್ಲೇ ತನ್ನ ಮನಸ್ಸು ಬೇರುಬಿಟ್ಟು ಬೆಳೆಯುವಂತೆ (ಮೊಳೆತಿಪ್ಪನ) ಮಾಡಿಕೊಂಡವನ

ತಾನೆ ದೈವವೆಂಬ ಅಸುರಕಾನನಗಳ —ತಾವೇ ಸರ್ವಶಕ್ತರೆಂದು, ಸರ್ವೇಶ್ವರರೆಂದು, ಬಗೆದು ಲೋಕಕ್ಕೆ ಕಂಟಕಪ್ರಾಯರಾದ ರಾಕ್ಷಸರೆಂಬ ಕಾಡನ್ನು ತರಿಯುವ

ಸಾಸಿರಮುಖದಲ್ಲಿ ಅಹಿರಾಜ—ಆದಿಶೇಷನು ತನ್ನ ಸಾವಿರ ಬಾಯಿಗಳಿಂದ ನಾರಾಯಣನನ್ನು ಹೊಗಳಿದಂತೆ



ಕಾಂಬೋದಿ ಝಂಪೆ

ಬದುಕಿದೆನು ಒದುಕಿದೆನು ಬವವೆನಗೆ ಹಿಂಗಿತು ಪ

ಪದುಮನಾಭನ ಪಾದದೊಲುಮೆ ಎನಗಾಯಿತು ಅ

ಹರಿಯ ತೀರ್ಥಪ್ರಸಾದವಿಂದೆನಗೆ ದೊರಕಿತು
ಹರಿಕಥಾಮೃತವೆನ್ನ ಕಿವಿಯೊಳಾಯ್ತು
ಹರಿದಾಸರುಗಳೆನ್ನ ಬಂಧುಬಳಗವಾದರು
ಹರಿಯ ಶ್ರೀಮುದ್ರೆಯೆನಗಾಭರಣವಾಯ್ತು ೧

ಮುಕ್ತರಾದರು ಎನ್ನ ನೂರೊಂದು ಕುಲದವರು
ಮುಕ್ತಿ ಮಾರ್ಗಕೆ ಯೋಗ್ಯ ನಾನಾದೆನು
ಮುಕ್ತಿದಾಯಕನ ಭಕ್ತಿಗೆ ಮನವು ನೆಲೆಸಿತು
ವ್ಯಕ್ತವಾಯಿತು ನಾಲಗೆಯೊಳು ಹರಿನಾಮ ೨

ಇಂದೆನ್ನ ಸಂತತಿಗೆ ಸಕಲ ಸಾಧನವಾಯ್ತು
ಮುಂದೆನ್ನ ಜನ್ಮವು ಸಫಲವಾಯ್ತು
ತಂದೆ ಪುರಂದರವಿಠಲನೆಂದೆಂಬ ಪರದೈವ
ಬಂದೆನ್ನ ಹೃದಯದಲಿ ನೆಲೆಯಾಗಿ ನಿಂತ ೩

[ವ್ಯಾಸರಾಯಸ್ವಾಮಿಗಳಿಂದ ಹರಿದಾಸದೀಕ್ಷೆಯನ್ನು ಪಡೆದುಕೊಂಡನಂತರ, ತಮಗೊದಗಿದ ಸಂತೋಷ, ಸಮಾಧಾನಗಳನ್ನು ದಾಸರು ಈ ಹಾಡಿನಲ್ಲಿ ಸೂಚಿಸಿದ್ದಾರೆ ]

ಭವ ಹಿಂಗಿತು—ಸಂಸಾರದ ಕಷ್ಟ ತೊಲಗಿತು , ಸಂಸಾರವೆಂಬ ಭಾರ ಇಳಿಯಿತು

ಹರಿಮುದ್ರೆ—ವೈಷ್ಣವರು ವಿಷ್ಣುವಿನ ಹೆಸರಿನಿಂದ ಧರಿಸುವ ಪಂಚಮುದ್ರೆಗಳು ಶಂಖ, ಚಕ್ರ, ಗದೆ, ಪದ್ಮ ಎಂಬ ನಾಲ್ಕು ಆಯುಧಗಳು ಇದರಲ್ಲಿ ಸೇರುತ್ತವೆ, ಐದನೆಯದು ನಾರಾಯಣಮುದ್ರೆ

ಮುಕ್ತಿಮಾರ್ಗಕೆ ಯೋಗ್ಯ —ಗುರುವಿನಿಂದ ಉಪದೇಶ ಪಡೆದದ್ದೇ ಯೋಗ್ಯತೆ

ಸೌರಾಷ್ಟ್ರ ಅಟ್ಟ

ಮಾಯದ ಸಂಸಾರ ಮಮಕಾರ ಹಿಂಗಿತು ಇನ್ನೇನಿನ್ನೇನು ಪ
ತೋಯಜಾಕ್ಷನ ದಯ ನಮಗೀಗ ದೊರಕಿತು ಇನ್ನೇನಿನ್ನೇನು ಅ

ಭಾವಿಸಿದ್ದೆಲ್ಲವು ಭೂಮಿ ಪಾಲಾದಮೇಲಿನ್ನೇನಿನ್ನೇನು
ಸೇವಿಸಿದ ಗಣಪ ಮಂಗನಾದ ಮೇಲಿನ್ನೇನಿನ್ನೇನು ೧

ಒತ್ತಿಹಿಡಿದ ಕಂಭ ವ್ಯರ್ಥವಾದ ಮೇಲಿನ್ನೇನಿನ್ನೇನು
ಜತ್ತಾದ ಜನರೆಲ್ಲ ಜರಿದು ಪೋದಮೇಲಿನ್ನೇನಿನ್ನೇನು ೨

ತೋಡಲು ಭಾವಿ ಬೇತಾಳ ಹೊರಟಿತು ಇನ್ನೇನಿನ್ನೇನು
ನಾಡ ಜನಕೆ ನಾಲ್ಕು ನಾಲಿಗುಂಟಾಯಿತು ಇನ್ನೇನಿನ್ನೇನು ೩

ಬರಹೋಗುವರ ಮುಂದೆ ಮರಿಯಾದೆ ಹೋಯಿತು ಇನ್ನೇನಿನ್ನೇನು
ಸರಸಸಂಸಾರದ ಸವಿ ಹಾರಿಹೋಯಿತು ಇನ್ನೇನಿನ್ನೇನು ೪

ಕಯ್ಯಿಗೆ ಬಂದಪರಂಜಿ ಕಬ್ಬಿಣವಾಯಿತು ಇನ್ನೇನಿನ್ನೇನು
ಬಯಸಲೇತಕೆ ಪಡೆದ ಭಾಗ್ಯ ಬಯಲಾಯಿತು ಇನ್ನೇನಿನ್ನೇನು ೫

ಅರ್ಥಿಯ ಸಂಸಾರ ಅಡವಿಪಾಲಾದಮೇಲಿನ್ನೇನಿನ್ನೇನು
ಮಿತ್ರರಾದವರೆಲ್ಲ ಶತ್ರುಗಳಾದಮೇಲಿನ್ನೇನಿನ್ನೇನು ೬

ಗಂಡ ಮಕ್ಕಳು ಯಮಗಂಡರಾದಮೇಲಿನ್ನೇನಿನ್ನೇನು
ಪಂಡಿತ ಶ್ರೀ ಪುರಂದರವಿಠಲನೊಲಿದ ಇನ್ನೇನಿನ್ನೇನು ೭

[ಹಿಂದಿನ ಹಾಡಿನಂತೆ ಇದರಲ್ಲೂ ಹರಿದಾಸದೀಕ್ಷೆ ಅವರಿಗೆ ತಂದ ಸಮಾಧಾನವನ್ನು ಕಾಣುತ್ತೇವೆ ಹರಿದಾಸದೀಕ್ಷೆಯಾಗುವ ಮೊದಲು ಸಂಸಾರದ ವಿವರಗಳೇ ಪರಮ ಸತ್ಯವೆಂದು ಭಾವಿಸಿ, ವಿಷಯಸುಖಗಳಲ್ಲೇ ತೊಡಗಿದ್ದರು , ತಾನು, ತನ್ನದು ಎಂಬ ಅಹಂಕಾರ–ಮಮಕಾರಗಳೇ ಮುಖ್ಯವೃತ್ತಿಗಳಾಗಿದ್ದುವು ಆದರೆ ಗುರುಗಳಿಂದ ದೀಕ್ಷೆ ಪಡೆದುಕೊಂಡಮೇಲೆ ಹರಿಯೊಬ್ಬನೇ ಸತ್ಯ , ಅದಕ್ಕೆ ವಿಮುಖವಾದ ಸಂಸಾರವೆಲ್ಲ

ಮಾಯೆ ಎಂದು ಸ್ಪಷ್ಟವಾಯಿತು. ಮೊದಲು ಸಂಸಾರವನ್ನೇ ನಂಬಿಕೊಂಡು ಬಾಳುತ್ತಿರುವಾಗ ತಮಗೊದಗಿದ ಅಪಮಾನ-ಆಪತ್ತುಗಳನ್ನು ಇಲ್ಲಿ ಬಣ್ಣಿಸಿದ್ದಾರೆ. ಈಗ ಇವೆಲ್ಲ ಮಾಯೆಯೆಂದು ತಿಳಿದ ಮೇಲೆ ಏತರ ಚಿಂತೆ? ಹರಿಯು ಒಲಿದ ಮೇಲೆ ಇವೆಲ್ಲ ಕಾಡಲಾರವು. ವ್ಯಕ್ತಿಯಲ್ಲಿ ತಟಕ್ಕನೆ ಆದ ಬದಲಾವಣೆಯಿಂದ ಭೂತ-ವರ್ತಮಾನ ಸ್ಥಿತಿಗಳನ್ನು ತೌಲನಿಕವಾಗಿ ನೋಡುವ ದಾಸ ಈ ಪದ್ಯದಲ್ಲಿ 'ಇನ್ನೇನಿನ್ನೇನು' ಎಂಬ ಶಬ್ದ ಪದ'ದ ಉದ್ದಕ್ಕೂ ಮಂತ್ರದಂತೆ ಅನುರಣನಗೊಂಡು ನಿವೃತ್ತಿಯಿಂದ ನೆಮ್ಮದಿ ಪಡೆದ ಉತ್ಸಾಹದ ಸ್ಥಿತಿಯನ್ನು ವಿವರಿಸುತ್ತದೆ ]

ಇನ್ನೇನಿನ್ನೇನು—ಇವೆಲ್ಲ ಮುಂದೆ ದಿಟವಲ್ಲ, ಅವುಗಳ ಚಿಂತೆ ನನಗಿನ್ನು ಇರದು

ಮಾಯದ ಸಂಸಾರ —ಜೀವನಿಗ ಸ್ವರೂಪಜ್ಞಾನವಿಲ್ಲದೆ ದೇಹವೇ ತಾನು, ವಿಷಯಗಳು ತನ್ನವು, ಅವನ್ನು ಅನುಭವಿಸಲು ತಾನು ಸ್ವತಂತ್ರ ಎಂದು ಬಗೆಯುವುದೇ ಮಾಯೆ. ಇದರಿಂದಲೇ ಸಂಸಾರವೆಂಬ ಜಾಲ ಹೆಣೆದುಕೊಳ್ಳುವುದು, ಬಿಗಿದುಕೊಳ್ಳುವುದು. ತತ್ತ್ವಜ್ಞಾನದಿಂದಲೇ ಇದು ತೊಲಗುವುದು

ಜತ್ತಾದ ಜನ—ಜತೆಗೂಡಿದವರು

ಅರ್ಥಿ—ಬೇಡುವವ



ಭೈರವಿ ಆದಿ

ಮಧುಕರ ವೃತ್ತಿ ಎನ್ನದು ಅದು ಬಲು ಚೆನ್ನದು ಪ
ಪದುಮನಾಭನ ಪಾದಪದುಮ ಮಧುಪವೆಂಬ ಅ

ಕಾಲಿಗೆ ಗೆಜ್ಜೆ ಕಟ್ಟಿ ನೀಲವರ್ಣನ ಗುಣ
ಆಲಾಪಿಸುತ್ತ ಬಲು ಓಲಗ ಮಾಡುವಂಥ ೧

ರಂಗನಾಥನ ಗುಣ ಹಿಂಗದೆ ಪಾಡುತ್ತ
ಶೃಂಗಾರ ನೋಡುತ್ತ ಕಂಗಳಾನಂದವೆಂಬ ೨

ಇಂದಿರಾಪತಿ ಪುರಂದರವಿಠಲನಲ್ಲಿ
ಚೆಂದದ ಭಕ್ತಿಯಿಂದಾನಂದವ ಪಡುವಂಥ ೩

[ಈ ಹಾಡು ಹರಿದಾಸದೀಕ್ಷೆಯ ಸ್ವಾರಸ್ಯವನ್ನು ವಿವರಿಸುತ್ತದೆ ಹರಿದಾಸರು ಲೌಕಿಕರಂತೆ ಯಾವ ಉದ್ಯೋಗವನ್ನೂ ಹಿಡಿಯುವುದಿಲ್ಲ, ಅವರು ಹರಿಸಂಕೀರ್ತನ ಮಾಡುತ್ತ ಊರೂರು, ಕೇರಿಕೇರಿ ಅಲೆದಾಡುತ್ತಾರೆ, ಅವರಿವರು ಕೊಡುವ ಆಹಾರ ಸಾಮಗ್ರಿಗಳನ್ನು ಪಡೆದುಕೊಂಡು ಹೋಗುತ್ತಾರೆ ಇದನ್ನು ಇಲ್ಲಿ ದುಂಬಿಯ ಅಲೆದಾಟಕ್ಕೆ ಹೋಲಿಸಿದ್ದಾರೆ ದುಂಬಿಯ ನೆಗೆದಾಟ, ಝುಂಕಾರಗಳು ಹರಿದಾಸರ ನರ್ತನ-ಗೀತಗಳಿಗೆ ಸಮ 'ಮಧುಕರ ವೃತ್ತಿ'ಯೆನ್ನುವುದು ಧರ್ಮಶಾಸ್ತ್ರದಲ್ಲಿ ಅಧ್ಯಾತ್ಮನಿಷ್ಠೆಯುಳ್ಳವರಿಗೆ ವಿಹಿತವಾಗಿದೆ ಮಾಡುವ ಕೆಲಸಕ್ಕೂ ಒಂದು ವೃತ್ತಿ ಗೌರವವನ್ನು ಸಂಪಾದಿಸಿಕೊಡುವ ಸುಂದರ ಪದ ಇದು ಅಕ್ಕಿಯ ಭಿಕ್ಷೆಯನ್ನು ಪಡೆದು ಹಾಡಿನ ಭಿಕ್ಷೆಯನ್ನು ನೀಡುವ ಕಾಯಕ ಇವರದಾಗಿತ್ತು ಈ ಸಂಚಾರೀ ಗಾಯಕರ ತಂಡದ ಕಾರ್ಯವನ್ನು ಶ್ಲೇಷೆಯಿಂದ ಪುರಂದರದಾಸರು ಸೊಗಸಾಗಿ ವಿವರಿಸಿದ್ದಾರೆ ]

ಮಧುಕರ ವೃತ್ತಿ—ಮಧುಕರವೆಂದರೆ ಜೇನುನೊಣ (ಭ್ರಮರ) ಅದು ಯಾವೊಂದು ಹೂವಿಗೂ ಅಂಟಿಕೊಳ್ಳದೆ ಹಲವಾರು ಹೂಗಳ ಮೇಲೆ ಕುಳಿತು ಬಂಡನುಂಡು ಒಡನೆಯೇ ಹಾರಿಹೋಗುವಂತೆ ಹರಿದಾಸನೂ ಮನೆಮನೆಗೆ ಹೋಗಿ ಉಪಾದಾನ ವನ್ನು ಪಡೆದುಕೊಂಡು, ಯಾವ ಮನೆಯ ಕೋಟಲೆಯನ್ನೂ ತಲೆಗೆ ಹಚ್ಚಿ

ಕೊಳ್ಳದೆ ತನ್ನ ಪಾಡಿಗೆ ತಾನು ನೆಮ್ಮದಿಯಿಂದ ಹರಿಸ್ಮರಣೆ ಮಾಡುತ್ತಾನೆ ಇದು ಮಧುಕರ ವೃತ್ತಿ, ಜೇನುನೊಣದಂತೆ ಅಲೆಯುವುದು ಇದನ್ನು ಸಂನ್ಯಾಸಿಗಳ, ಪರಿವ್ರಾಜಕರ ಧರ್ಮವೆಂದು ಶಾಸ್ತ್ರ ವಿಧಿಸಂತ್ತದೆ ಭಾಗವತದಲ್ಲಿ ಭಗವದ್ಭಕ್ತರೂ ಹೀಗೆಯೇ ತಮ್ಮೆಲ್ಲ ವ್ಯವಹಾರದಲ್ಲೂ ಭಗವಂತನ ಇರವನ್ನೇ ಕಾಣುತ್ತಾರೆಂದೂ ಅವರ ವೃತ್ತಿ ಮಧುಕರ ವೃತ್ತಿಯೆಂದೂ ಹೇಳಿದೆ ('ಸರ್ವತಃ ಸಾರಮಾದತ್ತೇ ಯಥಾ ಮಧುಕರೋ ಬುಧಃ', ಭಾಗವತ 41, 18, 2) ಹೂವಲ್ಲಿರುವ ಸಾರವನ್ನು, ಜೇನನ್ನು, ದುಂಬಿ ಹೀರಿಕೊಳ್ಳುವಂತೆ ಹರಿದಾಸನು ಹರಿಯ ಚರಣಕಮಲದಲ್ಲಿರುವ ಸಾರವನ್ನು, ಜೇನನ್ನು (ಮಧು) ಹೀರಿಕೊಳ್ಳುವುದರಿಂದ ಅವನು 'ಮಧು–ಪ'ನೇ (ಮಧು ಪಿಬತಿ ಇತಿ), ದುಂಬಿಯಂತೆಯೇ ಅವನ ಬದುಕು ಅವನನ್ನು ಚಾರಣ–ಗಾಯಕ' ಎಂದು ಬಣ್ಣಿಸಬಹುದು

ನೀಲವರ್ಣನ—ಮೋಡದಂತೆ ಕಪ್ಪಾದ ಬಣ್ಣವುಳ್ಳ ಕೃಷ್ಣ (ನೀಲಮೇಘ ಶ್ಯಾಮ)

ಓಲಗ ಮಾಡುವಂಥ—ಅವನ ಗುಣಗಳನ್ನು ಹಾಡುತ್ತ, ಅವನೆದುರೇ ನಿಂತು ಸೇವೆ ಮಾಡುವುದು ಓಲಗ ಓಲಗ ಮಾಡು ಎಂದರೆ ದರ್ಬಾರು ಮಾಡು, ಚಾಕರಿ ಮಾಡು ಎಂಬ ಎರಡು ಅರ್ಥಗಳೂ ಇಲ್ಲಿ ಸಂಗತವಾಗುತ್ತವೆ

ಹಿಂಗದೆ—ಬೇಸರವಿಲ್ಲದೆ, ಮುಗಿಯಿತು ಎಂದೆನ್ನದೆ

ಶೃಂಗಾರ ನೋಡುತ್ತ—ಸುಂದರವಾದ ಅವನ ಅರ್ಚಾಮೂರ್ತಿಗಳನ್ನು ನೋಡುತ್ತ

ಇಂದಿರಾಪತಿ—ಲಕ್ಷ್ಮಿಯಗಂಡ, ನಾರಾಯಣ



ನಾದನಾಮಕ್ರಿಯ  ಅಟ್ಟ

ಲಂಗೋಟಿ ಬಲು ಒಳ್ಳೆದಣ್ಣ, ಒಬ್ಬರ
ಹಂಗಿಲ್ಲದಂತೆ ಆಚಾರಕ್ಕೆ ಒದಗುವ  ಪ

ಬಡವರಿಗಾಧಾರವಣ್ಣ ಈ ಲಂಗೋಟಿ
ಬೈರಾಗಿಗಳ ಭಾಗ್ಯವಣ್ಣ
ಕಡು ಕಳ್ಳರಿಗೆ ಗಂಡ, ಮಡಿ ಧೋತ್ರಗಳ ಮಿಂಡ
ನಡುಗುವ ಸಮಯಕ್ಕೆ ಮಡಿಗೆ ಒದಗುವಂಥ  ೧

ಜಿತ ಮನ ಸನ್ಯಾಸಿಗಳಿಗಿದೆ ಕೌಪೀನ
ವ್ರತವುಳ್ಳ ಬ್ರಹ್ಮಚಾರಿಗೆ ಮುಖ್ಯವು
ಅತಿಶಯವಿದು ಆಂಜನೇಯ ನಾರದರಿಗೆ
ಗತಿಯಿಲ್ಲದವರಿಗೆ ಮಿತವಾಗಿ ಇರುವಂಥ  ೨

ದುಡ್ಡು ಮುಟ್ಟದಂತೆ ದೊರಕುವ ವಸ್ತುವು
ದೊಡ್ಡ ಅರಣ್ಯದಿ ಭಯವಿಲ್ಲವು
ಹೆಡ್ಡರೆಂಬುವರೇನೊ ಲಂಗೋಟಿ ಜನರನ್ನು
ದೊಡ್ಡವರೆಂದು ವಂದಿಸುವರು ಯತಿಗಳೆ  ೩

ಮೋಕ್ಷಮಾರ್ಗಕ್ಕೆ ಕಲ್ಪವೃಕ್ಷವೀ ಲಂಗೋಟಿ
ಭಿಕ್ಷಗಾರರಿಗೆಲ್ಲ ಅನುಕೂಲವು
ತತ್ಕ್ಷಣದೊಳಗೆ ಕಾರ್ಯಗಳ ತೂಗಿಸಿ ಮಾನ
ರಕ್ಷಣೆಗೆ ಬಹು ರಮ್ಯವಾಗಿರುವಂಥ  ೪

ಮಡಿವಾಳರಿಗೆ ಶತ್ರು ಮರದಯ್ಯಗಳ ಮಿತ್ರ
ಪೊಡವಿಯೊಳ್ ಯಾಚಕರಿಗೆ ನೆರವು
ದೃಢಭಕ್ತ ಬಲಿಚಕ್ರವರ್ತಿಗೋಸ್ಕರ ನಮ್ಮ
ಒಡೆಯ ಶ್ರೀ ಪುರಂದರವಿಠಲ ಧರಿಸಿದಂಥ  ೫

[ಇಲ್ಲಿ ಲಂಗೋಟಿಯೆಂದರೆ ಮೊಳಕಾಲಿಂದ ಮೇಲೆ ಸೊಂಟದವರೆಗೆ ಮೈಮುಚ್ಚುವ ಬಟ್ಟೆ, ಸಂಸ್ಕೃತದಲ್ಲಿ ಕೌಪೀನ ('ಮೇಖಲಾಬದ್ಧ ಪರಿಧೇಯ ವಸ್ತ್ರಖಂಡಂ', ಸೊಂಟಕ್ಕೆ ಸುತ್ತುವ ತುಂಡುಬಟ್ಟೆ) ಇದನ್ನು ಸಂನ್ಯಾಸಿಗಳಿಗೇ ವಿಶೇಷವಾಗಿ ಹೇಳಿದ್ದರೂ, ಹರಿದಾಸರಿಗೂ ಇದು ಒಪ್ಪುತ್ತದೆ, ಮಧುಕರ ವೃತ್ತಿಯಂತೆ ಊಟದ ಸಾಮಗ್ರಿಗಾಗಿ ತಿರುಪೆ ಎತ್ತುವುದರಿಂದ ಅದರ ಅವಲಂಬನೆ ಹರಿದಾಸರಿಗಿಲ್ಲ ಹಾಗೆಯೇ ತುಂಡುಬಟ್ಟೆಯನ್ನು ಉಡುವುದರಿಂದ ಲೌಕಿಕರಂತೆ ಉಡುಗೆ ತೊಡುಗೆಗಳ ಅವಲಂಬನೆಯೂ ಇರದು ಒಬ್ಬರ ಹಂಗೂ ಇರದು' ಈ ಹಾಡಿನಲ್ಲಿ ಹರಿದಾಸರಿಗೂ ಸಂನ್ಯಾಸಿಗಳಿಗೂ ಇರುವ ಹೋಲಿಕೆಯನ್ನು ಸೂಚಿಸಿದ್ದಾರೆ ]

ಮಡಿವಾಳರಿಗೆ ಶತ್ರು—ಇದನ್ನು ಮಡಿಮಾಡಲು ಯಾರೂ ಯಾವ ಮಡಿವಾಳನಿಗೂ (ಅಗಸನಿಗೂ) ಕೊಡಬೇಕಾದುದಿಲ್ಲ, ಇದನ್ನೇ ಬಳಸುವವರು ಮಡಿವಾಳನ ಹಂಗನ್ನೇ ತೊರೆದವರು ಸಾಮಾನ್ಯಜನರಿಂದ ಮಡಿವಾಳನಿಗೆ ಆಗುವ ಲಾಭ ಲಂಗೋಟಿಯವರಿಂದ ಆಗಲಾರದು, ಆದ್ದರಿಂದ ಮಡಿವಾಳ ಅದನ್ನು ಸಿಟ್ಟಿನಿಂದ ಕಾಣುವುದು ಸಹಜವೇ

ಮಠದಯ್ಯಗಳ —ಮಠದ ಸ್ವಾಮಿಗಳ

ದೃಢಭಕ್ತ ಬಲಿಚಕ್ರವರ್ತಿ —ಇಂದ್ರನಿಗೆ ಮತ್ತೆ ಸ್ವರ್ಗಲೋಕವನ್ನು ದೈತ್ಯನಾದ ಆದರೆ ವಿಷ್ಣುಭಕ್ತನಾದ ಬಲಿಯಿಂದ ದೊರಕಿಸಿಕೊಡುವ ಸಲುವಾಗಿ ವಿಷ್ಣುವು ಬಾಲಬ್ರಹ್ಮಚಾರಿಯಂತೆ ಬಂದು ಬಲಿಯಿಂದ ಮೂರು ಹೆಜ್ಜೆ ಭೂಮಿಯನ್ನು ದಾನವಾಗಿ ಬೇಡಿದುದು ವಾಮನಾವತಾರದ ಕಥೆ ಈ ಸಂದರ್ಭದಲ್ಲಿ ವಾಮನನು ಸಣ್ಣ ಹುಡುಗನಾಗಿ ಕೌಪೀನಮಾತ್ರಧಾರಿಯಾಗಿ ದಂಡಕಮಂಡಲುಗಳನ್ನು ಹಿಡಿದು ಬಂದನೆಂದು ವಿವರ



ಪಂತುವರಾಳಿ                                                                                  ಅಟ್ಟ

ವ್ಯಾಪಾರ ನಮಗಾಯಿತು                                                    ಪ
ಶ್ರೀಪತಿ ಪಾದಾರವಿಂದ ಸೇವೆಯೆಂಬೊ                                        ಅ

ಹರಿ ಕರುಣವೆ ಅಂಗಿ ಗುರುಕರುಣ ಮುಂಡಾಸು
ಹರಿದಾಸರ ದಯವೆಂಬೊ ವಲ್ಲಿ
ಪರಮ ಪಾಪಿ ಕಲಿ ಎಂಬೊ ಪಾಪಾಸು ಮೆಟ್ಟಿ
ದುರಾತ್ಮರಾದವರ ಎದೆಮೇಲೆ ನಡೆವಂಥ                                     ೧

ಬಿಳಿಯ ಕಾಗದ ಹೃದಯ ಬಾಯಿ ಕಲಮದಾನಿ
ನಾಲಗೆ ಎಂಬೋದು ಲೇಖನಿಯು
ಶ್ರೀಲೋಲನ ಕಥೆ ದಿವ್ಯ ನಾಮಂಗಳ
ಶೀಲ ಮನದಿ ಬರೆದು ಹರಿಗೆ ಒಪ್ಪಿಸುವಂಥ                                  ೨

ಮುಂದಣ ಆಗಮ ಸಂಸಾರದ ಬಾಧೆ
ಎಂದೆಂದಿಗು ಅದರ ಭಯ ಬಿಟ್ಟಿತು
ಹಿಂದಣ ಸಂಚಿತ ಸಾಲ ಭಾರಕ್ಕೆಲ್ಲ
ಸಂದಾಯವನು ಮಾಡಿ ಕತಬಿ ಹರಿಸಿಬಿಟ್ಟ                                     ೩

ನುಡಿ ನುಡಿಗಾನಂದ ಬಾಷ್ಪ ರೋಮಾಂಚನ
ಮುಡುಪಿನೊಳಗೆ ಇಟ್ಟ ಕೈ ಜೀತವು
ಕಡೆಯ ಸಂಬಳಕೆಲ್ಲ ಮುಕುತಿ ಸಾಧನವನ್ನು
ಕೊಡುವಂತೆ ತಿರುಗದ ಚೀಟಿ ಬರೆಸಿಕೊಟ್ಟ                                    ೪

ಕಂಡ ಕಂಡವರಿಗೆ ಕಾರ್ಪಣ್ಯವ ಬಿಟ್ಟು
ಮಂಡೆ ಅಡ್ಡಾಗಿ ನಾ ಬಳಲಲಿಲ್ಲ
ಪುಂಡರೀಕಾಕ್ಷ ಶ್ರೀ ಪುರಂದರವಿಠಲನು
ದಂಡಿಸಿ ವೀಳ್ಯವ ಕೊಟ್ಟು ಸೇವೆಯೊಳಿಟ್ಟ                                     ೫

[ಹರಿದಾಸರಾಗುವ ಮುನ್ನ ಪುರಂದರದಾಸರು ಲೌಕಿಕವೃತ್ತಿಯನ್ನೇ ಹಿಡಿದಿದ್ದರೆಂದು ಪ್ರತೀತಿ ಪಟ್ಟಣವೊಂದರಲ್ಲಿ ಸಾಹುಕಾರರಾಗಿ ಬಡ್ಡಿಬಾಚಿ ಕೊಡಕೊಳ್ಳುವ ವ್ಯಾಪಾರ ಮಾಡುತ್ತಿದ್ದರಂತೆ ಹರಿದಾಸರಾದ ಮೇಲೆ ತಮ್ಮಲ್ಲಿದ್ದ ಹಣವನ್ನೆಲ್ಲ ಕೃಷ್ಣಾರ್ಪಣವೆಂದು ದಾನಮಾಡಿ 'ಮಧುಕರ' ವೃತ್ತಿಯನ್ನು ಹಿಡಿದರು, ಇನ್ನಾವ ಲೌಕಿಕ ವೃತ್ತಿಯನ್ನೂ ಹಿಡಿಯುವ ಹಾಗಿರಲಿಲ್ಲ ಈ ಹಾಡಿನಲ್ಲಿ ತಮ್ಮ ಈಗಿನ ಮಧುಕರವೃತ್ತಿಯೂ ಹಿಂದಣ ವ್ಯಾಪಾರದಂತೆಯೇ ಇದೆ, ಆದರೆ ವಿವರಗಳು, ಪರಿಕರಗಳು ಬೇರೆ ಎಂದು ಸೂಚಿಸಿದ್ದಾರೆ ಲೌಕಿಕ ವ್ಯಾಪಾರ ವಹಿವಾಟಿನ ಪರಿಭಾಷೆಯನ್ನೇ ಬಳಸಿ ಯಜಮಾನ ಮತ್ತು ಕೆಲಸಗಾರ ಇವರ ನಡುವಣ ಸಂಬಂಧವನ್ನು ಇಲ್ಲಿ ವಿವರಿಸಲಾಗಿದೆ ಸ್ವಾಮಿಯ ಭದ್ರ ಆಶ್ರಯದಲ್ಲಿ ತನ್ನ ಕ್ಷೇಮ ಅಡಗಿದೆ ಎಂಬ ಪ್ರಪತ್ತಿಭಾವ ಇಲ್ಲಿ ಬಿಂಬಿತವಾಗಿದೆ ತಮ್ಮ ಕಾಲದಲ್ಲಿ ವ್ಯಾವಹಾರಿಕವಾಗಿ ಬಳಕೆಯಲ್ಲಿದ್ದ ಪರ್ಷಿಯನ್–ಅರಾಬಿಕ್ ಶಬ್ದಗಳನ್ನು ಪುರಂದರದಾಸರು ಇಲ್ಲಿ ಸುಸೂತ್ರವಾಗಿ ಬಳಸಿದ್ದಾರೆ ]

ಮುಂಡಾಸು—ತಲೆಗೆ ಸುತ್ತುವ ಬಟ್ಟೆ ಅಥವಾ ತಲೆಯ ಮೇಲಿರಿಸಿಕೊಳ್ಳುವ ಟೊಪ್ಪಿಗೆ

ಪಾಪಾಸು—ಕಾಲಿಗೆ ತೊಡುವ ಮೆಟ್ಟು

ಕಲಮದಾನಿ—ಬರೆಯುವ ಸಾಧನವಾದ ಲೆಕ್ಕಣಿಕೆಯನ್ನು (ಕಲಮು) ಇರಿಸುವ ಸಂಚಿ ಅಥವಾ ಪಾತ್ರೆ (ದಾನಿ)

ಕತಬಿ—ಸಾಲದ ಪತ್ರ

ಮುಡುಪಿಯೊಳಗೆ—ಮುಡುಪು, ಹಣವನ್ನಿರಿಸಿಕೊಳ್ಳುವ ಚೀಲ, ಸಂಚಿ

ಕೈಜೀತ—ಪಡೆದುಕೊಂಡ ಸಂಬಳ

ತಿರುಗದ ಚೀಟಿ—ಎಂದಿಗೂ ತಿರಸ್ಕೃತವಾಗದ ವಾಗ್ದಾನಪತ್ರ.

ಕಾರ್ಪಣ್ಯ—ನಾಚಿಕೆ

ಮಂಡೆ ಅಡ್ಡಾಗಿ—ತಲೆ ತಗ್ಗಿಸಿ

ದಂಡಿಸಿ—ಕಾಲಿಗೆ ಎರಗಿಸಿಕೊಂಡು

ವೀಳ್ಯವ ಕೊಟ್ಟು—'ವೀಳೆಯಂ ಕೊಡು' ಎಂಬ ಪ್ರಯೋಗವು ಸಾಂಪ್ರದಾಯಿಕವಾಗಿ ಬರಮಾಡಿಕೊಳ್ಳುವುದು, ಮಾತುಕೊಡುವುದು, ನೇಮಿಸಿಕೊಳ್ಳುವುದು ಎಂಬರ್ಥದಲ್ಲಿ ಬರುತ್ತದೆ

ಕಾಂಬೋದಿ ಝಂಪೆ

ದಾಸನೆಂತಾಗುವೆನು ಧರೆಯೊಳಗೆ ನಾನು ಪ

ವಾಸುದೇವನಲಿ ಲೇಶ ಭಕುತಿ ಕಾಣೆ ಅ

ಗೂಟನಾಮವ ಹೊಡೆದು ಗಂಡು ತುಂಬಿಗೆ ಹಿಡಿದು
ಗೋಟಂಚು ಧೋತರ ಮಡಿಯನುಟ್ಟು
ದಾಟು ಕಾಲಿಡುತ ನಾ ಧರೆಯೊಳಗೆ ಬರಲೆನ್ನ
ಬೂಟಕತನ ನೋಡಿ ಭ್ರಮಿಸದಿರಿ ಜನರೆ ೧

ಅರ್ಥದಲ್ಲೇ ಮನಸು ಆಸಕ್ತವಾಗಿದ್ದು
ವ್ಯರ್ಥವಾಯಿತು ಜನ್ಮ ವಸುಧೆಯೊಳಗೆ
ಅರ್ತಿಯಿಂದಲಿ ಹರಿಯು ಅರ್ಚಿಸಿದ್ದಿಲ್ಲ ನಾ
ಸತ್ಯಶೌಚಗಳರಿಯೆ ಸಜ್ಜನರು ಕೇಳಿ ೨

ಇಂದಿರೇಶನ ಪೂಜೆ ಎಂದು ಮಾಡಿದ್ದಿಲ್ಲ
ಸಂಧ್ಯಾನ ಜಪತಪಗಳೊಂದನರಿಯೆ
ಒಂದು ಸಾಧನ ಕಾಣೆ ಪುರಂದರವಿಠಲನ
ದ್ವಂದ್ವ ಪಾದವ ನಂಬಿ ಅರಿತು ಭಜಿಸದಲೆ ೩

[ಹರಿದಾಸದೀಕ್ಷೆಯನ್ನು ತಳೆದಮೇಲೆ ಅದರ ಆದರ್ಶವನ್ನು ಮನಗಂಡು ಅದನ್ನು ಸಾಧಿಸಿಕೊಳ್ಳಲು ಬೇಕಾದ ಮನೋಧರ್ಮವನ್ನೂ, ಅದಕ್ಕೆ ಇರುವ ಅಡ್ಡಿ ಆತಂಕಗಳನ್ನೂ ಹೇಳಿ ತಮ್ಮ ಅಳಲನ್ನು ಇಲ್ಲಿ ತೋಡಿಕೊಂಡಿದ್ದಾರೆ ಹರಿದಾಸರ ವೇಷಧಾರಕರ ಸಂಖ್ಯೆ ಹೆಚ್ಚಾದ ಮಾತ್ರಕ್ಕೆ ಸಾಲದು ಒಳಗಿನ ಪರಿಕರಗಳಿಂದಲೂ ಹರಿದಾಸರು ಸಜ್ಜಿತರಾಗಬೇಕೆಂಬ ಆಶಯ ಪುರಂದರದಾಸರದು ]

ಗೂಟನಾಮ—ಭಾಗವತರೂ ಹರಿದಾಸರೂ ಧರಿಸುವ ದ್ವಾದಶನಾಮಗಳು (ಊರ್ಧ್ವಪುಂಡ್ರ)

ಗೋಟಂಚು ದೋತರ—ಗೋಟು (ಕೊರಟು) ಎಂದರೆ ಮರದ ಕಾಂಡ , ಅದರಂತೆ ದಪ್ಪವಾದ ಅಂಚುಳ್ಳ ಪಂಚೆ , ಸಾಮಾನ್ಯವಾಗಿ ವೈದಿಕರು ಉಡುವಂಥದು

ದಾಟು ಕಾಲಿಡುತ—ನಡೆಯುವಾಗ ನೆಲವನ್ನೇ ನೋಡಿಕೊಂಡು, ಕಾಲಿಡಬಾರದ ಸ್ಥಳಗಳನ್ನು ದಾಟಿಕೊಂಡು, ನಡೆಯುವುದು , ಇದೂ ವೈದಿಕರ ಅಬ್ಯಾಸ ಗಳಲ್ಲಿ ಒಂದು

ಬೂಟಕತನ—ವಂಚನೆ, ಸೋಗು, ಬೂಟಾಟಿಕೆ

ಅರ್ಥದಲ್ಲೇ—ಹಣದ ಸಂಪಾದನೆಯ ಕಡೆಯೇ

ಆರ್ತಿಯಿಂದಲಿ—ಹರಿಯ ಪ್ರಸಾದವಾಗಬೇಕೆಂಬ ಪ್ರೀತಿಯಿಂದ

ಸಂಧ್ಯಾನ—ಸಂಧ್ಯಾವಂದನ , ಹಗಲು-ಇರುಳುಗಳು ಕೂಡುವಾಗ (ಸಂಧ್ಯಾ) ಮಾಡಬೇಕಾದ ವಿಧಿ ಸಮ್ಯಕ್‌ಧ್ಯಾನ ಎಂದೂ ಆಗುತ್ತದೆ ಚೆನ್ನಾಗಿ ಧ್ಯಾನ ಮಾಡುವುದು

ದ್ವಂದ್ವಪಾದವ—ಪಾದದ್ವಂದ್ವವ



ಕಲ್ಯಾಣ ಅಟ್ಟ

ದಾರಿ ಯಾವುದಯ್ಯಾ—ವೈಕುಂಠಕೆ ದಾರಿ ತೋರಿಸಯ್ಯಾ ಪ

ದಾರಿ ಯಾವುದಯ್ಯಾ, ದಾರಿ ತೋರಿಸಯ್ಯಾ—ಆ
ಧಾರ ಮೂರುತಿ ನಿನ್ನ ಪಾದ ಸೇರುವುದಕ್ಕೆ ಅ

ಬಲು ಭವದನುಭವದಿ ಕತ್ತಲೆಯೊಳು
ಬಲು ಅಂಜುತೆ ನಡುಗಿ
ಬಳಲುತ್ತ ತಿರುಗಿದೆ ಹಾದಿಯು ಕಾಣದೆ
ಹೊಳೆವಂಥ ದಾರಿಯು ತೋರೊ ನಾರಾಯಣ ೧

ಪಾಪ ಪೂರ್ವದಲ್ಲಿ ಮಾಡಿದುದಕೆ
ಲೇಪವಾಗಿದೆ ಕರ್ಮ
ಈ ಪರಿಯಿಂದಲಿ ನಿನ್ನ ನೆನೆಸಿಕೊಂಬೆ
ಶ್ರೀಪತಿ ಸಲಹೆನ್ನ ಭೂಪನಾರಾಯಣ ೨

ಇನ್ನು ನಾ ಜನಿಸಲಾರೆ ಭೂಮಿಯ ಮೇಲೆ
ನಿನ್ನ ದಾಸನಾದೆನೊ
ಪನ್ನಗಶಯನ ಶ್ರೀ ಪುರಂದರವಿಠಲ
ಇನ್ನು ಪುಟ್ಟಿಸದಿರೊ ಎನ್ನ ನಾರಾಯಣ ೩

[ಹರಿದಾಸದೀಕ್ಷೆಯೇ ವೈಕುಂಠಕ್ಕೆ ದಾರಿ ಗುರುಕಾರುಣ್ಯದಿಂದ ಹರಿಯ ಒಲುಮೆ ದೊರೆತು ಸಂಸಾರವನ್ನು ದಾಟಿ ಮುಕ್ತಿಯನ್ನು ಪಡೆಯುವುದೇ ವೈಕುಂಠ ದೀಕ್ಷೆಯನ್ನು ಪಡೆದುಕೊಂಡಮೇಲೆ ಮಾಡಬೇಕಾದ ಸಾಧನೆಗಳತ್ತ ದಾಸರು ಇಲ್ಲಿ ಗಮನ ಹರಿಸಿದ್ದಾರೆ ]

ವೈಕುಂಠಕೆ—ಈ ಸಂಪ್ರದಾಯದಲ್ಲಿ ವೈಕುಂಠವೆಂಬುದು ನಾರಾಯಣನ (ವಿಕುಂಠನ) ನಿತ್ಯನಿವಾಸಸ್ಥಾನ ವೈಕುಂಠವೆಂಬುದು ಅಪ್ರಾಕೃತಲೋಕ, 'ದಿವ್ಯ, ನಿತ್ಯ, ಸನಾತನ, ಗುಣತ್ರಯ ವಿವರ್ಜಿತ' (ಪಾಂಚರಾತ್ರಾಗಮ) ಭೂಮಿಯಿಂದ

ಅಂತರಿಕ್ಷ, ಸ್ವರ್ಗ, ಮಹರ್ಲೋಕ, ಜನೋಲೋಕ, ತಪೋಲೋಕ, ಸತ್ಯಲೋಕ ಗಳನ್ನು ಮೀರಿರುವ ಈ ಎಡೆಯಲ್ಲಿ ವಾಸಿಸುವ ಮುಕ್ತರಿಗೆ ಜ್ಞಾನ, ಭಕ್ತಿ, ವಿರಕ್ತಿ ಇವು ಮೂರೂ ಎಣೆಯಿಲ್ಲದೆ, ಕೊರತೆಯಿಲ್ಲದೆ ಇರುತ್ತವೆ ಜೀವರು ಸ್ವಸ್ವರೂಪದಿಂದ ಈ ಲೋಕವನ್ನು ಹೊಂದಿ ಅಲ್ಲಿ ಹರಿಯ ಸಾನ್ನಿಧ್ಯದಿಂದ ಅಲೌಕಿಕವಾದ, ನಿರವಧಿಕವಾದ ಸುಖವನ್ನು ಪಡೆಯುವರು ಅವರಿಗೆ ಭ್ರಾಂತಿ, ಅಜ್ಞಾನ ಮೊದಲಾದ ದೋಷಗಳು ಸ್ವಲ್ಪವೂ ಇರುವುದಿಲ್ಲ 'ಪಂಚಾಶತ್ ಕೋಟಿ ಬ್ರಹ್ಮಾಂಡ ಖರ್ಪರಕ್ಕೆ ಹತ್ತಿರುವ ಈ ಲೋಕವೇ' ಎಲ್ಲ ಲೋಕಗಳ ಸಂಪತ್ತಿಗೆ ಆಧಾರವಾದುದು ನೋಡಿ ವಾದಿರಾಜಸ್ವಾಮಿಗಳ 'ವೈಕುಂಠ ವರ್ಣನೆ'

ಹೊಳೆವಂಥ ದಾರಿ—ಅರ್ಚಿರಾದಿಮಾರ್ಗ ಮರ್ತ್ಯರು ಭವದಿಂದ ಉತ್ತರೋತ್ತರ ಸಾಗುವ ದಾರಿಗಳು ಎರಡು—ಹೊಗೆಯಂತೆ ಕಪ್ಪಿಟ್ಟ ದಾರಿ (ಧೂಮಾದಿ ಮಾರ್ಗ), ಇಲ್ಲಿ ಮಾಡಿದ ಶುಭಾಶುಭಕರ್ಮಗಳಿಂದ ಪಿತೃಲೋಕಕ್ಕೆ ಒಯ್ಯುವುದು, ಸೂರ್ಯನ ಕಿರಣದಂತೆ ಹೊಳೆಯುವ ದಾರಿ (ಅರ್ಚಿರಾದಿ ಮಾರ್ಗ), ಶುಭಕರ್ಮಗಳಿಂದ ಮತ್ತು ಜ್ಞಾನದಿಂದ ದೇವಲೋಕಗಳಿಗೆ ಸಾಗಿ ಕಡೆಯಲ್ಲಿ ಮುಕ್ತಿಯನ್ನು ಕಾಣಿಸುವ ದಾರಿ ಮೊದಲನೆಯದನ್ನು ಪಿತೃಯಾನವೆಂದೂ ಎರಡನೆಯದನ್ನು ದೇವಯಾನವೆಂದೂ ಕರೆಯುವ ವಾಡಿಕೆಯಿದೆ



ಯರುಕುಲ ಕಾಂಬೋದಿ ತ್ರಿವಿಡೆ

ನಿನ್ನ ದಾಸನಾದೆ ನಾನು ಪ

ಎನ್ನ ಮನ್ನಿಸಿ ಮಮತೆಯ ಮಾಡಯ್ಯ ನೀನು ಅ

ಜನನಿಯ ಗರ್ಭದೊಳು ನಾನು
ಬಲು ದೀನತ್ವದಿಂದ ತೊಳಲಿ ಬಂದವನು
ಚಿನುಮಯಾನಂದಾತ್ಮಕನು ವಿ
ನನುಮಾನವಿಲ್ಲದೆ ನಿನ್ನ ನಂಬಿದೆನು ೧

ಹಲವು ಜನ್ಮದಿ ತೊಳಲಿದೆನು ಬಲು
ಬಳಲಿದೆನು ಸಾಕೋ ಜನಿಸಲಾರೆನು ಇನ್ನು
ನಳಿನಾಕ್ಷ ನಿನ್ನನೇ ನಂಬಿದೆನು
ಎನ್ನ ಬಳಲಿಸುವುದು ತರವಲ್ಲ ಇದೇನು ೨

ಮಲಮೂತ್ರ ದೇಹದೊಳ್ ಬಂದು ಬಲು
ಅರಸಿದೆ ನಿನ್ನ ಕಾಣದೆ ದೇಹ ನೊಂದು
ಲಲನೆಗಕ್ಷಯವಿತ್ತೆ ಎಂದು ನಿನ್ನ
ಒಳಗಿನ ಕರುಣದ ಕಂದ ನಾನೆಂದು ೩

ಮಂದಮತಿಯೊಳಗಾನು ಬಲು
ದಂದುಗದಲಿ ಸಿಲುಕಿ ನೊಂದೆನೊ ನಾನು
ತಂದೆತಾಯಿಯೆಲ್ಲವು ನೀನು ಹೀಗೆ
ಎಂದು ನೇಮಿಸು ಎನಗೊಂದು ದಾರಿಯನು ೪

ಹಿಂದಿನ ಜನ್ಮವ ಮರೆತು ಎನ್ನ
ಅಂತರಂಗವು ಕರಗಿತು ನಿನ್ನನೆ ಮರೆತು
ಚಿಂತೆಗಳೆಲ್ಲವ ತೊರೆದು ನಾ ನಿ
ಶ್ಚಿಂತನಾದೆ ನಿನ್ನ ದಾಸರೊಳ್ ಬೆರೆತು ೫

ಸಾರಿ ಪೇಳುವೆ ಒಂದು ಸೊಲ್ಲ ಇದ
ನರಿತು ತಿಳಿದುಕೊಳ್ಳಿರಿ ನೀವೆಲ್ಲ
ನಾರಾಯಣನಲ್ಲದಿಲ್ಲ ಹೀಗೆ
ನಾರುತಿದೆ ವೇದ ಶಾಸ್ತ್ರಂಗಳೆಲ್ಲ ೬

ಮರೆತೆನೋ ನಿನ್ನ ನಾಮವನು ಜಿಹ್ವೆಗೆ
ಬರೆದು ಬೋಧಿಸೋ ನಿನ್ನ ದಿವ್ಯ ನಾಮವನು
ಶರಣುಪೊಕ್ಕವರ ಕಾಯುವನು
ನಮ್ಮ ವರದ ಪುರಂದರವಿಠಲ ಇದೇನು ೭

[ಹರಿದಾಸದೀಕ್ಷೆಯನ್ನು ವ್ಯಾಸತೀರ್ಥರಿಂದ ಪಡೆದುಕೊಂಡ ತರುಣದಲ್ಲಿ ರಚಿಸಿದ ಪದವೆಂದು ತೋರುತ್ತದೆ ]

ಚಿನುಮಯಾನಂದಾತ್ಮಕನು —ನೀನೇ ಚಿನ್ಮಯ, ಆನಂದಸ್ವರೂಪನೆಂದು ಯಾವ ಸಂಶಯವೂ ಇಲ್ಲದಂತೆ ನಂಬಿದೆ

ನಳಿನಾಕ್ಷ—ತಾವರೆಗಣ್ಣಿನವ , ನಾರಾಯಣ

ದೇಹ ನೊಂದು—ಮೈಯಲ್ಲಿ ಕಷ್ಟವನ್ನು ತಂದುಕೊಂಡು, ಕಾಯಕ್ಲೇಶದಿಂದ

ಲಲನೆಗಕ್ಷಯವಿತ್ತೆ—ದ್ರೌಪದಿಗೆ ದುರ್ವಾಸಾತಿಥ್ಯದ ಸಂದರ್ಭದಲ್ಲಿ ಅಕ್ಷಯ ಪಾತ್ರೆಯನ್ನೂ, ದುಃಶಾಸನನಿಂದ ಅವಮಾನವಾಗುವಾಗ ಅಕ್ಷಯವಸ್ತ್ರವನ್ನೂ ಕೊಟ್ಟವನು, ಕೃಷ್ಣ

ದಂದುಗ—ಕಷ್ಟನಿಷ್ಠೂರಗಳಿಗೆ ಒಳಗಾಗು (ದಂದುಗಗೊಳ್)

ನೇಮಿಸು—ಭಕ್ತನನ್ನಾಗಿ ಒಪ್ಪಿಕೊಂಡು ನನಗೆ ತಕ್ಕಂಥ ದಾರಿಯನ್ನು ತೋರಿಸು

ನಾರಾಯಣನಲ್ಲದಿಲ್ಲ—ನಾರಾಯಣನನ್ನು ಬಿಟ್ಟು ಮುಕ್ತಿಯನ್ನು ಕೊಡುವಂಥ ದೈವ ಬೇರೊಂದಿರದು

ಶರಣುಪೊಕ್ಕವರ—ನೀನೇ ಗತಿಯೆಂದು ನಂಬಿ ಬಂದವರನ್ನು

ಮುಖಾರಿ ಝಂಪ

ವಾಸುದೇವನ ನಾಮಾವಳಿಯ ಕ್ಲುಪ್ತಿಯನು
ವ್ಯಾಸರಾಯರ ದಯದಿಂದ ಬಣ್ಣಿಪೆನು ಪ

ಕೇದಾರ ರಾಮೇಶ್ವರ ಕಂಚಿ ಭೂತಳದ
ಪಾದಾರವಿಂದ ಕ್ಷೇತ್ರ ಪ್ರತಿ ಕ್ಷೇತ್ರವು
ಆದರದಿ ಲಕ್ಷದಿಪ್ಪತ್ತೈದುಸಾವಿರ ಕೃತಿಯ
ವೇದ ಶಾಸ್ತ್ರ ಪುರಾಣ ಸಮ್ಮತಿಯಿಂದ ೧

ಮಧ್ವರಾಯರ ಮಹಿಮೆ ಮಹಗುರು ಪರಂಪರೆ ಪ್ರ
ಸಿದ್ಧ ವ್ಯಾಸರಾಯರ ಪರಿಯಂತವು
ಶುದ್ಧ ತಾರತಮ್ಯಗಳು ತಂತ್ರಸಾರೋಕ್ತದಲಿ
ಉದ್ಧರಿಸಿದೈದು ಸಾವಿರವ ಪೇಳಿದೆನು ೨

ಬ್ರಹ್ಮಲೋಕ ಕೈಲಾಸ ಭರದಿ ದಿಕ್ಪಾಲಕರ
ಪೆರ್ಮೆ ತೊಂಭತ್ತುಸಾವಿರದಿ ಪೇಳಿದೆನು
ಸಮ್ಮತದಿ ಹಲವು ಕಥಾಸಾರ ತೊಂಭತ್ತುಸಾವಿರ
ವೊಮ್ಮನದಿ ಪೇಳಿದೆನು ಕೇಳಿ ಜನರು ೩

ಅವರವರ ಮೂರ್ತಿ ಧ್ಯಾನ ಅವರವರ ಕೀರ್ತಿ ಮಾಸ
ವಿವರದಿಂದಲಿ ನಾ ನಿಮಗೆ ವಿಸ್ತರಿಸಿದನು
ಘನತೆ ಅಗಣಿತ ಗಂಡಕಿಯ ಶಿಲಾಮೂರ್ತಿ
ಅನಘ ಕಲ್ಯಾಣ ಕಥೆ ಅರವತ್ತುಸಾವಿರ ೪

ಆಹ್ನಿಕ ಗುಣವು ಜನ್ಮಾಷ್ಟಮಿ ಏಕಾದಶಿಯ
ನಿರ್ಣಯವನು ಶ್ರುತಿ ಸ್ಮೃತಿ ಸಹಿತದಿ
ವರ್ಣಿಸಿದೆ ಕ್ಷೀರಾಬ್ಧಿಶಯನ ಅಹೋಬಲ ನರ
ಸಿಂಹಮೂರ್ತಿಗಳ ಶ್ರೀ ನಾಮಗಳನು ೫

ಸುಳಾದಿ ಅರವತ್ತು ಸಾವಿರ ಬಹುತರ ನಾಮಾ
ವಳಿಯು ಇಪ್ಪತ್ತೈದು ಸಾವಿರವಾಗಿದೆ
ತಿಳಿದು ಶ್ವೇತ ದ್ವೀಪ ಅನಂತಾಸನ ವೈಕುಂಠ
ಸಲೆ ಶೇಷನ ಚರಿತ್ರೆಯನು ಪೇಳಿದೆನು ೬

ಇಂತು ನಾಲ್ಕುಲಕ್ಷ ಎಪ್ಪತ್ತೈದು ಸಾವಿರ ಕೃತಿಯು
ಕಂತುಜನಕನ ನಾಮ ಘನ ಮಹಿಮೆಯು
ಸಂತಸದಿಂದ ಶ್ರುತಿ ಸ್ಮೃತಿ ಸಮ್ಮತದಿಂದ
ಪುರಂದರವಿಠಲ ವ್ಯಾಸಮುನಿಗಳು ಪೇಳಿಸಿದರು

[ವ್ಯಾಸರಾಯಸ್ವಾಮಿಗಳಿಂದ ಹರಿದಾಸದೀಕ್ಷೆಯನ್ನೂ 'ಪುರಂದರವಿಠಲ'ನೆಂಬ ಕಾವ್ಯಾಂಕಿತವನ್ನೂ ಪಡೆದುಕೊಂಡಮೇಲೆ ಪುರಂದರದಾಸರು ರಚಿಸಿದ ಕೃತಿಗಳ ವಿವರಣೆ, ವಿಭಜನೆ ಇಲ್ಲಿದೆ ಇಲ್ಲಿ ತಮ್ಮ ಕೃತಿಗಳ ಮೊತ್ತವನ್ನು ಒಂದುಲಕ್ಷ ಇಪ್ಪತ್ತೈದು ಸಾವಿರವೆಂದು ಹೇಳಿದ್ದಾರೆ ಇದು ಪುರಂದರದಾಸರಿಗೆ ಒದಗಿದ ಹರಿದಾಸ ದೀಕ್ಷೆಗೆ ದೃಷ್ಟಫಲ ]



ಧನ್ಯಾಸಿ ಏಕ

ಅಕ್ಕಾ ಅಕಟಕಟೆನ್ನ ಗಂಡ ವೈಷ್ಣವನಾದ ಕಾರಣ
ರಕ್ಕಸಾಂತಕನ ಭಜಿಸಿ ಬರಿದಾಯ್ತೆನ್ನ ಬದುಕು ಪ

ಅಡ್ಡ ಗಂಧವನಿಟ್ಟುಕೊಂಡು ರುದ್ರದೇವರ ಭಜಿಸುವಾಗ
ಬಡ್ಡಿಗೆ ಹಣವ ಕೊಟ್ಟು ಸುಖದೊಳಿದ್ದೆವು
ಅಡ್ಡ ಗಂಧಬಿಟ್ಟು ದೊಡ್ಡ ನಾಮ ಮುದ್ರೆ ಧರಿಸಲಾಗಿ
ಬಡ್ಡಿ ಬಾಕಿ ಹೋಗಿ ಬಾಯ್ಗೆ ಗಡ್ಡೆ ಬಿದ್ದಿತು ೧

ಹೆಡಿಗೆ ತುಂಬ ದೇವರು ನಮ್ಮ ಮನೆಯೊಳಗಿರುವಾಗ
ಒಡವೆ ವಸ್ತು ಇಟ್ಟುಕೊಂಡು ಸುಖದೊಳಿದ್ದೆವು
ಒಡೆಯ ಹರಿಯೊಬ್ಬ ಸರ್ವರೊಡೆಯನೆಂದು ಭಜಿಸಲಾಗಿ
ಒಡವೆ ಹೋಗಿ ಬಡತನ ಗಡನೆ ಬಂದಿತು ೨

ಮಿತ್ರೆ ಕೇಳೆ ನಮ್ಮ ಮನೆ ಮದುವೆ ಮುಂಜಿ ಕಾಲದಲ್ಲಿ
ಆರ್ತಿಯಿಂದ ಒಮ್ಮೆ ಕಚ್ಚೆ ಕಟ್ಟುತ್ತಿದ್ದೆವು
ನಿತ್ಯ ಕಚ್ಚೆಯನ್ನು ಹಾಕಿ ಸೀರೆಯನ್ನು ಉಡಲಾಗಿ
ವ್ಯರ್ಥವಾಗಿ ಬಾಳುವೆ ಬದುಕು ಹಾಳಾಗ್ಹೋಯಿತು ೩

ಕಾರ ಹುಣ್ಣಿಮೆ ಕಾಲದಲ್ಲಿ ಮೂಲಂಗಿಗೆ ಬೆಳ್ಳುಳ್ಳಿಕ್ಕಿ
ತೋರಿದರೆ ನಮ್ಮ ದೇವರು ವರವ ಕೊಡುತಿದ್ದ
ಈ ವೀರ ವೈಷ್ಣವಗೆ ಕೊಟ್ಟು ತ್ರಾಹಿ ಎನಲಾಗಿ
ಸೇರಿದಾ ಬದುಕು ಎಲ್ಲ ಹಾರಿ ಹೋಯಿತು ೪

ಎಲ್ಲಮ್ಮ ಯಕಲಾತಿ ಉಡ್ಡಿ ಮೈಲಾರ ದೇವರ
ಕಲ್ಲೆಂದು ಭಜಿಪಾಗ ಕ್ಷೇಮವಿತ್ತೆ
ಬಲ್ಲಿದ ಪುರಂದರವಿಠಲನ ಭಜಿಸಲು
ಸಲ್ಲದ ವೈಕುಂಠ ಸಲ್ಲುವಂತಾಯಿತು ೫

[ಈ ಪದ ವೈಷ್ಣವ ಭಾಗವತರ ಹಿರಿಮೆಯನ್ನು ಮಾರ್ಮಿಕವಾಗಿ ಕಾಣಿಸುತ್ತದೆ, ಅನ್ಯನಿಷ್ಠೆಯ ನಿಂದನೆಯೂ ಇದೆ ಈ ಪದವು ಪುರಂದರದಾಸರದ್ದೇ ಎಂಬ ನಿಶ್ಚಯವಿಲ್ಲ 'ಅಷ್ಟಗಂಧ ದವರೆನ್ನುವ ನಿರ್ದೇಶನ ಸ್ಮಾರ್ತ ಸಂಪ್ರದಾಯದವರಿಗೆ ಒದಗಿದ್ದು ಈಚೆಗೆ ಇದು ಪುರಂದರದಾಸರದ್ದೇ ಹೌದಾದರೆ ಅವರು ಹರಿದಾಸದೀಕ್ಷ ಯನ್ನು ಪಡೆಸುವ ಮೊದಲು ಅವರ ಧರ್ಮ ವೃತ್ತಿ, ಆಚಾರ, ನಂಬಿಕೆಗಳನ್ನು ಕುರಿತ ಪ್ರಸ್ತಾಪ ಇಲ್ಲಿ ಬರುತ್ತದೆ ]

ಗಡ್ಡೆ—ಮಣ್ಣಿನ ಉಂಡೆ

ಹೆಡಿಗೆ—ಹೆಡಗೆ, ಬುಟ್ಟಿ ಬಿದಿರಿನ ಬುಟ್ಟಿಯಲ್ಲಿ ದೇವರ ಮೂರ್ತಿಗಳನ್ನಿರಿಸಿ ಕೊಂಡು ಪೂಜೆಯ ಕಾಲದಲ್ಲಿ ಅವನ್ನೆಲ್ಲ ಹೊರಕ್ಕೆ ತೆಗೆದು ಪೂಜೆ ಸಲ್ಲಿಸುವ ವಾಡಿಕೆಯನ್ನು ಇಲ್ಲಿ ಉಲ್ಲೇಖಿಸಿದ್ದಾರೆ ಹಲವಾರು ದೇವರುಗಳನ್ನು ಕ್ಷುದ್ರ ಫಲಪ್ರದಗಳಾಗಿ ಪೂಜಿಸುವ ಮನೋಧರ್ಮ ಇಲ್ಲಿನ ತಾತ್ಪರ್ಯ

ಗಡನೆ—ಗಡಗಡನೆ, ಬೇಗ

ಆರ್ತಿಯಿಂದ ಒಮ್ಮೆ ಕಚ್ಚೆ—ಬಾಗವತ ಸಂಪ್ರದಾಯದ ಸ್ಮಾರ್ತರಲ್ಲಿ ಹೆಂಗಸರು ವಿಶೇಷ ಸಂದರ್ಭಗಳಲ್ಲಿ ಮಾತ್ರ ಹೊರ ಕಚ್ಚೆಯನ್ನು ಹಾಕಿ ಸೀರೆಯನ್ನುಡು ತ್ತಾರೆ, ಉಳಿದಂತೆ ಒಳಕಚ್ಚೆ ವೈಷ್ಣವ ಭಾಗವತರಾದರೋ ಪ್ರತಿದಿನವೂ ಹೊರಕಚ್ಚೆಯ ಸೀರೆಯನ್ನೇ ಉಡುವರು ಆರ್ತಿಯಿಂದ—ಶ್ರದ್ಧೆಯಿಂದ, **ಪ್ರೀತಿಯಿಂದ**

ತ್ರಾಹಿ ಎನಲಾಗಿ—ಹರಿಯನ್ನು 'ಕಾಪಾಡು' ಎಂದು ಮಾತ್ರ ಬೇಡಿಕೊಳ್ಳಲಾಗಿ, ಎಂದರೆ ದೇವರಿಗೆ ಎದೆಯನ್ನಿಟ್ಟು ಅದಕ್ಕೆ ಪ್ರತಿಫಲವಾಗಿ ಕೋರಿಕೆಯನ್ನು ತೀರಿಸು ಎನ್ನದೆ, ಶರಣು ಹೊಕ್ಕರೆ ಸಾಕು ಎನ್ನುವ ಹರಿದಾಸ ಮನೋಭಾವ

ಸೇರಿದಾ ಬದುಕು—ಇಲ್ಲಿಯವರೆಗೆ ಬಾಳಿದ ಬದುಕು

ಎಲ್ಲಮ್ಮ —ಸಣ್ಣಪುಟ್ಟ ಗ್ರಾಮದೇವತೆಗಳು, ಅವರ ಶಿಲಾಮೂರ್ತಿಗಳನ್ನೇ ದೇವ ರೆಂದು ಬಗೆದು ಪೂಜಿಸುವಾಗ

ಸಲ್ಲದ ವೈಕುಂಠ—ಬೇಗ ಹೊಂದಲಾಗದ ವೈಕುಂಠ ಲೋಕ

## ೨೬

ಸೌರಾಷ್ಟ್ರ — ಆದಿ

ಪುಂಡೆ ಬೋಳಾದ ಸಂನ್ಯಾಸಿಯು ಮನೆಬಂದ್ಹೊಕ್ಕನಮ್ಮ ಎನ್ನ — ಪ

ಗಂಡನ ಕಿವಿಯೂದಿ ಮರಳು ಮಾಡಿ ಮನಗೊಂಡನಮ್ಮ — ಅ

ಮಡಿಯ ಮಾಡಿ ಮೈತೊಳೆದು ನಾವುಣ್ಣಲಾರೆವಮ್ಮ
ನಡತೆ ತಪ್ಪಿತೆಂದೊಬ್ಬರು ನಮ್ಮನು ದಂಡಿಸಿದ್ದಿಲ್ಲವಮ್ಮ
ನುಡಿಯಲೆಷ್ಟೆಂದ ವೈಷ್ಣವತನ ಬೇಸರವಿಟ್ಟಿತಮ್ಮ
ಕಡು ಮೂರ್ಖ ಸಂನ್ಯಾಸಿ ಬಂದಿವ ಬಿಡಿಸಿದ ನೋಡಿರಮ್ಮ ೧

ಮುತ್ತೈದೇರು ನಾವು ಹಣೆತುಂಬ ಕುಂಕುಮ ಇಡುವೆವಮ್ಮ ನಾವು
ಎತ್ತ ಹೋದರೆ ತುತ್ತು ಬುತ್ತಿಯ ಕೊಂಡೊಯ್ದು ಉಂಬೆವಮ್ಮ
ತೊತ್ತು ಬಂಟರ ನೀರಲ್ಲದೆ ಮತ್ತೊಂದು ಅರಿಯೆವಮ್ಮ ಈ
ಮೃತ್ಯು ಸಂನ್ಯಾಸಿ ಬಂದಿವನೆಲ್ಲ ಬಿಡಿಸಿದ ನೋಡಿರಮ್ಮ ೨

ಬೆಳ್ಳುಳ್ಳಿ ನುಗ್ಗೆಕಾಯಿ ಕವಡಿಕಾಯಿಗಳು ತಿಂಬೆವಮ್ಮ
ಮುಲ್ಲಂಗಿಪಲ್ಲೆ ಗಜ್ಜರಿ ಪುಂಡೆಪಲ್ಲೆವು ಸಾಲದಮ್ಮ
ನುಳ್ಳು ಯಾಕಾಡಲಿ ಗಂಡಸರು ತಂಗಳುಂಬೋರಮ್ಮ
ಇಲ್ಲಿಗೆ ಆಯಿತಮ್ಮಾಚಾರವೆನಬೇಡಿ ಕೇಳಿರಮ್ಮ ೩

ಏಕಾದಶಿದಿನ ಅವರಗುಗ್ಗುರಿಗಳು ತಿಂಬೆವಮ್ಮ ಮೇಲೆ
ಬೇಕಾದರೆ ನಾಲ್ಕು ದೋಸೆಯ ಮಾಡಿ ತಿಂಬೆವಮ್ಮ
ಸಾಕಾಗದಿದ್ದರೆ ಮೊಸರು ಮಜ್ಜಿಗೆಗಳ ಕುಡಿವೆವಮ್ಮ ಈ
ಕಾಕು ಸಂನ್ಯಾಸಿ ಬಂದವನೆಲ್ಲ ಬಿಡಿಸಿದ ನೋಡಿರಮ್ಮ ೪

ಹಸನಾದ ಪರ್ವಕಾಲಗಳಲಿ ಪತಿಸಂಗವಹುದಮ್ಮ
ಬಸಿರಾದರು ಎನ್ನ ಪ್ರಸವಾಗೊ ಪರಿಯಂತ ಬಿಡನೇಯಮ್ಮ
ಹುಸಿಯಿನ್ನೇಕಾಡಲಿ ಗಂಡಸುತನ ಗಟ್ಟ್ಯಾಗಿಹುದಮ್ಮ ಅದರ
ದೆಸೆಯಿಂದ ನಾಲ್ಕು ಮಕ್ಕಳ ಬೇಗ ಹಡದೆನಮ್ಮ ೫

ದಶಮಿ ಏಕಾದಶಿ ದ್ವಾದಶಿಯೆಂಬೋದು ಅರಿಯೆವಮ್ಮ ಹರಿ
ಹಸರಲಿ ಪಕ್ಷಕ್ಕೊಂದುಪವಾಸವವರಿಗೆ ದೊರಕಿತಮ್ಮ
ವಸುಧೆಯೊಳಗೆ ಮಧ್ವಮತವೆಂಬೋದು ಸಿದ್ಧವಾಯಿತಮ್ಮ
ಪುಸಿಯಲ್ಲ ಪುರಾಣ ಪುಣ್ಯಕಥೆಗಳು ಹೆಚ್ಚಿದವಮ್ಮ ೬

ಅನ್ಯದೇವರಿಗೆ ನೈವೇದ್ಯವಿಟ್ಟುಂಬೋದು ಅರಿಯೆವಮ್ಮ
ಹನ್ನೊಂದು ಕಾಸಾಗಿ ತಾಗೀಗ ಕಾಸು ಹೊನ್ನಾಯಿತಮ್ಮ
ನಿನ್ನಾಣೆಲೇ ಸಖಿವೊಗತನ ಕೆಟ್ಟು ಹೋಯಿತಮ್ಮ
ಚೆನ್ನ ಪುರಂದರವಿಠಲನ ಬಜಿಸಿದ ಧರ್ಮವಮ್ಮ ೭

[ಈ ಪದವೂ ಪುರಂದರದಾಸರ ಪೂರ್ವಜೀವನವನ್ನು ಪ್ರಸ್ತಾಪಿಸುವುದೆಂದು ಪ್ರತೀತಿ ಹರಿದಾಸರಾಗುವ ಮೊದಲು ಅವರೂ ಅವರ ಮನೆಯವರೂ ದಿನದಿನದ ಆಚಾರದಲ್ಲಿ ಅತಿಯಾದ ಕಟ್ಟುಕಟ್ಟಲೆಗಳನ್ನು ಕಂಡರಿಯರೆಂದೂ, ಹರಿದಾಸದೀಕ್ಷೆ ವಹಿಸಿದ ಮೇಲೆ ಬದುಕು ತುಂಬ ಕಟ್ಟುನಿಟ್ಟಾಯಿತೆಂದೂ ಪದದ ತಾತ್ಪರ್ಯ ದಾಸರ ಹೆಂಡತಿಯ ಬಾಯಲ್ಲಿ ಈ ಪದವನ್ನು ಹೇಳಿಸಿದ್ದಾರೆ ]

ಮಂಡೆ ಬೋಳಾದ ಸಂನ್ಯಾಸಿಯು—ವ್ಯಾಸರಾಯಸ್ವಾಮಿಗಳು

ಕಿವಿಯೂದಿ—ಕರ್ಣೋಪದೇಶಮಾಡಿ , ಮೂಲಮಂತ್ರೋದೇಶವನ್ನು ಕೊಟ್ಟು

ತುತ್ತು ಬುತ್ತಿಯು—ಅನ್ನದ ಗಂಟನ್ನು

ತೊತ್ತು ಬಂಟರು—ಮನೆಗೆಲಸಮಾಡಲು ಇಟ್ಟುಕೊಂಡಿರುವವರು

ಪರ್ವಕಾಲಗಳಲಿ—ಹಬ್ಬಹರಿದಿನಗಳಲ್ಲಿ , ಪಕ್ಷದ ಹುಣ್ಣಿಮೆ, ಅಮಾವಾಸ್ಯೆ, ಅಷ್ಟಮಿ, ಚತುರ್ದಶೀ ಈ ದಿನಗಳಲ್ಲಿ, ಗ್ರಹಣ ಮೊದಲಾದ ಕಾಲಗಳಲ್ಲಿ

ಹರಿ ಹೆಸರಲಿ —ಪ್ರತಿಯೊಂದು ಪಕ್ಷದಲ್ಲೂ ಹನ್ನೊಂದನೆಯ ದಿನವನ್ನು (ಏಕಾದಶಿ) ಹರಿದಿನವನ್ನಾಗಿ ಬಗೆದು ಅಂದು ಉಪವಾಸ, ರಾತ್ರಿ ಜಾಗರಣೆ ಮೊದಲಾದುವುದನ್ನು ನಡೆಸುವುದು ವೈಷ್ಣವಭಾಗವತರಿಗೆ ಮುಖ್ಯವಾದ ವಿಧಿ

ಕಾಸಾಗಿ—ಕಾಸು ಎಂದರೆ ಸಣ್ಣ ತಾಮ್ರದ ನಾಣ್ಯ , ಅಲ್ಪ ಬೆಲೆಯದು

ತಾಗೀಗ—ಕೂಡಿಕೊಂಡು

ಹೊನ್ನು—ಬಂಗಾರದ ನಾಣ್ಯ ; ಬಲು ಬೆಲೆಬಾಳುವುದು.

ವೊಗತನ—ಒಗತನ , ಗಂಡಹೆಂಡಿರು ಅನ್ಯೋನ್ಯವಾಗಿ ಬಾಳುವುದು

ನಾದನಾಮಕ್ರಿಯೆ ಅಟ್ಟ

ತಾಳಿಯು ಹರಿದು ಬಿಸಾಟೆ ಇಂಥ
ಕೀಳು ದೇವತೆಗಳ ಹೆಸರಲ್ಲಿ ಕಟ್ಟಿದ ಪ

ಒಡತಿಯೆಲ್ಲಮ್ಮನೆಂದು ಇಲ್ಲದ್ದರಿಕೆ ಹೊತ್ತು
ಸಿಡಿಯಾ ಊರಿಸಿಕೊಂಡು ಜೋಲಾಡುವೆ
ಕಡು ಕೋಪದಿಂದೆಮನವರು ಶಿಕ್ಷಿಸಲು ನಿ
ನ್ನೊಡನೆ ಬಂದಾಗ ರಕ್ಷಿಸುವಳೆ ಮೂಳಿ ೧

ಹೊಸ ನವಣೆಯು ಹುಗ್ಗಿ ಹೊಸ್ತಿಲ್ಹುಣ್ಣಿಮೆದಿನ
ಹಸನಾಗಿ ಮಾದಿ ಹೊಸ್ತಿಲ ಪೂಜೆಯು
ನಿಶಿಯಲಿ ಗೆಯ್ವುದು ತರವಲ್ಲ ಇದರಿಂದ
ಅಸಿಪತ್ರವನದಲ್ಲಿ ಬಳಲುವೆ ೨

ಬನದ ಹುಣ್ಣಿಮು ದಿನ ನೂರೆಂಟು ಪಲ್ಯಗ
ಳನು ಮಾಡಿ ಭಕ್ತಿಯಿಂ ಪೂಜಿಸುವೆ
ದಿನಪನ ಸುತನ ದೂತರು ಎಳೆದೊಯ್ವಾಗ
ಬನದ ಶಂಕರಿ ಕಾಯಲರಿವಳೆ ಮೂಳಿ ೩

ಚಂದಮ್ಮನ್ಹೆಸರಿಟ್ಟಲಂಕಾರಗಳ ಮಾಡಿ
ನಂದನವ ನೋಡಿ ಸುಖಿವಡುವ
ಮುಂದುಗಾಣದೆ ಎಳೆದೊಯ್ದೆಮಪುರದೊಳು
ಕೊಂದರೆಂಬುದು ಕೇಳಿ ತಿಳಿಯಲಿಲ್ಲವೆ ಮೂಳಿ ೪

ಭಾರತದ್ಹುಣ್ಣಿಮೆದಿನ ದೇವತೆಯು ಮಾಡಿ
ಹೂರಣದಾರತಿಯನು ಬೆಳಗಿ
ಸೀರೆ ಕಳೆದು ತೊಪ್ಪಲುಡುವುದುಚಿತವಲ್ಲ
ರೌರವನರಕಕಯ್ದುವೆ ಕೇಳೆ ಮೂಳಿ ೫

ದುರುಳೆ ಭವಾನಿಯು ಬಿರುದೆಂದು ಕವಡೆಯ
ಸರ ಕಂಠದಲಿ ಕಟ್ಟಿ ಕಮುರನುಟ್ಟು
ಭರದಲ್ಲಿ ಹಡಗಿಲಿ ಕಡೆಯಾಗದಲೆ ವೈ
ತರಣಿ ನರಕ ನಿನಗಹುದು ಮೂಳಿ ೬

ಚೆನ್ನಾಗಿ ನಾಗರ ಉಪವಾಸವನು ಮಾಡಿ
ಮಣ್ಣು ಹುತ್ತಿಗೆ ಹಾಲು ಎರೆದು ಬರುವೆ
ವನಜಾಪ್ತನ ಪುತ್ರನಲ್ಲಿ ದಂಡಿಸುವಾಗ
ನಿನ್ನ ನಾಗರ ಮಾತಾಡುವನೇನೆ ಮೂಳಿ ೭

ಕಂಚಿನ ಗಡಿಗೆ ಸೌಭಾಗ್ಯ ಕೊಡುವುದೆಂದು
ಅರ್ಚಿಸುವೆಲೆ ನೀ ಮಾಡುವ ತಪ್ಪಿಗೆ
ಕಿಚ್ಚಾಗಿ ಕಾಲನಾಳುಗಳು ನಿನ್ನನು ಬಹು
ನುಚ್ಚು ನುಚ್ಚು ಮಾಡಿ ಕೊಲ್ವರೆ ಮೂಳಿ ೮

ಸಿರಿ ಬ್ರಹ್ಮಾದಿಗಳೊಡೆಯನು ಹರಿಯಿರಲಾಗಿ
ಹಿರಿಯನೊಡೆಯನೆಂದು ಕಲ್ಪಿಸುತ
ಸರತೊಟ್ಟಿಲೇರಿಸಿ ಪೆಸರಿಟ್ಟು ಕರೆವೆ ನಿ
ನ್ನವರೆ ಯಮಕಿಂಕರರು ಕೇಳೆ ಮೂಳಿ ೯

ಕರಿಮಣಿ ಕೇಶವಿಲ್ಲದ ಮುಂಡೆ ಕರೆತಂದು
ಸಿರಿ ಸಹದೇವಿಯೆಂದರ್ಚಿಸುವೆ
ಹಿರಿಯರ ಸಮ್ಮತವಲ್ಲಿದು ಎಂದೆಂದು ನರಕ
ದೊಳಿರುಳುವೆ ನಿಶ್ಚಯವೆಲೆ ಮೂಳಿ ೧೦

ಖಂಡೆರಾಯನ ಮಾಡಿ ಕೆಂಡದ ರೊಟ್ಟಿಯು
ಗುಂಡಿಗೆ ತುಪ್ಪವನರ್ಪಿಸುವೆ
ಚಂಡ್ಯೆಮನವರು ಕೂಡಿ ಕೊಂಡೊಯ್ದಿಡುವಾಗ
ಖಂಡೇರಾಯ ಕಾದುಕೊಂಡಾನೆ ಮೂಳಿ ೧೧

ಹಡೆದ ಮಕ್ಕಳ ಮುಂಜಿ ಮದುವೆಗೆ ನೇಮಿಸಿ
ಮಡಿವಾಳತಿಯ ಅಧಃಕೇಶ ತಂದು
ಸಡಗರದಲಿ ಸ್ಥಾಪಿಸುವೆ ಕುಂಭೀಪಾಕದೊ
ಳಡಿಗೆಯ ಮಾಡಿಸುವರು ನಿನ್ನ ಮೂಳಿ ೧೨

ಜಲದೇವರೆಂದು ಮೂರಡೆಗೆ ದೀಪವ ತುಂಬಿ
ಜಲಜನಾಭನಿಗೆ ಅರ್ಪಿತವಲ್ಲದ
ಮಲವುಂಡು ಸತ್ಕುಲ ಕೆಡಿಸುವೆ ನಿನ್ನ ಮೈ
ಹೊಲನಾರು ಚೆನ್ನಾಗಿ ಯಮನಾಳು ಮೂಳಿ ೧೩

ಪರಿಪರಿ ವಾದ್ಯಸಂಯುಕ್ತ ಮೈಯುಬ್ಬಿ ಸು
ಹರುಷದಿ ಈಚಲಗೊನೆಯ ತಂದು
ಪರಮಂದಿರದೊಳು ಪೂಜಿಸುವೆ ನೀ ಕಾಲನ
ನಿರದಯದಿವರು ಕೊರೆದು ದಂಡಿಪರೆಲೆ ಮೂಳಿ ೧೪

ಹಿಂದಿನಾನಾಚಾರವೇನಾದರೇನಾಯಿತು
ಮುಂದಾದರು ಮುಕುತಿಪಥವ ಬಯಸಿ
ಕಣ್ದೆರೆದು ನೋಡದನ್ಯ ದೈವಗಳ ಪು
ರಂದರವಿಠ್ಠಲನ ಭಜಿಸಲೆ ಮೂಳಿ ೧೫

[ಇದು ದಾಸರ ಪೂರ್ವಜೀವದ ಪರಿಯನ್ನು ಪರಿಚಯಮಾಡಿಕೊಡುವ ಪದವೆಂದು ತೋರುತ್ತದೆ ಇಲ್ಲಿ ಎಲ್ಲಮ್ಮ ಮೊದಲಾದ ಗ್ರಾಮದೇವತೆಗಳ ತೃಪ್ತಿಗಾಗಿ ಮಾಡುವ ಸಿಡಿ ಮೊದಲಾದ ಸೇವೆ, ಹೊಸ್ತಿಲ ಹುಣ್ಣಿಮೆ, ಬನದ ಹುಣ್ಣಿಮೆ, ಭಾರತದ ಹುಣ್ಣಿಮೆ ಮೊದಲಾದ ಜಾನಪದ ಸಂಭ್ರಮದ ಆಚಾರಗಳು, ಅಂಬಾಭವಾನಿಯನ್ನು ಮೆಚ್ಚಿಸಲು ಗೊಂದಲ ಹಾಕುವುದು ಮೊದಲಾದ ಪದ್ಧತಿಗಳು ಸದ್ಗತಿಯನ್ನು ಕೊಡಲಾರವೆಂದೂ ಕಡೆಗಾಲದಲ್ಲಿ ಯಮದೂತರು ಬಂದಾಗ ಇವು ಯಾವುವೂ ನೆರವಿಗೆ ಬಾರವೆಂದೂ, ಇವೆಲ್ಲ ಅನಾಚಾರಗಳೆಂದೂ ಹೇಳಿವೆ ಮುಕ್ತಿಗಾಗಿ ಹರಿಯ ಸೇವೆಯೊಂದೇ ದಾರಿ ಯೆಂಬುದನ್ನು ಹೇಳಿ ಪದ ಮುಗಿಯುತ್ತದೆ ]

[ಇನ್ನು ಮುಂದಿನ ಪದಗಳು ದಾಸರಿಂದ ನಿತ್ಯಯಾತ್ರೆಯ ಸಂದರ್ಭದಲ್ಲಿ ಪ್ರಾಸಂಗಿಕ ವಾಗಿ ರಚಿಸಲ್ಪಟ್ಟವು ಅವುಗಳ ಹಿನ್ನೆಲೆಯಲ್ಲಿ ಸಮಯಸ್ಫೂರ್ತಿಯಷ್ಟೆ ಇರುವುದು ]



ಮಧ್ಯಮಾವತಿ ಝಂಪೆ

ನಂಬದಿರು ಈ ದೇಹ ನಿತ್ಯವಲ್ಲ
ಅಂಬುಜಾಕ್ಷನ ಭಜಿಸಿ ಸುಖಿಯಾಗೊ ಮನವೆ ಪ

ಎಲುಬು ರಕ್ತ ಮಾಂಸಗಳು ಮೇಲೆ ಚರ್ಮದ ಹೊದಿಕೆ
ಒಳಗೆ ಮಲ ಮೂತ್ರ ಕ್ರಿಮಿರಾಶಿ ಇಹವು
ಹಲವು ವ್ಯಾಧಿಯು ಬೀಡು ಪಂಚಭೂತದ ನಾಡು
ಬಲುಹು ದೇಹವ ನೆಚ್ಚಿ ಕೆಡಬೇಡ ಮನವೆ ೧

ಸತಿ ಸುತರು ಹಿತರೆಂದು ಮತಿ ಮರೆತು ಮಮತೆಯಲಿ
ಅತಿ ಕಾಂಕ್ಷೆಯಿಂದ ದುರ್ವಿಷಯ ಬಲಿದು
ಸತತ ಲಕ್ಷ್ಮೀಪತಿಯ ಶರಣೆನ್ನದಿಹಪರದ
ಗತಿ ಶೂನ್ಯನಾಗಿ ನೀ ಕೆಡಬೇಡ ಮನವೆ ೨

ಪರರ ನಿಂದಿಸದೆ ಪರ ವಧುಗಳನು ಬಯಸದೆ
ಗುರು ವಿಪ್ರ ಸೇವೆಯನು ಮಾಡು ಬಿಡದೆ
ಹರಿ ಸ್ತುತಿಯ ನೀ ಕೇಳು ಹರಿ ಕೀರ್ತನೆಯ ಪಾಡು
ಸಿರಿ ಪುರಂದರವಿಠಲನೊಲಿದು ಪಾಲಿಸುವ ೩

ನಿತ್ಯವಲ್ಲ—ಎಂದೆಂದಿಗೂ ಇರುವುದಲ್ಲ , ಮರಣಕ್ಕೆ ಈಡಾಗುವುದು.

ಪಂಚಭೂತದ ನಾಡು—ಪೃಥ್ವೀ, ಅಪ್, ತೇಜ, ವಾಯು ಮತ್ತು ಆಕಾಶಗಳೆಂಬ ತನ್ಮಾತ್ರಗಳಿಂದ ಆದ ಮಹಾಭೂತಗಳು ಪರಸ್ಪರ ಸಂಘಟನೆಯಾಗಿ ಸಿದ್ಧವಾದ ಸ್ಥೂಲ ಶರೀರ , ಈ ಮಹಾಭೂತಗಳಿಗೆ ಕಾರ್ಯಕ್ಷೇತ್ರವಾಗಿರುವುದು

ಬಲುಹು —ಬಲ್ಪು , ಬಲ, ವೀರ್ಯ.

ಅತಿಕಾಂಕ್ಷೆಯಿಂದ —ದೇವರು ತಾನಾಗಿ ಕೊಟ್ಟದ್ದನ್ನು ಮೀರಿ (ಅತಿ) ಆಸೆಪಟ್ಟು, ಕೆಟ್ಟ ಕೆಟ್ಟ ವಿಷಯ ಸುಖಗಳನ್ನೇ ಹೆಚ್ಚಿಸಿಕೊಂಡು

ಗತಿಶೂನ್ಯನಾಗಿ—ದಿಕ್ಕು ಕಾಣದೆ , ಪುರುಷಾರ್ಥದ ದಾರಿಯನ್ನು ತಿಳಿಯದೆ

ಸಾದನಾಮಕ್ರಿಯೆ ಆದಿ

ಉದರ ವೈರಾಗ್ಯವಿದು, ನಮ್ಮ
ಪದುಮನಾಭನಲಿ ಲೇಶ ಭಕುತಿಯಿಲ್ಲ ಪ

ಉದಯ ಕಾಲದಲೆದ್ದು ಗಡಗಡ ನಡುಗುತ
ನದಿಯಲಿ ಮಿಂದೆನೆಂದು ಹಿಗ್ಗುತಲಿ
ಮದ ಮತ್ಸರ ಕ್ರೋಧ ಒಳಗೆ ತುಂಬಿಟ್ಟುಕೊಂಡು
ಬದಿಯಲ್ಲಿದ್ದವರಿಗಾಶ್ಚರ್ಯವ ತೋರುವುದು ೧

ಕಂಚುಗಾರನ ಬಿಡಾರದಂದದಿ
ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ
ಮಿಂಚಬೇಕೆಂದು ಬಲು ಜ್ಯೋತಿಗಳನು ಹಚ್ಚಿ
ವಂಚನೆಯಿಂದಲಿ ಪೂಜೆ ಮಾಡುವುದು ೨

ಕರದಲಿ ಜಪಮಣಿ ಬಾಯಲಿ ಮಂತ್ರವು
ಅರಿವೆಯ ಮುಸುಕನು ಮೋರೆಗೆ ಹಾಕಿ
ಪರಸತಿಯರ ಗುಣ ಮನದಲಿ ಸ್ಮರಿಸುತ
ಪರಮ ವೈರಾಗ್ಯಶಾಲಿ ಎಂದೆನಿಸುವುದು ೩

ಬೂಟಕತನದಲಿ ಬಹಳ ಭಕುತಿ ಮಾಡಿ
ದಿಟನೀತ ಸರಿಯಾರಿಲ್ಲೆನಿಸಿ
ನಾಟಕ ಸ್ತ್ರೀಯಂತೆ ಬಯಲ ಡಂಭವ ತೋರಿ
ಊಟದ ಮಾರ್ಗದ ಜ್ಞಾನವಿದಲ್ಲದೆ ೪

ನಾನು ಎಂಬುದ ಬಿಟ್ಟು ಜ್ಞಾನಿಗಳೊಡನಾಡಿ
ಏನಾದರು ಹರಿ ಪ್ರೇರಣೆಯೆಂದು
ಧ್ಯಾನಿಸಿ ಮೌನದಿ ಪುರಂದರವಿಠಲನ
ಕಾಣದೆ ಮಾಡಿದ ಕಾರ್ಯಗಳೆಲ್ಲವು ೫

ಉದರ ವೈರಾಗ್ಯ—ಹೊಟ್ಟೆಪಾಡಿಗಾಗಿ ವೈರಾಗ್ಯದ ಸೋಗು

ಕಂಚುಗಾರನ ಬಿಡಾರದಂದದಿ—ಕಂಚು, ಹಿತ್ತಾಳೆ ಕೆಲಸಗಾರರು ತಾವು ಮಾಡಿ ಎರಕ ಹುಯ್ದ ಪೂಜಾಮೂರ್ತಿಗಳನ್ನು ಮಾರಾಟಕ್ಕೆಂದು ತಮ್ಮ ಮನೆಗಳಲ್ಲಿ ಸಾಲಾಗಿ ಜೋಡಿಸಿರುತ್ತಾರೆ ಅವನ್ನು ಅವರೇನು ಪೂಜಿಸುವುದಿಲ್ಲ, ಅವುಗಳ ವಿಚಾರವಾಗಿ ಅವರಿಗೇನು ಭಕ್ತಿ ಇರದು ಬೇರೆಯವರ ಸಲುವಾಗಿ ಅವುಗಳು ಇಷ್ಟೆ ಕೆಲಸಗಾರರಿಗೆ ಬೇಕಾದುದು ಹಣ

ಬೂಟಕತನ—ಬೂಟಾಟಿಕೆ, ವಂಚನೆ, ಸೋಗು

ನಾಟಕಸ್ತ್ರೀಯಂತೆ —ಹಿಂದಿನಕಾಲದಲ್ಲಿ ನಾಟಕಗಳಲ್ಲಿ ಸ್ತ್ರೀಪಾತ್ರ ಮಾಡುತ್ತಿದ್ದವರೆಲ್ಲ ಪುರುಷರು ತಾನೆ!

ದಿಟನೀತ —'ದಿಟನು (ಸತ್ಯವಾಗಿ ಧಾರ್ಮಿಕನು) ಈತ, ಇವನಿಗೆ ಸರಿ ಯಾರೂ ಇಲ್ಲ' ಎಂದು ಜನ ಬಗೆಯುವಂತೆ ಮಾಡಿ

ಏನಾದರು ಹರಿ ಪ್ರೇರಣೆ—ಇದು 'ನಾಹಂ ಕರ್ತಾ ಹರಿಃ ಕರ್ತಾ' ಎನ್ನುವ ಮಾತಿನ ಛಾಯೆ



ಭೈರವಿ ಅಟ್ಟ

ಹಿಗ್ಗುವೆ ಯಾಕೊ ಈ ದೇಹಕ್ಕೆ ಹಿಗ್ಗುವೆ ಯಾಕೊ ಪ

ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ
ಅಗ್ನಿಯೊಳಗೆ ಬಿದ್ದು ದಗ್ಧವಾಗುವ ದೇಹಕೆ ಅ

ಸತಿ ಪುರುಷರು ಕೂಡಿ ರತಿಕ್ರೀಡೆಗಳ ಮಾಡಿ
ಪತನಾದ ಇಂದ್ರಿಯ ಪ್ರತಿಮೆಯ ದೇಹಕೆ ೧

ಆಗದ ಭೋಗಗಳ ಆಗುಮಾಡುತಲಿದ್ದು
ರೋಗ ಬಂದರೆ ಬಿದ್ದು ಹೋಗುವ ದೇಹಕ್ಕೆ ೨

ಪರರ ಸೇವೆಯ ಮಾಡಿ ನರಕ ಭಾಜನನಾಗಿ
ಮರಳಿ ಮರಳಿ ಬಿದ್ದು ಉರುಳುವ ದೇಹಕ್ಕೆ ೩

ಸೋರುವುದೊಂಭತ್ತು ಬಾಗಿಲ ಮಲಗಳು
ನೀರಿಲ್ಲದಿದ್ದರೆ ನಾರುವ ದೇಹಕ್ಕೆ ೪

ಪುರಂದರವಿಠಲನ ಚರಣ ಕಮಲಕ್ಕೆ
ಎರಗದೆ ತಿರುಗುವ ಗರುವದ ದೇಹಕ್ಕೆ ೫

ಹಿಗ್ಗುವೆ—ಹೆಮ್ಮೆ ಪಡುವೆ , ಸಂತೋಷಪಡುವೆ

ಹಿಗ್ಗುವ —ದೇಹದ ಸ್ವಭಾವವೇ ಬೆಳೆಯುವುದು (ಹಿಗ್ಗುವ), ಬಲಗುಂದುವುದು (ತಗ್ಗುವ), ವಾಸನೆ ಬಡಿಯುವ, ನಾರುವ (ಮುಗ್ಗುವ), ಸೊರಗುವುದು (ಕುಗ್ಗುವ)

ಪತನಾದ—ತಂದೆತಾಯಿಯರ ಶುಕ್ರಶೋಣಿತಗಳು ಕೂಡಿ ಅದರಿಂದ ಬಿದ್ದ, ಇಂದ್ರಿಯ ಗಳಿಗೆ ಆಧಾರವಾದ

ಮರಳಿ ಮರಳಿ ಬಿದ್ದು ಉರುಳುವ—ಮತ್ತೆ ಮತ್ತೆ ಭೂಮಿಗೆ ಬಿದ್ದು (ಸಂಸಾರ ಚಕ್ರದಲ್ಲಿ ಸೇರಿ) , ಉರುಳುವ, ಸಾವನ್ನು ಪಡೆಯುವ

ಸೋರುವುದೊಂಬತ್ತು —ಸಂಸ್ಕೃತದಲ್ಲಿ 'ನವದ್ವಾರೇ ಪುರೇ ದೇಹೀ' ಎನ್ನುವ ಒಕ್ಕಣೆಯ ಕನ್ನಡ ರೂಪ ಕಣ್ಣುಗಳೆರಡು, ಕಿವಿಗಳೆರಡು, ಮೂಗಿನ ಹೊಳ್ಳೆಗಳೆರಡು, ಬಾಯೊಂದು, ಮೂತ್ರದ್ವಾರ, ಮಲದ್ವಾರ ಹೀಗೆ ದೇಹಕ್ಕೆ ಒಂಬತ್ತು ಬಾಗಿಲುಗಳು



ಪೂರ್ವಕಲ್ಯಾಣಿ　　　　　　　　　　　　　　　　　　　　　　　　　ಅಟ್ಟ

ಲೊಳಲೊಟ್ಟೆ, ಎಲ್ಲಾ ಲೊಳಲೊಟ್ಟೆ　　　　　　　　ಪ

ಆನೆ ಕುದುರೆ ಒಂಟೆ ಲೊಳಲೊಟ್ಟೆ, ಬಹು
ಸೇನೆ ಭಂಡಾರವು ಲೊಳಲೊಟ್ಟೆ
ಮಾನಿನಿಯರ ಸಂಗ ಲೊಳಲೊಟ್ಟೆ, ದೊಡ್ಡ
ಕ್ಷೋಣೀಶನೆಂಬುದು ಲೊಳಲೊಟ್ಟೆ　　　　　　　　೧

ಮುತ್ತು ಮಾಣಿಕ್ಯ ಲೊಳಲೊಟ್ಟೆ, ಚಿನ್ನ
ಛತ್ರ ಚಾಮರ ಧ್ವಜ ಲೊಳಲೊಟ್ಟೆ
ಸುತ್ತಗಲಕೋಟೆ ಲೊಳಲೊಟ್ಟೆ
ಮತ್ತೆ ಉತ್ತಮ ಪ್ರಭುತ್ವ ಲೊಳಲೊಟ್ಟೆ　　　　　　　　೨

ಕಂಟಕರೆಂಬೋರು ಲೊಳಲೊಟ್ಟೆ ನಿನ್ನ
ನೆಂಟರು ಇಷ್ಟರು ಲೊಳಲೊಟ್ಟೆ
ಉಂಟಾದ ಗುಣನಿಧಿ ಪುರಂದರವಿಠಲನ
ಬಂಟನಾಗದವ ಲೊಳಲೊಟ್ಟೆ　　　　　　　　೩

[ಈ ಪ್ರಾಪಂಚಿಕ ಐಶ್ವರ್ಯ, ವೈಭವ ಎಲ್ಲ ಹುಸಿ ಎಂಬರ್ಥದ ಹಾಡು ]

ಲೊಳಲೊಟ್ಟೆ—ಲೊಲ್ಲೊಟ್ಟೆ, ಲೊಳ್ ಹೊಟ್ಟೆ , ಒಳಗೆ ಏನೂ ಇರದು, ಬರಿಯ ತೋರಿಕೆ ಎಂಬರ್ಥ. "ಊರಿಗೆ ಹಬ್ಬ ನಾಯಿಗೆ ಲೊಲ್ಲೊಟ್ಟೆ" ಎಂಬ ಗಾದೆಯಿದೆ

ಕ್ಷೋಣೀಶ—ಭೂಮಿಗೆ ಒಡೆಯ, ರಾಜ

ಕಂಟಕರೆಂಬೋರು—ಆಧ್ಯಾತ್ಮಿಕ ಜೀವನಕ್ಕೆ ತೊಂದರೆಕೊಡುವವರು ಇರುತ್ತಾರೆ ಎಂಬುದು

ಉಂಟಾದ—ಅರವಿಗೆ ಬಂದೊದಗಿದ

೩೨

ಭೈರವಿ ಅಟ್ಟ

ನಡೆ ಪೋಪ ವಕ್ತರೆಡೆಗೆ ನಮ್ಮಯ್ಯನೆ ನಮ್ಮ
ತೊಡಕ ಬಿಡಿಸಿಕೊಂಬ ತೋಯಜಾಕ್ಷನೆ ಪ

ಆದಿಯಲ್ಲಿ ನಮ್ಮಯ್ಯ ಮುತ್ತ್ಯರುಗಳು
ಪಾದಸೇವೆಯ ಮಾಡಿ ಹಲವು ಕಾಲದಲಿ
ಸಾಧಿಸಿದರ್ಥವ ಸಲ್ಲಿಸೆನ್ನ ದೇವನೆ
ಕಾವನ್ನ ಮಾಡೋರೆ ಧನವೇಕೊ ಕೊಡಲೊಲ್ಲೆ ೧

ಸಾಲವ ಬೇಡಿ ಜಾಲ ರೌಳಿಯ ಮಾಡಿ
ಕಾಲವ ಕಳೆದೆನೀ ಲೌಕಿಕದಿಂದ
ಮೇಲೆ ತಿರುಗುವುದು ಮೆಚ್ಚೋರೆ ಬುಧರು ನಿನ್ನ
ಕಾಲಿಗನ್ನ ಕೊರಳಿಗೆ ಕಟ್ಟಿಕೊಂಬೆನೊ ದೇವ ೨

ಸನಕಾದಿ ಭಾಗವತರ ಸಾಕ್ಷಿಗಳಿಂದ
ಮನಕೆ ನಿನ್ನ ನಾಮಸ್ಮರಣೆ
ಅನುದಿನ ತಪ್ಪದಂತೆನಗೆ ನಂಬಿಗೆ ಕೊಡು
ವನಜಾಕ್ಷ ಪುರಂದರ ವಿಠಲರಾಯ ೩

[ಇದು ಭಕ್ತನೊಬ್ಬನು ದೈವವನ್ನೇ ನ್ಯಾಯದ ಕಟ್ಟೆ ಹತ್ತಿಸಲು ಕರೆಯುತ್ತಿರುವ ಕೀರ್ತನೆ ಬೇರೆ ಭಕ್ತರನ್ನೇ ತೀರ್ಪುಗಾರರಾಗಿಟ್ಟುಕೊಂಡು ನಮ್ಮಿಬ್ಬರ ಜಗಳವನ್ನು ಪರಿಹರಿಸಿಕೊಳ್ಳೋಣ ಎಂದು ಈ ಭಕ್ತ ಹೇಳುತ್ತಿದ್ದಾನೆ "ನಾನು ಪಾಪಿಯೇ ಆಗಿದ್ದರೂ ನನ್ನ ತಂದೆ ತಾತಂದಿರೆಲ್ಲ ನಿನ್ನ ಊಳಿಗ ಮಾಡಿ ಮಾಡಿ ಸಂಪಾದಿಸಿದ ಪುಣ್ಯದ ಸಂಪತ್ತು ಅಗಾಧವಾಗಿದೆಯಲ್ಲ, ಅದನ್ನೇಕೆ ಕೊಡಲೊಲ್ಲೆ ?"—ಎಂದು ಭಕ್ತ ಕೇಳುತ್ತಿದ್ದಾನೆ ಸಾಕ್ಷಿಗಳಾಗಲು ಸನಕಾದಿಗಳನ್ನು ಕರೆದು ತನಗೆ ಪ್ರತಿದಿನ ನಾಮಸ್ಮರಣೆ ಮಾಡುವ ಬುದ್ಧಿಯನ್ನು ಕೊಡು ಎಂದು ಕೇಳುತ್ತಾನೆ ]

ಸಾಲವಬೇಡಿ —ಲೌಕಿಕ ಬದುಕಿನಲ್ಲಿ ತಾನು ತುಂಬ ಸಾಲಗಾರ, ಪಾಪಿ

ಜಾಲ ರೌಳಿಯ ಮಾಡಿ—ಜಾಲ—ವಂಚನೆ, ಕಣ್ಕಟ್ಟು ರೌಳಿ—ಟವಳಿ, ಮೋಸ

ಕಾವಸ್ಯ ಮಾಡುವರೆ— ಕೆಟ್ಟ ಅನ್ನ ಉಣ್ಣುವಂತೆ

ಮೇಲೆ ತಿರುಗುವುದು—ಪಾಪಿಯಾಗಿರುವ ನಾನು ಸ್ವರ್ಗಕ್ಕೆ ಬರುವುದನ್ನು ಜ್ಞಾನಿಗಳು ಮೆಚ್ಚಲಾರರು ನಿಜ  ಆದರೆ ಕೊರಳನ್ನು ನಿನ್ನ ಕಾಲಿಗೆ ಕಟ್ಟಿಕೊಳ್ಳುವುದರಿಂದ ಎಲ್ಲವೂ ಪರಿಹಾರ

ವನಜಾಕ್ಷ, ತೋಯಜಾಕ್ಷ—ಕಮಲನೇತ್ರನಾದ ವಿಷ್ಣು

ಸನಕಾದಿ ಭಾಗವತರ ಸಾಕ್ಷಿಗಳಿಂದ—ಸನಕ, ಸನಂದನ, ಸನತ್ಸುಜಾತ, ನಾರದ, ಅಂಬರೀಷ, ಧ್ರುವ ಮೊದಲಾದ ಭಾಗವತರು ನಿನ್ನನ್ನು ನಂಬಿಯೇ ಉದ್ಧಾರವಾದರು ಎಂಬುದು ಪುರಾಣ-ಪ್ರಸಿದ್ಧವಾಗಿದೆ , ಇದು ದಿಟವೆಂದು ನಂಬಿ ನಾನು ನಿನ್ನ ಮೊರೆಹೊಕ್ಕಿದ್ದೇನೆ

ನಂಬಿಗೆ ಕೊಡು—ನಿನ್ನ ನಾಮಸ್ಮರಣೆ ನನ್ನ ಮನಸ್ಸಿನಿಂದ ಜಾರುವಂತೆ ಮಾಡುವುದಿಲ್ಲ ಎಂಬ ಭರವಸೆಯನ್ನು ನೀನೇ ನೀಡಬೇಕು



## ೩೩

ನಾದನಾಮಕ್ರಿಯೆ ಚಾಪು

ರಾಗಿ ತಂದೀರಾ ಭಿಕ್ಷಕೆ ರಾಗಿ ತಂದೀರಾ ಪ

ಯೋಗ್ಯರಾಗಿ, ಭೋಗ್ಯರಾಗಿ, ಭಾಗ್ಯವಂತರಾಗಿ ನೀವು ಅ

ಅನ್ನದಾನವ ಮಾಡುವರಾಗಿ
ಅನ್ನ ಛತ್ರವನ್ನಿಟ್ಟವರಾಗಿ
ಅನ್ಯ ವಾರ್ತೆಯ ಬಿಟ್ಟವರಾಗಿ
ಅನುದಿನ ಭಜನೆಯ ಮಾಡುವರಾಗಿ ೧

ಮಾತಾಪಿತೃಗಳ ಸೇವಿಪರಾಗಿ
ಪಾಪ ಕಾರ್ಯವ ಬಿಟ್ಟವರಾಗಿ
ಜಾತಿಯಲಿ ಮಿಗಿಲಾದವರಾಗಿ
ನೀತಿ ಮಾರ್ಗದಲಿ ಖ್ಯಾತರಾಗಿ ೨

ಗುರು ಕಾರುಣ್ಯವ ಪಡೆದವರಾಗಿ
ಗುರುವಿನ ಮರ್ಮವ ತಿಳಿದವರಾಗಿ
ಗುರುವಿನ ಪಾದವ ಸ್ಮರಿಸುವರಾಗಿ
ಪರಮ ಪುಣ್ಯವ ಮಾಡುವರಾಗಿ ೩

ಶ್ರೀನಿವಾಸನ ಸ್ಮರಿಸುವರಾಗಿ
ಪ್ರಾಣರಾಯನ ದಾಸರಾಗಿ
ದಾನಕೆಂದು ಬಲು ಹೆದರಿ ಇಂಥ
ದೀನವೃತ್ತಿಯಲಿ ಹೀನರಾಗಿ ೪

ಪಕ್ಷಮಾಸ ವ್ರತ ಮಾಡುವರಾಗಿ
ಪಕ್ಷಿವಾಹನಗೆ ಪ್ರಿಯರಾಗಿ
ಕುಕ್ಷಿಲಿ ಕಲ್ಮಷ ಇಲ್ಲದವರಾಗಿ
ಭಿಕ್ಷುಕರು ಅತಿ ತುಚ್ಛರಾಗಿ ೫

ವೇದ ಪುರಾಣವ ತಿಳಿದವರಾಗಿ
ಮೇದಿನಿಯಾಳುವಂಥವರಾಗಿ
ಸಾಧು ಧರ್ಮವಾಚರಿಸುವರಾಗಿ
ಓದಿ ಗ್ರಂಥಗಳ ಪಂಡಿತರಾಗಿ ೬

ಆರು ಮಾರ್ಗವ ಅರಿತವರಾಗಿ
ಮೂರು ಮಾರ್ಗವ ತಿಳಿದವರಾಗಿ
ಭೂರಿ ತತ್ವವ ಬೆರೆದವರಾಗಿ
ಕ್ರೂರರ ಸಂಗವ ಬಿಟ್ಟವರಾಗಿ ೭

ಕಾಮ ಕ್ರೋಧವ ಅಳಿದವರಾಗಿ
ನೇಮ ನಿಷ್ಠೆಗಳ ಮಾಡುವರಾಗಿ
ಆ ಮಹಾಪದವಿಲಿ ಸುಖಿಸುವರಾಗಿ
ಪ್ರೇಮದಿ ಕುಣಿ ಕುಣಿದಾಡುವರಾಗಿ ೮

ಸಿರಿ ರಮಣನ ಸದಾ ಸ್ಮರಿಸುವರಾಗಿ
ಗುರುತಿಗೆ ಬಾಹೋರಂಧವರಾಗಿ
ಕರೆಕರೆ ಸಂಸಾರ ನೀಗುವರಾಗಿ
ಪುರಂದರವಿಠಲನ ಸೇವಿಪರಾಗಿ ೯

[ದಾಸರು ಉಪಾದಾನಕ್ಕೆ ಬಂದಾಗ ಒಂದು ಮನೆಯಲ್ಲಿ ಅಕ್ಕಿಗೆ ಬದಲು ರಾಗಿ ದೊರಕಿತು 'ರಾಗಿ' ಎಂಬ ಮಾತನ್ನೇ ಹಿಡಿದು ಅದರ ಸುತ್ತ ಹೆಣೆದಿರುವ ಜಾಣ ತನದ ಪದ ಇದು ]

ಅನ್ಯವಾರ್ತೆಯ—ಹರಿಕೀರ್ತನೆಯನ್ನು ಬಿಟ್ಟು ಬೇರೆ ಮಾತನ್ನು ಬಿಡಿ , ಬೇರೆಯವರ ಸುದ್ದಿಯನ್ನು ತಲೆಗೆ ಹಚ್ಚಿಕೊಳ್ಳದಿರಿ

ಅನುದಿನ—ಪ್ರತಿನಿತ್ಯ

ಪ್ರಾಣರಾಯನ ದಾಸರಾಗಿ—ಹನುಮಂತನ ಭಕ್ತರಾಗಿ , ಹನುಮಂತನ ಅವತಾರ ವಾದ ಮಧ್ವಾಚಾರ್ಯರ ಸಿದ್ಧಾಂತವನ್ನು ನಂಬಿ ನಡೆಯುವವರಾಗಿ

ದಾನಕೆಂದು —ದಾನಮಾಡಿದರೆ ಧನ ಕಡಮೆಯಾಗುವುದೆಂದು ಹೆದರಿ ದಾನಮಾಡ ದಿರುವುದೇ ಇಲ್ಲಿ ದೀನವೃತ್ತಿ , ಇದರಲ್ಲಿ ಹೀನರೆಂದರೆ ಇದನ್ನು ಬಿಟ್ಟವರು , ಉದಾರಿಗಳು

ಕುಕ್ಷಿಲಿ ಕಲ್ಮಷ—ಹೊಟ್ಟೆಯಲ್ಲಿ ಕೊಳೆ , ಸಿಟ್ಟು, ಅಸೂಯೆ, ಬಯಕೆ ಮೊದಲಾದವು.

ಮೇದಿನಿಯನಾಳುವಂಥವರಾಗಿ—ಭೂಮಿಯ ಮೇಲೆ ಒಡೆತನ ಮಾಡುವವರಾಗಿ
ಪ್ರಾಪಂಚಿಕ ಸುಖಗಳಿಗೆ ವಶರಾಗದೆ ಅವನ್ನು ಮೀರಿ ನಿಂತವರಾಗಿ

ಆರು ಮಾರ್ಗವ—ಷಡಂಗಯೋಗ , ಯೋಗಾಭ್ಯಾಸದಲ್ಲಿ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ, ಧ್ಯಾನ, ಸಮಾಧಿ ಇವು ಆರು ಅಂಗಗಳು

ಮೂರು ಮಾರ್ಗವ—ವೇದಾಂತದ ಶ್ರವಣ, ಮನನ, ನಿದಿಧ್ಯಾಸನ ಎಂಬ ಮೂರು ಸಾಧನೋಪಾಯಗಳು

ಭೂರಿ ತತ್ತ್ವವ—ಹಿರಿಯ ತತ್ತ್ವವೆಂದರೆ ಭಗವತ್ತತ್ತ್ವ , ಅದಕ್ಕಿಂತ ದೊಡ್ಡದಿಲ್ಲವಾದುದರಿಂದ ಅದು 'ಭೂರಿ' ಅಥವಾ 'ಭೂಮಾ'

ಗುರುತಿಗೆ ಬಾಹೋರಂಥವರಾಗಿ—ಜೀವವು ತನ್ನ ದಿಟವಾದ ಸ್ವರೂಪವನ್ನು ಅರಿತು ಕೊಳ್ಳುವುದು, ಗುರುತಿಸಿಕೊಳ್ಳುವುದು 'ಸ್ವಸ್ವರೂಪಜ್ಞಾನ'ವೆಂಬ ಸಾಧನೆಯ ಘಟ್ಟ. ಇದಕ್ಕೆ ಪಾರಿಭಾಷಿಕವಾಗಿ 'ಪ್ರತ್ಯಭಿಜ್ಞಾನ'ವೆಂಬ ಹೆಸರೂ ಇದೆ

ಕರೆಕರೆ ಸಂಸಾರ—ಕಟಿಪಟಿಯ ಸಂಸಾರ , ದುಃಖ, ದುಗುಡ, ದುಮ್ಮಾನಗಳನ್ನು ಮತ್ತೆ ಮತ್ತೆ ಒದಗಿಸುವ ಸಂಸಾರ



ಪೂರ್ವಿ ಅಟ್ಟ

ನಮ್ಮ ಶಾಸ್ತ್ರ ಇಲ್ಲಿ ಮಾರುವುದಲ್ಲ
ಸುಮ್ಮನಿದ್ದರೆ ಯಾರು ಕೇಳುವರಿಲ್ಲ ಪ

ಏಡಿ ಕಡಗವಿಟ್ಟು ಫಲವೇನಿಲ್ಲ
ಬೇಡ ತಾ ಮುತ್ತಿನ ಬೆಲೆ ಏನು ಬಲ್ಲ
ಕಾಡ್ಹಳ್ಳಿಗೌಡ ತಾ ಅರಸಾಗಲಿಲ್ಲ
ವೇದ ಶಾಸ್ತ್ರಕೆ ಮೂಢ ಫಲಿದೂಗಲಿಲ್ಲ ೧

ಮೂಕ ತಾ ಮಾತಿನ ಸವಿ ಏನು ಒಲ್ಲ
ಲೌಕಿಕ ಬೇನೆ ಸನ್ಯಾಸೇನು ಒಲ್ಲ
ಕಾಕುಮಾನವ ಪುಣ್ಯ ಪಾಪೇನು ಒಲ್ಲ
ಶ್ರೀ ಕೃಷ್ಣನ ನೆನೆಯದವ ಮಾನವನಲ್ಲ ೨

ಕತ್ತೆ ಹೂರಣದ ರುಚಿ ತಿಳಿಯಲಿಲ್ಲ
ತೊತ್ತಿಗೆ ಪತಿವ್ರತೆ ಗುಣ ಬರಲಿಲ್ಲ
ಮುತ್ತಿನ ಹಾರ ಕಪಿಗ ಹಾಕ ಸಲ್ಲ
ಕುತ್ತಿಗೆ ಕೊಯ್ವಗೆ ಕರುಣವೆ ಇಲ್ಲ ೩

ಅಚ್ಚ ಹೆಣ್ಣಿನ ಸಂಗ ಷಂಢೇನ ಬಲ್ಲ
ಮುಚ್ಚಿ ಮಾತ್ಹೇಳಿದರೆ ನ್ಯಾಯವೇನಿಲ್ಲ
ಸ್ವಚ್ಛ ದೀಪದ ಬೆಳಕು ಕುರುಡೇನು ಬಲ್ಲ
ಮೊಚ್ಚೆಗಾರ ಸಕಲಾತ್ಯೇನು ಬಲ್ಲ ೪

ಹೆಣ್ಣಿಗೆ ಜಾರತ್ವ ಗುಣತರವಲ್ಲ
ತಣ್ಣೀರು ಬೇಸಿಗೆ ಗುಣ ತೋರಲಿಲ್ಲ
ಘನ್ನ ಪುರಂದರವಿಠಲನ ಭಕ್ತರೆ
ಅನ್ಯಾಯವರಿಯದೆ ಭವ ನೀಗುವಿರಲ್ಲ ೫

[ನಿತ್ಯಯಾತ್ರೆಯಲ್ಲಿ ಬೀದಿ ಬೀದಿ ತಿರುಗುವ ಹರಿದಾಸರು ಶಾಸ್ತ್ರ ಪ್ರಮೇಯಗಳನ್ನು ಜನರಿಗೆ ತಿಳಿಯುವ ಭಾಷೆಯಲ್ಲಿ ಹೇಳುತ್ತ ಬಂದರು ಆದರೆ ಲೌಕಿಕ ಪ್ರಸಕ್ತಿಯಲ್ಲೇ ಮುಳುಗಿದ ಜನ ಅವುಗಳಿಗೆ ಕಿವಿಗೊಟ್ಟು ಅವನ್ನು ಆದರಿಸದಿದ್ದುದು ಸಹಜವೇ ಇದ ರಿಂದ ಸ್ವಲ್ಪ ಮಟ್ಟಿಗೆ ವ್ಯಥೆಪಟ್ಟ ದಾಸರು ಸಮಾಧಾನ ತಂದುಕೊಂಡ ಬಗೆ ಈ ಹಾಡಿನಲ್ಲಿದೆ ]

ನಮ್ಮ ಶಾಸ್ತ್ರ —ಶಾಸ್ತ್ರವೆಂಬುದು ಮಾರುಕಟ್ಟೆಯಲ್ಲಿ ಕೊಡ-ಕೊಳ್ಳುವ ಸಾಮಾನಲ್ಲ

ಸುಮ್ಮನಿದ್ದರೆ —ದಾಸರು ಶಾಸ್ತ್ರವನ್ನು ಬೋಧಿಸದೆ ಇದ್ದರೂ ಜನ ಏಕೆಂದು ಕೇಳರು , ಬೋಧನೆಯನ್ನು ಕುರಿತು ಅವರ ಆದರ ಅಷ್ಟೆ !

ಲೌಕಿಕಬೇನೆ —ಲೋಕದ ಜನರ ನಿತ್ಯ ಬದುಕಿನ ಕಷ್ಟವನ್ನು ಎಲ್ಲವನ್ನೂ ಬಿಟ್ಟ ಸಂನ್ಯಾಸಿ ಹೇಗೆ ತಿಳಿದಾನು ?

ಕಾಕುಮಾನವ—ಕೆಟ್ಟಮನುಷ್ಯ

ಮುಚ್ಚಿ ಮಾತ್ಹೇಳಿದರೆ—ನಾಲ್ಕು ಜನರ ಎದುರಿಗೆ ಹೇಳಿದ ಮಾತೇ ನ್ಯಾಯಾಲಯ ದಲ್ಲಿ ನಿಲ್ಲುವುದು , ಗುಟ್ಟಾಗಿ ಹೇಳಿದುದು ಸಾಕ್ಷಿಯಿಲ್ಲದೆ ತಿರಸ್ಕೃತವಾಗುತ್ತದೆ

ಮೋಚ್ಚಿಗಾರ —ಕಾಲಿಗೆ ಹಾಕಿಕೊಳ್ಳುವ ಕೆರಗಳನ್ನು ಮಾಡುವ ವೃತ್ತಿ ಹಿಡಿದವನಿಗೆ ಒಣಗಿದ ಚರ್ಮಗಳ ಬಳಕೆಯಿರುದೆಯಷ್ಟೆ ಅವನಿಗೆ ಬೆಲೆಬಾಳುವ ರೇಷ್ಮೆಶಾಲು ಗಳ ಗುಣವೇನು ತಿಳಿಯುವುದು ?

ಅನ್ಯಾಯವರಿಯದೆ—ಇದು ಸಾಧನಾಶರೀರವೆಂಬುದನ್ನು ಅರಿತುಕೊಳ್ಳದೆ ಸಂಸಾರ ದಲ್ಲೇ ಮುಳುಗಿರುವುದು ತರವಲ್ಲ , ಬಾಳ್ವೆಯನ್ನು ವ್ಯರ್ಥವಾಗಿ ಕಳೆದಂತಾ ಗುತ್ತದೆ



ಸಾದನಾಮಕ್ರಿಯೆ — ಅಟ್ಟ

ಊಟಕ್ಕೆ ಬಂದೆವು ನಾವು, ನಿಮ್ಮ
ಆಟ ಪಾಟವ ಬಿಟ್ಟು ಅಡುಗೆ ಮಾಡಮ್ಮ ಪ

ಕತ್ತಲಿಟ್ಟಾವಮ್ಮ ಕಣ್ಣು ಬಾಯಿ
ಬತ್ತಿ ಬರುತಲಿದೆ ಕೈಕಾಲು ಝಮ್ಮು
ಹೊತ್ತು ಹೋಗಿಸಬೇಡವಮ್ಮ
ಒಂದು ತುತ್ತಾದರು ಇತ್ತು ಸಲಹು ನಮ್ಮಮ್ಮ ೧

ಒಡಲೊಳಗೆ ಉಸಿರಿಲ್ಲ ಒಂದು
ಕ್ಷಣವಾದರೆ ಜೀವ ನಿಲ್ಲುವುದಿಲ್ಲ
ಮಡಿದರೆ ದೋಷ ತಟ್ಟುವುದು ಒಂದು
ಹಿಡಿ ಅಕ್ಕಿಯಿಂದಲೆ ಕೀರ್ತಿ ಬಾಹೋದು ೨

ಹೊನ್ನರಾಶಿಯ ತಂದು ಸುರಿಯೆ ಕೋಟಿ
ಕನ್ನಿಕೆಯರ ತಂದು ಧಾರೆಯನೆರೆಯೆ
ಅನ್ನದಾನಕ್ಕಿನ್ನು ಸರಿಯೆ ಪ್ರ
ಸನ್ನ ಪುರಂದರವಿಠ್ಠಲ ಧೊರೆಯೆ ೩

[ಅನ್ನದಾನದ ಹಿರಿಮೆಯನ್ನು ಹೊಗಳುವ ಪದ ಇದು ]



ಪೂರ್ವಿ ಅಟ್ಟ

ಇಕ್ಕಲಾರೆ ಕೈ ಎಂಜಲು, ಜಕ್ಕ ಪ

ಮಕ್ಕಳು ಅಳುತಾರೆ ಹೋಗೋ ದಾಸಯ್ಯ ಅ

ಮಡಕೆ ತೊಳೆಯುತೇನೆ ಮನೆಯ ಸಾರಿಸುತೇನೆ
ಹುಡುಗರೊಬ್ಬರ ಕಾಣೆ ಹೋಗೋ ದಾಸಯ್ಯ
ತೊಡೆಯಮೇಲಿನ ಕೂಸು ಮೊಲೆಯುಣ್ಣುತಲಿದೆ
ಹುಡುಗಾಟ ಮಾಡದೆ ಹೋಗೋ ದಾಸಯ್ಯ ೧

ಅಟ್ಟದಮೇಲಿನ ಅಕ್ಕಿ ತೆಗೆಯಬೇಕು
ಹೊಟ್ಟೆ ನೋಯುತಲಿದೆ ಹೋಗೊ ದಾಸಯ್ಯ
ಮುಟ್ಟಾಗಿ ಇದ್ದೇನೆ ಮನೆಯೊಳಗಾರಿಲ್ಲ
ನಿಷ್ಠೂರ ಮಾಡದೆ ಹೋಗೋ ದಾಸಯ್ಯ ೨

ವೀಸದ ಕಾಸಿಗೆ ದವಸವ ನಾ ತಂದೆ
ಕೂಸಿಗೆ ಸಾಲದು ಹೋಗೋ ದಾಸಯ್ಯ
ಆಸೆಕಾರ ನೀನು ದೋಷಕಾರಿ ನಾನು
ಶೇಷಾಚಲ ವಾಸ ಪುರಂದರವಿಠಲ ೩

[ಉಪಾದಾನಕ್ಕೆ ಬಂದ ದಾಸರಿಗೆ ಎಲ್ಲರ ಮನೆಯಲ್ಲೂ ಭಿಕ್ಷೆ ದೊರೆಯುವುದೆಂಬ ನೆಚ್ಚಿಗೆಯಿಲ್ಲ ಕೊಡಲು ಮನಸ್ಸಿಲ್ಲದವರು ಬೇರೆ ಬೇರೆ ಕಾರಣಗಳನ್ನು ಹೇಳಿ ಮುಂದಕ್ಕೆ ಕಳುಹಿಸಿಬಿಡುತ್ತಾರೆ ಈ ಪದದಲ್ಲಿ ದಾಸರು ಇದನ್ನು ಎತ್ತಿ ಆಡಿದ್ದಾರೆ ]

ವೀಸ—'ಹಣ'ವೆಂಬ ನಾಣ್ಯದ ಹದಿನಾಲ್ಕನೇ ಒಂದು ಭಾಗ

ಕಾಸು—ಸಣ್ಣ ನಾಣ್ಯ.

ಆಸೆಕಾರ ನೀನು ದೋಷಕಾರಿ ನಾನು—ಹಲವರ ಮನೆಯಿಂದ ಉಪಾದಾನವನ್ನು ಪಡೆದುಕೊಳ್ಳುವ ಆಸೆ ನಿನಗೆ ; ಬೇಡುತ್ತ ಬಂದವರಿಗೆ ಏನನ್ನೂ ಕೊಡದೆ ಹೊರದೂಡುವ ದೋಷ ನನಗೆ ಆಸೆಗಾರನೆಂದರೆ ದುರಾಶೆಯ ಮನುಷ್ಯ

ಪೂರ್ವಿ ಅಟ್ಟ

ಅಲ್ಲಿದೆ ನಮ್ಮ ಮನೆ, ಇಲ್ಲಿ ಬಂದೆ ಇದು ಸುಮ್ಮನೆ ಪ

ಕದ ಬಾಗಿಲಿರಿಸಿಹ ಕಳ್ಳಮನೆ, ಇದು
ಮುದದಿಂದಲೋಲ್ಯಾಡೊ ಸುಳ್ಳುಮನೆ
ಇದಿರಾಗಿ ವೈಕುಂಠ ವಾಸ ಮಾಡುವಂಥ
ಪದುಮನಾಭನ ದಿವ್ಯ ಬದುಕು ಮನೆ ೧

ಮಾಳಿಗ ಮನೆಯೆಂದು ನೆಚ್ಚಿ ಕೆಡಲುಬೇಡ
ಕೇಳಯ್ಯ ಹರಿಕದೆ ಶ್ರವಣಂಗಳ
ನಾಳೆ ಯಮದೂತರು ಬಂದೆಳೆದೊಯ್ವಾಗ
ಮಾಳಿಗೆ ಮನೆ ಸಂಗಡ ಬಾರದಯ್ಯ ೨

ಮಡದಿ ಮಕ್ಕಳೆಂಬ ಹಂಬಲ ನಿನಗೇಕೊ
ಕಡುಗೊಬ್ಬುತನದಲಿ ನಡೆಯದಿರು
ಒಡೆಯ ಶ್ರೀ ಪುರಂದರವಿಠಲನ ಚರಣವ
ದೃಢ ಭಕ್ತಿಯಲಿ ನೀ ಭಜಿಸಿಕೊ ಮನುಜ ೩

[ಶ್ಲೇಷಾರ್ಥವಿರುವ ಒಂದು ಹಾಡು ]

ಅಲ್ಲಿದೆ ನಮ್ಮ ಮನೆ—ಜೀವನಿಗೆ ನೆಲೆಯೆಂದರೆ ವೈಕುಂಠದಲ್ಲಿ, ಮುಕ್ತನಾಗಿ ಹರಿಸನ್ನಿಧಿಯಲ್ಲಿ ಇರುವುದೇ , ಅದು ಸ್ವಸ್ವರೂಪಸ್ಥಿತಿ 'ಮನೆ'ಯೆಂದರೆ ನೆಮ್ಮದಿಯ **ತಾಣ**

ಇಲ್ಲಿ ಬಂದೆ—ಸಂಸಾರಕ್ಕೆ ಬಂದು ತೊಳಲುತ್ತಿರುವುದು, ಜೀವನಿಗೆ ಬಂಧನಸ್ಥಿತಿಯಿರುವುದು

ಸುಮ್ಮನೆ—ಉದ್ದೇಶವಿಲ್ಲದೆ , 'ಲೋಕವತ್ತು ಲೀಲಾ ಕೈವಲ್ಯಂ' ಎಂಬ ಶಾಸ್ತ್ರ ವಚನದ ಛಾಯೆ ಇಲ್ಲಿ ಕಾಣುತ್ತದೆ

ಕದಬಾಗಿಲಿರಿಸಿಹ—ಒಂಬತ್ತು ಬಾಗಿಲುಗಳಿರುವ ಈ ದೇಹವನ್ನೇ ಇಲ್ಲಿ ಮನೆಯೆಂದು ಕರೆದಿದ್ದಾರೆ ('ನವದ್ವಾರೇ ಪುರೇ ದೇಹೀ') ಆದರೆ ಇದು 'ಕಳ್ಳಮನೆ', ಮನೆಯೆಂದು ತೋರಿದರೂ ಅಲ್ಲಿ ನೆಮ್ಮದಿಯಿಲ್ಲ, ಸ್ಥಿರವಾಗಿ ಅಲ್ಲಿಯೇ ಜೀವ ಇರುವ ಭರವಸೆಯಿಲ್ಲ.

ಮುದದಿಂದಲೋಲ್ಯಾಡೊ—ವಿಷಯಸುಖಗಳೇ ಸುಖಗಳು ಎಂದು ನಂಬಿ ಪ್ರಾಪಂಚಿಕ ಭೋಗದಲ್ಲೇ ತೊಡಗಿಸುವ ಮನೆ, 'ಸುಳ್ಳುಮನೆ'ಯೆಂದರೆ ಮಾಯೆಯ ಜಾಲ

ಇದಿರಾಗಿ —ಆದರೆ ದೇಹದ ದಹರಾಕಾಶದಲ್ಲಿ ಪರಮಾತ್ಮನ ಸಾನ್ನಿಧ್ಯವನ್ನೂ ಹೊಂದಿರುವ ಮನೆ , ಬಿಂಬ-ಪ್ರತಿಬಿಂಬರಾದ ಈಶ್ವರ-ಜೀವರು ಒಂಪೆಡೆ ಕೂಡಿರುವುದೇ 'ದಿವ್ಯಬದುಕು'



## ೩೮

ಸೌರಾಷ್ಟ್ರ ಅಟ್ಟ

ರಾಮ ರಾಮೆನ್ನಿರೊ ನರಜನ್ಮ ಸ್ಥಿರವಲ್ಲ ರಾಮ ರಾಮ ಪ

ಇಂಥ ಕೋಮಲಾಂಗನ ನಾಮ ಆ ವೇಳೆಗೊದಗದು ರಾಮ ರಾಮ ಅ

ಆರಿಗೆ ಆರಿಲ್ಲ ತನಗೆ ತಾನಲ್ಲದೆ ರಾಮ ರಾಮ ತನ್ನ
ನಾರಿಯು ಮೊದಲಾದವರು ಸರಿ ಬಾರರು ರಾಮ ರಾಮ ೧

ಓರಂತೆ ಸಾಕಿದ ಸುತರು ತನ್ನವರಲ್ಲ ರಾಮ ರಾಮ
ಧಾರುಣಿ ಪಶು ಧಾನ್ಯ ಧನವು ಹಿಂದುಳಿವುವೊ ರಾಮ ರಾಮ ೨

ಕೆಟ್ಟ ಸಂಸಾರದಿ ಎಷ್ಟಕ್ಕು ಸುಖವಿಲ್ಲ ರಾಮ ರಾಮ
ಸೃಷ್ಟಿಯೊಳ್ ಪುರಂದರವಿಠಲನ ಮರೆಯದೆ ರಾಮ ರಾಮ ೩

ಆರಿಗೆ ಆರಿಲ್ಲ —'ಉದ್ಧರೇದಾತ್ಮನಾತ್ಮಾನಂ' ಎಂಬ ಸ್ಮೃತಿವಾಕ್ಯದ ಛಾಯೆ
ಓರಂತೆ ಸಾಕಿದ —'ಓರ್ ಅಂತೆ', ಒಬ್ಬನೇ ಮಗನೆಂಬಂತೆ ಪ್ರೀತಿಯಿಂದ ಸಾಕಿದ
ಧಾರುಣಿ—ಭೂಮಿ



ಕಾಂಬೋದಿ ಝಂಪೆ

ಎಂತು ನೋಡಿದರು ಚಿಂತೆ ಈ ಒಡಲು
ನಿಶ್ಚಿಂತರಾಗಿಹರ ನಾನೆಲ್ಲಿಂ ಕಾಣೆ ಪ

ಬ್ರಹ್ಮನಿಗೆ ಶಿರಹೋಗಿ ಬಾಡಿ ಬಳಲುವ ಚಿಂತೆ
ಮುನ್ನ ಮಾರುತಿಗೆ ಕಪಿಯಾದ ಚಿಂತೆ
ಮನ್ಮಥಗೆ ತನು ಸುಟ್ಟು ಬೂದಿಯಾಗಿಹ ಚಿಂತೆ
ಕಣ್ಣು ಮೂರುಳ್ಳವಗೆ ತಿರಿದುಂಬ ಚಿಂತೆ ೧

ಕಾಮಧೇನುವಿಗೆ ಕರೆದೊಯ್ವರೆಂಬ ಚಿಂತೆ
ಕಾಮಿನಿಯರಿಗೆ ಒಡವೆ ವಸ್ತ್ರದ ಚಿಂತೆ
ಸೀಮೆಯಾಳುವ ಧೊರೆಗೆ ಪರ ಧೊರೆಗಳ ಚಿಂತೆ
ಪಾಮರನಿಗೆ ಬರಹ ಬಾರದಿಹ ಚಿಂತೆ ೨

ಧರ್ಮಾತ್ಮರೆಲ್ಲರಿಗೆ ದೀನಜನರಾ ಚಿಂತೆ
ಕರ್ಮಾತ್ಮರೆಲ್ಲರಿಗೆ ಕೆಡುವ ಚಿಂತೆ
ಮರ್ಮ ಬೆಳೆಸುವರಿಗೆ ವೈರಿ ಕೊಲ್ಲುವ ಚಿಂತೆ
ಬರ್ಮಣಗೆ ಸತತ ಮೃಷ್ಟಾನ್ನದ ಚಿಂತೆ ೩

ಭಕ್ತರಿಗೆ ಗುರುವಿನೊಳು ಮುಕ್ತಿ ಬೇಡುವ ಚಿಂತೆ
ಮುಕ್ತರಿಗೆ ಪರಮಾತ್ಮ ದೊರೆವ ಚಿಂತೆ
ಯುಕ್ತಿ ಬಲ್ಲವಗೆ ವಿವೇಕವಾಡುವ ಚಿಂತೆ
ವಿರಕ್ತನಾದವಗೆ ಕಾಮವ ಸುಡುವ ಚಿಂತೆ ೪

ಕ್ಷುದ್ರ ರಕ್ಕಸರಿಗೆಲ್ಲರನು ಕೊಲ್ಲುವ ಚಿಂತೆ
ನಿದ್ರೆ ಬಾರದವಗೆ ರಾತ್ರಿ ಚಿಂತೆ
ಕದ್ದು ತರಲ್ಪೋದವಗೆ ಕೋಳಿ ಕೂಗುವ ಚಿಂತೆ
ಮುದ್ದು ಪುರಂದರ ವಿಠ್ಠಲನ ನೆನೆಯೆ ನಿಶ್ಚಿಂತೆ ೫

[ಪುರಾಣಸಂದರ್ಭಗಳನ್ನೂ ನಿತ್ಯಜೀವನದ ಸಂದರ್ಭಗಳನ್ನೂ ಗಮನಿಸಿ ಲೌಕಿಕರಾದ ಮನುಷ್ಯರಿಗೆ ಚಿಂತೆ ತಪ್ಪದು ಎಂದು ಹೇಳುವ ಹಾಡು ]

ಬ್ರಹ್ಮನಿಗೆ — ಬ್ರಹ್ಮನಿಗೆ ಮೊದಲು ಐದು ಮೊಗಗಳಿದ್ದುವೆಂದೂ, ಶಿವನು ಅಸೂಯೆಯಿಂದ ಅವನದೊಂದು ಮೊಗವನ್ನು ಚಿವುಟಿ ಕಿತ್ತನೆಂದೂ, ಆ ಬ್ರಹ್ಮಹತ್ಯಾದೋಷಕ್ಕೆ ಫಲವಾಗಿ ಬ್ರಹ್ಮನ ಕಪಾಲವು ಶಿವನ ಕೈಗೆ ಅಂಟಿಕೊಂಡುಬಿಟ್ಟಿತೆಂದೂ, ಅದರ ಬಾಧೆಯನ್ನು ತೀರಿಸಿಕೊಳ್ಳಲು ಶಿವನು ಅಂಡಲೆದು ಕಡೆಗೆ ಕಾಶಿಯಲ್ಲಿ ಈಗ ಕಪಾಲಮೋಚನ ಎಂದು ಪ್ರಸಿದ್ಧವಾಗಿರುವ ಸ್ಥಳದಲ್ಲಿ ಸ್ನಾನ ಮಾಡಲು ಕಪಾಲವು ಅವನ ಕೈಬಿಟ್ಟಿತೆಂದೂ ಪುರಾಣದ ಕಥೆ

ಮುನ್ನ ಮಾರುತಿಗೆ —ಅಂಜನಾದೇವಿಯ ಮಗನಾಗಿ ಸುಂದರನಾಗಿದ್ದ ಮಾರುತಿಯು ಸೂರ್ಯನನ್ನು ತಿನ್ನಲು ಹೋಗಿ ಪೆಟ್ಟು ತಿಂದು ಮುಖವು ಕೆಂಪು ಬಣ್ಣಕ್ಕೆ ತಿರುಗಿ ದವಡೆಗಳು ಉಬ್ಬಿ ಕಪಿಮುಖವಾಯಿತೆಂದು ಪುರಾಣದ ನಿರೂಪಣೆ

ಮನ್ಮಥಗೆ —ಶಿವನ ತಪಸ್ಸನ್ನು ಕೆಡಿಸಲು ಇಂದ್ರನಿಂದ ಪ್ರೇರಿತನಾಗಿ ಹೋದ ಮನ್ಮಥನು ಸಿಟ್ಟಿಗೆದ್ದ ಶಿವನ ಹಣೆಗಣ್ಣಿಂದ ಸುಟ್ಟು ಬೂದಿಯಾದ ಕಥೆ ಸುಪ್ರಸಿದ್ಧವಾದುದು , ಕಾಳಿದಾಸನ 'ಕುಮಾರ ಸಂಭವ' ಕಾವ್ಯದಲ್ಲಿ ಇದರ ವರ್ಣನೆಯಿದೆ

ಕಣ್ಣು ಮೂರುಳ್ಳವಗೆ —ಶಿವನಿಗೆ ದಿಗಂಬರನಾಗಿ, ನಿಷ್ಕಿಂಚನನಾಗಿ ಭಿಕ್ಷಾಟನೆ ಮಾಡುವ ಸ್ಥಿತಿ ಒದಗಿದುದೂ ಪುರಾಣದ ಕಥೆಯೇ ದಕ್ಷಿಣ ದೇಶದಲ್ಲಿ 'ಭಿಕ್ಷಾಂಡರ್ ಕೋವಿಲ್' ಎಂಬ ಕ್ಷೇತ್ರದ ಸ್ಥಳಪುರಾಣದಲ್ಲೂ ಇದು ಬಂದಿದೆ ಶಿವನ ಲೀಲಾಮೂರ್ತಿಗಳಲ್ಲಿ 'ಭಿಕ್ಷಾಟನ ಮೂರ್ತಿ' ಎಂಬುದೂ ಒಂದು

ಕಾಮಧೇನುವಿಗೆ —ಕಾಶ್ಯಪ-ಸುರಭಿಯರ ಮಗಳಾದ, ದೇವಲೋಕದ ಹಸುವಾದ ಕಾಮಧೇನುವನ್ನು ದೈತ್ಯದಾನವರು ದೇವಲೋಕವನ್ನು ದಾಳಿಮಾಡಿ ಆಡಿಗಡಿಗೆ ಕೊಡೊಯ್ದಿದ್ದರೆಂದು ಕಾಳಿಕಾಪುರಾಣದಲ್ಲಿ ಉಲ್ಲೇಖವಿದೆ

ಪಾಮರ . —ಮೂರ್ಖ

ಧರ್ಮಾತ್ಮರೆಲ್ಲರಿಗೆ —ದಾನ ಮಾಡುವ ಜನರಿಗೆ ಬಡವರದ್ದೇ ಗೀಳು

ಕರ್ಮಾತ್ಮರೆಲ್ಲರಿಗೆ —ಕರ್ಮವು ಬಲವಾದರೆ ದಾರಿಗಾಣದೆ ಕೆಟ್ಟ ಕೆಲಸಕ್ಕೆ ತೊಡಗುವ ಪ್ರವೃತ್ತಿ ಬರುತ್ತದೆ

ಮರ್ಮ ಬೆಳೆಸುವರಿಗೆ —ಕುತಂತ್ರವನ್ನೇ ಹಿಡಿದಿರುವ ರಾಜಕಾರಣಿಗಳಿಗೆ

ಬರ್ಮಣರಿಗೆ —ಬ್ರಾಹ್ಮಣರಿಗೆ

ಕದ್ದು ತರಲ್ಹೋದವಗೆ —ಕಳ್ಳನಿಗೆ ಬೆಳಗಾದೀತೆಂಬ ಅಂಜಿಕೆ

## ೪೦

ನವರೋಜು ಆದಿ

ಡೊಂಕು ಬಾಲದ ನಾಯಕರೆ ನೀವೇನೂಟ ಮಾಡಿದಿರಿ ಪ

ಕಣಕ ಕುಟ್ಟೋ ಅಲ್ಲಿಗೆ ಹೋಗಿ
ಹಣಿಕಿ ಇಣಿಕಿ ನೋಡುವಿರಿ
ಕಣಕ ಕುಟ್ಟೋ ಒನಕೆಲಿ ಬಡಿದರೆ
ಕುಂಯಿ ಕುಂಯಿ ರಾಗವ ಹಾಡುವಿರಿ ೧

ಹುಗ್ಗಿ ಮಾಡೋ ಅಲ್ಲಿಗೆ ಹೋಗಿ
ತಗ್ಗಿ ಬಗ್ಗಿ ನೋಡುವಿರಿ
ಹುಗ್ಗಿ ಮಾಡೋ ಸೌಟಲಿ ಬಡಿದರೆ
ಕುಂಯಿ ಕುಂಯಿ ರಾಗವ ಮಾಡುವಿರಿ ೨

ಹಿರೇ ಬೀದಿಯಲಿ ಓಡುವಿರಿ
ಕರೇ ಬೂದಿಯಲಿ ಹೊರಳುವಿರಿ
ಪುರಂದರವಿಠ್ಠಲರಾಯನ ಈ ಪರಿ
ಮರೆತು ಸದಾ ನೀವ್ ಚರಿಸುವಿರಿ

[ನಿತ್ಯಯಾತ್ರೆಯ ಒಂದು ಸಂದರ್ಭದಲ್ಲಿ ಅನ್ನಕ್ಕಾಗಿ ಅಲೆದಾಡುವ ಬೀದಿ ನಾಯಿಗಳನ್ನು ನೋಡಿ ಈ ಪದ ಹೊರಮ್ಮಿತೆಂದು ತೋರುತ್ತದೆ ಸಾಮಾನ್ಯ ಮನುಷ್ಯರಿಗೂ ಈ ನಾಯಿಗಳಿಗೂ ಇರುವ ಸಾದೃಶ್ಯ ಅವರಿಗೆ ತಟಕ್ಕನೆ ತೋರಿಕೊಂಡಿತು ಆದ್ದರಿಂದ ಈ ನಾಯಿಗಳನ್ನು ಮಾರ್ಮಿಕವಾಗಿ 'ನಾಯಕರೆ ಎಂದು ಕರೆದಿದ್ದಾರೆ ಅಧಿಕಾರವನ್ನು ಮೆರೆಸುತ್ತ, ಅನ್ನಕ್ಕಾಗಿ ಹಂಬಲಿಸುವ ನಾಯಕರೂ ದಿಟವಾಗಿ ನಾಯಿಗಳೇ ಎಂದು ದಾಸರ ಆಶಯ ]

ಕಣಕ ಕುಟ್ಟೋ —ಕಣಕ (ಕಣುಕ) ಎಂದರೆ ಹಿಟ್ಟು, ಸಾಮಾನ್ಯವಾಗಿ ಗೋಧಿಯ ಹಿಟ್ಟು

ಹಣುಕಿ—ಕಳ್ಳತನದಲ್ಲಿ ನೋಡುವುದು

ಹಿರೇಬೀದಿ—ದೊಡ್ಡ ಹಾದಿ, ರಾಜಮಾರ್ಗ

ಭೈರವಿ ಅಟ್ಟ

ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು ಪ
ನಾಯಿ ಕುನ್ನಿಗಳಂತ ಪರರ ಪೀಡಿಸುತ ಅ

ಉದಯಕಾಲದಲೆದ್ದು ಸಂಧ್ಯಾವಿಧಿಯು ಬಿಟ್ಟು
ಪದುಮನಾಭನ ಪಾದಸ್ಮರಣೆ ಮೊದಲಿಲ್ಲದೆ
ಮುದದಿ ನಿನ್ನರ್ಚಿಸದೆ ನರರ ಸದನವ ಪೊಕ್ಕು
ಒದಗಿ ಸೇವೆಯ ಮಾಡಿ ಅವರ ಬಾಗಿಲನು ೧

ಕಲ್ಲ ಕರಗಿಸಬಹುದು ಹುರಿಗಡಲೆಯೊಳು ಅದರ
ತೈಲವನು ತೆಗದಾದರುಣ್ಣಲುಬಹುದು
ಒಲ್ಲದವರ ಮನಸು ಮೆಚ್ಚಿಸಲರಿಯೆನೈ
ಹಲ್ಲು ಕಿರಿಯುತ ಹಂಬಲಿಸಿ ಬಾಯಬಿಡುತ ೨

ಇಂತು ನಾನಾ ಚಿಂತೆಯಲಿ ನಿನ್ನ ನೆನೆಯದೆ
ಭ್ರಾಂತಿಯೆಂತೆಂಬ ಹೆಬ್ಬುಲೆಯೊಳು ಸಿಲುಕಿ
ಅಂತ್ಯವ ನಾ ಕಾಣೆ ಆದರಿಸುವರಿಲ್ಲ
ಚಿಂತೆಯ ಬಿಡಿಸಯ್ಯ ಪುರಂದರವಿಠಲ ೩

[ಹರಿದಾಸರೂ ಲೌಕಿಕ ಜನರಂತೆ ಅವರಿವರನ್ನು ಆಶ್ರಯಿಸುವುದು ತಪ್ಪಲಿಲ್ಲವೆಂದು ದಾಸರ ಕೊರಗು ನಿತ್ಯಯಾತ್ರೆಯೂ ಕಂಡುಕಂಡವರ ಮನೆಬಾಗಿಲು ಕಾಯುವುದೇ ತಾವು ಉಪಾದಾನಕ್ಕೆ ಹೋಗಿ ಹರಿಕೀರ್ತನೆಯೆಂದು ಹಾಡಿದರೂ ಮನೆಯವರಿಗೆ ಬೇಸರ ಬರಬಹುದೆಂದು ಅವರ ಅಂಜಿಕೆ ಹೊಟ್ಟೆಹೊರೆದುಕೊಳ್ಳುವ ಆಗತ್ಯ ಹರಿದಾಸರಿಗೂ ಚಿಂತೆಯೇ ]

ಕಲ್ಲು ಕರಗಿಸಬಹುದು —ದಾಸರು ಹರಿಕೀರ್ತನೆಯನ್ನು ಹಾಡಿದ ಮಾತ್ರಕ್ಕೆ ಲೌಕಿಕ ಜನರ ಮನಸ್ಸು ಪರಿವರ್ತನೆಯಾಗಲಾರದು ವಿಷಯಾಸಕ್ತರಾದವರಿಗೆ ಹರಿ

ಜಜನೆಯ ಸ್ವಾರಸ್ಯ ತಿಳಿಯುವುದಿಲ್ಲ ಅವರದ್ದು 'ಒಲ್ಲದ ಮನಸ್ಸು' ಅದನ್ನು ಮೆಚ್ಚಿಸುವುದು ಬಲುಕಷ್ಟ

ಅಂತ್ಯವ ನಾ ಕಾಣೆ—ಈ ಪರಾಶ್ರಯದ ಬದುಕು ಎಂದಿಗೆ ಮುಗಿದೀತೋ ಕಾಣೆ

ಆದರಿಸುವವರಿಲ್ಲ—ನನ್ನ ಕಷ್ಟವನ್ನು ಮನಸ್ಸಿಗೆ ತಂದುಕೊಂಡು ಆದರದಿಂದ ಧೈರ್ಯ ಕೊಡುವ ಜನರು ಕಾಣುವುದಿಲ್ಲ



ಪುನ್ನಾಗವರಾಳಿ ಚಾಪು

ಕಾಲ ಕಳೆದನಲ್ಲಾ ಜ್ಞಾನ ಬರಲಿಲ್ಲವಲ್ಲಾ ಪ
ಕಾಲನವರು ಕರೆಯಬಂದರೆ ಏನು ಹೇಳಲಿ ಸೊಲ್ಲಾ ಅ

ಬಾಲತನದಿ ಜನಿಸಿ ತಾಯಿ ಮೊಲೆಗೆ ಭ್ರಮಿಸಿ
ಹಾಲು ಬೆಣ್ಣೆ ಸವಿದುಂಡು ಹಸುಕೂಸು ಎಂದೆನಿಸಿ ೧

ಚೆಂಡು ಬುಗುರಿಯಾಡಿ ಚೆಲುವ ಊಟವ ಬೇಡಿ
ಹಿಂಡು ಗೋವಳರೊಡನೆ ಕೂಡಿ ಅಲ್ಲಿ ಮನಸು ಮಾಡಿ ೨

ಪ್ರಾಯದಲ್ಲಿ ಸಿಕ್ಕಿ ಮಾಯದಲ್ಲಿ ಸೊಕ್ಕಿ
ಸ್ತ್ರೀಯರೊಡನೆ ಸರಸವಾಡಿ ದುರುಳ ಬುದ್ಧಿಯ ಮಾಡಿ ೩

ಮಕ್ಕಳಾಧೀನದಿ ಸಿಕ್ಕಿದೆನೊ ದಿಕ್ಕು ಕಾಣದೆ ಕೊನೆಗೆ
ಕಕ್ಕುಲಾತಿ ಎಂಬೋ ಬುದ್ಧಿ ತೋರಿತೆನ್ನ ಮನಕೆ ೪

ರಾಮಪೂಜೆಯನ್ನು ಮಾಡಿ ದಣಿಯಲಿಲ್ಲಾ ಕೈಯಿ
ಮನ್ನ ಸ್ವಾಮಿ ಪುರಂದರವಿಠಲನ್ನಾ ನೋಡಲಿಲ್ಲಾ ಕಣ್ಣು ೫

[ಇಷ್ಟು ಕಾಲ ವ್ಯರ್ಥವಾಗಿ ಕಳೆಯಿತೆಂದು ದಾಸರು ಇಲ್ಲಿ ಪರಿತಾಪಪಟ್ಟುಕೊಳ್ಳುತ್ತಾರೆ ವೈರಾಗ್ಯ ಒದಗಿದುದು ಅವರ ನಡುವಯಸ್ಸಿನಲ್ಲಿ, ಅಲ್ಲಿಯವರೆಗೆ ಬದುಕಿದ್ದು ಏನೂ ಉಪಯೋಗವಾಗಲಿಲ್ಲವೆಂದು ಅವರ ಕೊರಗು ]

ಕಾಲ ಕಳೆದೆನಲ್ಲಾ —ಪ್ರಾಪಂಚಿಕ ವಿಷಯಗಳಲ್ಲಿಯೆ ತೊಡಗಿರುತ್ತ ಕರ್ಮ ಕಟ್ಟಿಕೊಂಡಿದ್ದಾಯಿತು, ಮುಕ್ತಿಗೆ ಸಾಧಕವಾದ ಜ್ಞಾನದ ಕಡೆ ನನ್ನ ಗಮನ ಹರಿಯಲಿಲ್ಲ

ಕಾಲನವರು—ಯಮದೂತರು

ಕಕ್ಕುಲಾತಿ—ಕಕ್ಕುಲತೆ, ಪ್ರೀತಿ, ವಿಧಿಯಿಲ್ಲದೆ ಒದಗುವ ವಿಶ್ವಾಸ

## ೪೩

ಕಾಪಿ | ಅಟ್ಟ

ಹರಿಯೆನ್ನು, ಹರಿಯೆನ್ನು, ಹರಿಯೆನ್ನು ಪ್ರಾಣಿ ಪ
ಹರಿಯೆನ್ನದಿದ್ದರೆ ನರಹರಿಯಾಣೆ ಅ

ಹೆಂಡಿರು ಮಕ್ಕಳು ಹೆರವರು ಪ್ರಾಣಿ
ಕೊಂಡು ಹೋಗುವಾಗ ಒಬ್ಬರ ಕಾಣೆ ೧

ದಾನವಿಲ್ಲದೆ ದ್ರವ್ಯ ಗಳಿಸಿದೆ ಪ್ರಾಣಿ
ಪ್ರಾಣ ಹೋಗುವಾಗ ಕಾಣೆ ದುಗ್ಗಾಣಿ ೨

ನೀರಮೇಲಿನ ಗುಳ್ಳೆ ಸಂಸಾರ ಪ್ರಾಣಿ
ಪುರಂದರವಿಠ್ಠಲ ಸಾರಿದ ಪ್ರಾಣಿ ೩



ಜಿಲಹರಿ ಅಟ್ಟ

ಯಾರಿಗೆ ಯಾರುಂಟು ಎರವಿನ ಸಂಸಾರ
ನೀರಮೇಲಣ ಗುಳ್ಳೆ ನಿಜವಲ್ಲ ಹರಿಯೇ ಪ

ಬಾಯಾರಿತು ಎಂದು ಬಾವಿನೀರಿಗ ಪೋದೆ
ಬಾವಿಲಿ ಜಲ ಬತ್ತಿ ಬರಿದಾಯ್ತು ಹರಿಯೆ ೧

ಬಿಸಿಲು ಗಾಳಿಗಾಗಿ ಮರದ ನೆರಳಿಗೆ ಪೋದೆ
ಮರ ಬಗ್ಗಿ ಶಿರದ ಮೇಲೊರಗಿತೋ ಹರಿಯೆ ೨

ಅಡವಿಯೊಳ್ಮನೆಮಾಡಿ ಗಿಡಕೆ ತೊಟ್ಟಿಲು ಕಟ್ಟಿ
ತೊಟ್ಟಿಲಿನ ಶಿಶು ಮಾಯವಾಯಿತು ಹರಿಯೆ ೩

ತಂದೆ ಶ್ರೀ ಪುರಂದರವಿಠಲ ನಾರಾಯಣ
ನಾ ಸಾಯೊ ಹೊತ್ತಿಗೆ ನೀ ಕಾಯೊ ಹರಿಯೆ ೪

[ಹರಿದಾಸರ ವೈರಾಗ್ಯ ಈ ಪದದಲ್ಲಿ ವ್ಯಕ್ತವಾಗಿದೆ ಸಂಸಾರವೆಂಬುದು ಸ್ಥಿರವಲ್ಲ, ಜೀವರ ಸ್ವರೂಪೋದ್ಧಾರಕ್ಕೂ ಅನುಕೂಲವಾಗಲಾರದು ಸಂಸಾರದ ಸುಖಗಳನ್ನೇ ನಂಬಿಕೊಂಡಿರುವ ಮನುಷ್ಯರಿಗೆ ಒದಗುವ ಬವಣೆಯನ್ನು ಇಲ್ಲಿ ಸ್ವಾರಸ್ಯವಾಗಿ ನಿರೂಪಿಸಿದ್ದಾರೆ ]

ಯಾರಿಗೆ ಯಾರುಂಟು—'ಋಣಾನುಬಂಧರೂಪೇಣ ಪತಿಪತ್ನಿಸುತಾಲಯಾಃ' ಎನ್ನುವ ಮಾತಿನ ಛಾಯೆ ಹಿಂದೆ ಮಾಡಿದ ಕರ್ಮಕ್ಕೆ ಫಲವಾಗಿ ಈ ಜನ್ಮದ ನೆಂಟು, ಕುಟುಂಬ , ಕರ್ಮ ತೀರಿತೆಂದರೆ ನೆಂಟೂ ಹರಿಯುತ್ತದೆ, ಕುಟುಂಬ ಬಯಲಾಗುತ್ತದೆ ಆದ್ದರಿಂದ ಇದು 'ಎರವಿನ ಸಂಸಾರ', ಸಾಲ ತೀರಿಸಲು ಉಂಟಾದದ್ದು

ಪಂತವರಾ‌ಿ ಏಕ

ಗೂಡು ಸಿಕ್ಕಲಿಲ್ಲಾ ಗೂಡಿನ
ಜಾಡು ತಿಳಿಯಲಿಲ್ಲಾ ಪ

ಜೋಡು ಹೆಂಡಿರು ಓಡಿಹೋದರು
ಗೋಡೆ ಬಿದ್ದು ಬಯಲಾಯಿತಲ್ಲಾ ಅ

ಎಚ್ಚರಗೊಳಲಿಲ್ಲಾ, ಮದದಲಿ ಹುಚ್ಚನಾದೆನಲ್ಲಾ
ಕಿಚ್ಚಿನಲಿ ಬೆಲ್ಲದಚ್ಚು ಬಿದ್ದು ತಾ
ಹುಚ್ಚೆದ್ಹೋದಂತಾಯಿತಲ್ಲಾ ೧

ಮುಪ್ಪು ಬಂದಿತಲ್ಲಾ, ಪಾಯಸ ತುಪ್ಪವನುಣಲಿಲ್ಲಾ
ತುಪ್ಪದ ಬಿಂದಿಗೆ ತಿಪ್ಪೆಯ ಮೇಲ
ಧೊಪ್ಪನೆ ಬಿದ್ದಂತಾಯಿತಲ್ಲಾ ೨

ಯೋಗವಳಿಯಿತಲ್ಲಾ ಮುಂದಣ
ಭೋಗ ತಿಳಿಯಲಿಲ್ಲ
ನಾಗಶಯನ ಶ್ರೀ ಪುರಂದರವಿಠಲನ
ನೀಗಿ ಮರೆದು ಮನ ಬರಡಾಯಿತಲ್ಲಾ ೩

[ಪ್ರಾಪಂಚಿಕ ವಿಷಯಗಳನ್ನೇ ನಂಬಿಕೊಂಡಿರುವ ಜನರನ್ನು ಎಚ್ಚರಿಸಲೆಂದು ಹೊರಟಿರುವ ಹಾಡು ಇದು ]

ಗೂಡು—ನೆಮ್ಮದಿಯ ನೆಲೆ 'ಯತ್ರ ವಿಶ್ವಂ ಭವತ್ಯೇಕನೀಡಂ' ಎನ್ನುವ ಶ್ರುತಿ ವಾಕ್ಯದಲ್ಲಿ ಹರಿಯೇ ಜಗತ್ತಿಗೆಲ್ಲ ನೆಲೆ (ಹಗಲೆಲ್ಲ ಹಾರಾಡುವ ಹಕ್ಕಿಗಳಿಗೆ ಸಂಜೆಯ ವೇಳೆ ನೆಲೆಯಾಗುವ ಗೂಡಿನಂತೆ) ಎಂಬ ಸೂಚನೆಯಿದೆ ಇದನ್ನೇ ದಾಸರು ಇಲ್ಲಿ ಎತ್ತಿಕೊಂಡಿದ್ದಾರೆ.

ಗೂಡಿನ ಜಾಡು—ಭಗವಂತನ ಹಿರಿಮೆಯ ಅರಿವು (ಮಾಹಾತ್ಮ್ಯಜ್ಞಾನ)

ಜೋಡು ಹೆಂಡಿರು—ಪಾಪ–ಪುಣ್ಯಗಳೆಂಬ ಸಂಗಾತಿಗಳು

ಗೋಡೆ—ಆವರಣ, ಮಾಯೆ , ಸ್ವರೂಪಜ್ಞಾನವನ್ನು ಮರೆಮಾಡುವಂಥದು

ಪಾಯಸ—'ರಾಮನಾಮವೆಂಬ ಪಾಯಸ'

ತುಪ್ಪ—ಶಾಸ್ತ್ರವಿಚಾರದಿಂದ ಒದಗಿಬಂದ ವಿವೇಕ

ತಿಪ್ಪೆ—ಸಂಸಾರವೆಂಬ ಕಸದ ರಾಶಿ

ಯೋಗ —ಸಾಧನಶರೀರವೆಂಬ ಅನುಕೂಲ . ಮಾನವ ಜನ್ಮ ಬಂದದ್ದು ಏಕೆಂಬ ಅರಿವಿಲ್ಲದೆ ಸದವಕಾಶವನ್ನು ಕಳೆದುಕೊಂಡೆ . ಮುಕ್ತಿಗೆ ನೆರವಾಗುವ ಜ್ಞಾನವನ್ನು ಪಡೆದುಕೊಳ್ಳಲಿಲ್ಲ

ಮುಂದಣ ಭೋಗ—ಮುಂದಿನ ಜನ್ಮ ಯಾವುದೋ, ಅದರಲ್ಲಿ ಒದಗುವ ಕಷ್ಟ–ಕಾರ್ಪಣ್ಯಗಳೇನೋ, ಅನುಕೂಲಗಳೇನೋ ಎಂಬುದನ್ನು ಹೇಳಲಾಗುವುದಿಲ್ಲ



ಮಧ್ಯಮಾವತಿ ಆದಿ

ಕದವ ಮುಚ್ಚಿದಳಿದಕೋ ಗಯ್ಯಾಳಿ ಮೂಳಿ ಪ

ಕದವ ಮುಚ್ಚಿದಳಿದೆಕೋ ಚಿಲುಕ ಅಲ್ಲಾಡುತಿದೆ
ಒಳಗಿದ್ದ ಪಾಪವು ಹೋದೀತು ಹೊರಗೆಂದು ಅ

ಭಾರತ ರಾಮಾಯಣ ಪುಣ್ಯಕಾವ್ಯಂಗಳ
ಸಾರತತ್ವದ ಬಿಂದು ಸೇರೀತು ಒಳಗೆಂದು ೧

ಅಂದುಗೆ ಕಿರುಗೆಜ್ಜೆ ಪುಂಗಾಲಿಲಿಳವಟ್ಟ
ಧೀಧಿಮಿ ಧಿಮಿಕೆಂದು ಕುಣಿವ ದಾಸರ ಕಂಡು ೨

ನಂದನ ಕಂದ ಗೋವಿಂದ ಮುಕುಂದನ
ಚಂದವಾದ ಧ್ವನಿ ಹೋದೀತು ಕರ್ಣಕೆಂದು ೩

ಹರಿಶರಣರ ಪಾದ ಸರಸಿಜ ಯುಗಳದ
ಪರಮ ಪಾವನವಾದ ರಜವು ಬಿದ್ದೀತೆಂದು ೪

ಮಂಗಳ ಮೂರುತಿ ಪುರಂದರ ವಿಠಲನ
ತುಂಗವಿಕ್ರಮ ಪದದಂಗುಳಿ ಸೋಕೀತೆಂದು ೫

[ನಿತ್ಯಯಾತ್ರೆಯ ಸಂದರ್ಭದಲ್ಲಿ ಒಂದು ದಿನ ಯಾವಳೋ ಹೆಂಗಸು, ದಾಸರು ಮನೆಯ ಮುಂದೆ ನಿಂತಂತೆಯೇ, ಮನೆಬಾಗಿಲು ಮುಚ್ಚಿಕೊಂಡು ಒಳಗೆ ಹೋದುದು ಇಲ್ಲಿನ ಸಂದರ್ಭ ಅದನ್ನು ನೋಡಿ ದಾಸರು ನಗೆಯಾಟವಾಡುತ್ತಾರೆ ]

ಚಿಲುಕ ಅಲ್ಲಾಡುತಿದೆ—ಆಗಲೇ ಬಾಗಿಲು ಮುಚ್ಚಿದ್ದನ್ನು ತಿಳಿಸುವಂತೆ ಹೊರಗೆ ಅಗುಳಿ ಅಲುಗಾಡುತ್ತಿದೆ

ಒಳಗಿದ್ದ ಪಾಪವು —ಮನೆಗೆ ಬಾಗಿಲು ಎರಡು ಪ್ರಯೋಜನಗಳಿಗಾಗಿ ಒಳಗಿದ್ದವರು ಹೊರಗೆ ಹೋಗಲು, ಹೊರಗಿದ್ದವರು ಒಳಗೆ ಬರಲು ಪ್ರಾಪಂಚಿಕ

ಜನರಿಗೆ ಒಳಗಿರುವುದು ಆಸೆ, ಅಸೂಯೆ ಮೊದಲಾದ ಕೆಟ್ಟಸಾಮಗ್ರಿ ಇವು ಹೊರಗೆ ಹೋಗದಂತೆ ಮನಸ್ಸನ್ನು ಅವುಗಳಲ್ಲೇ ನೆಟ್ಟು ಅವನ್ನು ಬೇರೂರಿಸುತ್ತಾರೆ ಇದೇ 'ಕದವನ್ನು ಮುಚ್ಚುವುದು'

ಭಾರತರಾಮಾಯಣ —ಶಾಸ್ತ್ರಗ್ರಂಥಗಳಲ್ಲಿರುವ ಪಾರಮಾರ್ಥಿಕ ತತ್ತ್ವದ ಕಡೆ ಜನರ ಮನಸ್ಸು ಹರಿಯುವುದಿಲ್ಲ

ಅಂದುಗೆ—ಕಾಲುಂಗರ

ತುಂಗವಿಕ್ರಮಪದದ—ವಿಷ್ಣುವಿನ ತ್ರಿವಿಕ್ರಮಾವತಾರದ ನೆನಪು ಇಲ್ಲಿದೆ ಭೂಮಿ, ಅಂತರಿಕ್ಷ, ವ್ಯೋಮ ಮೂರೂ ಸ್ಥಳಗಳನ್ನು ಆಕ್ರಮಿಸಿಕೊಂಡ ಸಂಗತಿ 'ತ್ರೀಣಿ ಪದಾ ವಿಚಕ್ರಮೇ ವಿಷ್ಣುಃ' ಎಂಬ ವೇದದ ಮಾತಿನಲ್ಲಿ ಇರುವುದನ್ನು ದಾಸರು ಇಲ್ಲಿ 'ತುಂಗವಿಕ್ರಮಪದ'ವೆಂದು ಬಣ್ಣಿಸಿದ್ದಾರೆ



ಪೂರ್ವಕಲ್ಯಾಣಿ ಆದಿ

ಕೊಟ್ಟವರು ಸರಿಯೆ, ಕೊಡದೆ ಬಿಟ್ಟವರು ಸರಿಯೇ ಪ

ಇಕ್ಕಿದವರಿಗುಂಟು ಮದದಲಿ
ಸೊಕ್ಕಿದರೇನುಂಟು
ರಕ್ಕಸಾಂತಕ ನಮ್ಮ ಲಕುಮಿಪತಿಯ ಮೊರೆ
ಹೊಕ್ಕವರಾದ ಭಜಕರಿಗೆ ೧

ಅರಸನಾದರೂ ಸರಿಯೆ, ನಮಗೆ ತಿರುಕನಾದರೂ ಸರಿಯೆ
ಸರಸ ವಿರಸದಿಂ ನುಡಿದರೇನು, ನರ
ಹರಿ ಪದಕಮಲವ ನಿರುತ ಭಜಿಪರಿಗೆ ೨

ಪುಟ್ಟಿಸಿದ ದೊರೆಯು ನಮಗೆ
ಹೊಟ್ಟೆಗೆ ಕೊಡದಿಹನೆ
ಬೆಟ್ಟದೊಡೆಯ ನಮ್ಮ ಪುರಂದರವಿಠಲನ
ಘಟ್ಟಿಯಾಗಿ ನಂಬಿದ ದಾಸರಿಗೆ ೩

[ನಿತ್ಯಯಾತ್ರೆಯಲ್ಲಿ ಎಲ್ಲ ಮನೆಗಳಲ್ಲೂ ಉಪಾದಾನ ದೊರೆತೀತೆಂಬ ನಿಶ್ಚಯವಿಲ್ಲ ಕೆಲವರು ಆದರದಿಂದ ಕರೆದು ಕೊಡುವರು , ಮತ್ತೆ ಕೆಲವರು, ಇಲ್ಲದೆಯೋ ಇದ್ದೂ ಸೊಕ್ಕಿಯೋ, ಕೊಡುವುದಿಲ್ಲ ಆದರೆ ಮಧುಕರವೃತ್ತಿಯ ದಾಸರಿಗೆ ಕೊಟ್ಟವರ ಮೇಲೆ ಅಭಿಮಾನವಾಗಲಿ ಕೊಡದಿದ್ದವರ ಮೇಲೆ ಮುನಿಸಾಗಲಿ ಇರದು ಹರಿಭಕ್ತರು ರಾಗ–ದ್ವೇಷಗಳನ್ನು ಬಿಟ್ಟಿರಬೇಕು , ದಿಟವಾದ ವೈರಾಗ್ಯದ ದೃಷ್ಟಫಲ ಔದಾಸೀನ್ಯ ]

ಇಕ್ಕಿದವರಿಗುಂಟು —ದಾನ ಮಾಡಿದವರಿಗೆ ಪುಣ್ಯದ ಫಲವಿದೆ , ದಾನ ತೆಗೆದು ಕೊಳ್ಳುವವರಿಗೆ ಇಂಥ ಫಲವಿರದು ಈ ಗುಟ್ಟನ್ನು ತಿಳಿದು ತಮ್ಮ ಹಿತಕ್ಕೆಂದೇ ದಾನಮಾಡುವವರು ಕೃತಕೃತ್ಯರಾಗುತ್ತಾರೆ. ಇದನ್ನರಿಯದೆ, 'ದಾನ ಮಾಡುವವನು ದೊಡ್ಡವನು, ದಾನಕ್ಕೆಂದು ಬೇಡಬಂದವನು ಹೀನ' ಎಂದು ಬಗೆದರೆ ಯಾವ ಫಲವೂ ಇರದು ತೈತ್ತಿರೀಯೋಪನಿಷತ್ತಿನಲ್ಲಿ ಬಮರ

"ಶ್ರದ್ಧಯಾ ದೇಯಂ, ಶ್ರಿಯಾ ದೇಯಂ, ಹ್ರಿಯಾ ದೇಯಂ, ಸಂವಿದಾ ದೇಯಂ" ಎಂಬ ವಾಕ್ಯದ ತಾತ್ಪರ್ಯ ಇಲ್ಲಿ ಮೂಡಿಬಂದಿದೆ

ಅರಸನಾದರು ಸರಿಯೆ —ಹರಿದಾಸರಿಗೆ ಇರಬೇಕಾದ ಸರ್ವಸಮತಾಭಾವದ ವಿವರಣೆ ಇದು

ಪ್ರಟ್ಟಿಸಿದ ದೊರೆ —ಭಗವಂತನು ತನ್ನ ಭಕ್ತರನ್ನು ಕಾಪಾಡುವುದು ಕಂಡಿತವೆಂಬ ವಿಶ್ವಾಸ, ಇದನ್ನೇ ಪ್ರಪತ್ತಿಶಾಸ್ತ್ರದಲ್ಲಿ 'ರಕ್ಷಿಷ್ಯತೀತಿ ವಿಶ್ವಾಸಃ' ಎಂದು ಉಲ್ಲೇಖಿಸಿದ್ದಾರೆ

ಬೆಟ್ಟದೊಡೆಯ—ತಿರುಮಲೆಯ ದೇವರು, ವೇಂಕಟೇಶ



ಮೋಹನ ಚಾಪು

ಹ್ಯಾಂಗ ಬರೆದಿತ್ತೊ ಪ್ರಾಚೀನದಲ್ಲಿ
ಹಾಂಗೆ ಇರಬೇಕು ಸಂಸಾರದಲ್ಲಿ ಅ

ಪಕ್ಷಿ ಅಂಗಳದಲ್ಲಿ ಬಂದು ಕೂತಂತೆ
ಆ ಕ್ಷಣದಲ್ಲಿ ಹಾರಿಹೋದಂತೆ ೧

ನಾನಾ ವರಿಯಲಿ ಸಂತೆ ನೆರೆದಂತೆ
ನಾನಾ ಪಂಥವ ಹಿಡಿದು ಹೋದಂತೆ ೨

ಮಕ್ಕಳಾಡಿ ಮನೆ ಕಟ್ಟಿದಂತೆ
ಆಟ ಸಾಕೆಂದು ಅಳಿಸಿ ಪೋದಂತೆ ೩

ವಸತಿಕಾರನು ವಸತಿ ಕಂಡಂತೆ
ಹೊತ್ತಾರೆದ್ದು ಹೊರಟು ಹೋದಂತೆ ೪

ಸಂಸಾರ ಪಾಶವ ನೀನೆ ಬಿಡಿಸಯ್ಯ
ಕಂಸಾರಿ ಪುರಂದರ ವಿಠ್ಠಲರಾಯ ೫

[ದಾಸರು ಕೈಗೊಂಡ ನಿತ್ಯಯಾತ್ರೆಯಲ್ಲಿ ಮನವರಿಕೆಯಾಗಬೇಕಾದ ಮನೋಧರ್ಮ 'ಮಾಡುವವನು ನಾನು, ಮಾಡಿಸುವವನು ಹರಿ' ಎಂಬುದು , ಬಂದುದೆಲ್ಲ, ಆಗುವುದೆಲ್ಲ ಭಗವದಿಚ್ಛೆ ಎಂಬುದು ಬದುಕಿನಲ್ಲಿ ನಾವು ಪಡೆದುಕೊಳುವುದೆಲ್ಲ ನಮ್ಮ ಕರ್ಮಾನುಸಾರವಾಗಿ ಎನ್ನುವ ವಿಶ್ವಾಸ ಮೂಲಭೂತವಾದುದು ಈ ಕರ್ಮವೆಂಬ ಆಗತ್ಯವನ್ನು ನಿವಾರಿಸುವುದು ಹರಿಕೃಪೆ ]

ಪ್ರಾಚೀನದಲ್ಲಿ—ಹಿಂದಣ ಜನ್ಮಗಳಲ್ಲಿ

ನಾನಾ ಪಂಥವ ಹಿಡಿದು—ಸಂತೆಗೆಂದು ನೆರೆದ ಜನರು ಸಂತೆ ಮುಗಿದಮೇಲೆ ತಮ್ಮ ತಮ್ಮ ದಾರಿ ಹಿಡಿದುಕೊಂಡು ಹೊರಡುವಂತೆ

ವಸತಿಕಾರನು—ರಾತ್ರಿಯಲ್ಲಿ ತಂಗಲು ಎಡೆಯನ್ನು ಅರಸುವ ಪ್ರಯಾಣಿಕ

ಪಂತುವರಾಳಿ ಚಾಪು

ಅಪಮಾನವಾದರೆ ಒಳ್ಳಿತು ಪ

ಅಪರೂಪ ಹರಿನಾಮ ಜಪಿಸುವ ಮನುಜಗೆ ಅ

ಮಾನದಿಂದ ಅಭಿಮಾನ ಪುಟ್ಟುವುದು
ಮಾನದಿಂದ ತಪ ಹಾನಿಯಾಗುವುದು
ಮಾನಿ ದುರ್ಯೋಧನಗೆ ಹಾನಿಯಾಯಿತು ಅನು
ಮಾನವಿಲ್ಲ ಮಾನಾಪಮಾನ ಸಮನಿಗೆ ೧

ಅಪಮಾನದಿಂದಲಿ ತಪ ವೃದ್ಧಿಯಾಗುವುದು
ಅಪಮಾನದಿಂದ ಪುಣ್ಯ ಸಫಲವಾಗುವುದು
ಅಪಮಾನದಿಂದಲಿ ನೃಪ ಧ್ರುವರಾಯಗೆ
ಕಪಟನಾಟಕ ಕೃಷ್ಣ ಅಪರೋಕ್ಷನಾದನು ೨

ನಾನೇನ ಮಾಡಲಿ ಯಾರಲ್ಲಿ ಹೋಗಲಿ
ಕಾನನ ಚರಾರಾಧ್ಯ ನೀನಿರಲು
ದೀನಜನರಕ್ಷಕ ನಮ್ಮ ಪುರಂದರವಿಠಲ
ಏನು ಬೇಡೆನಗಪಮಾನವೇ ಇರಲಿ ೩

[ನಿತ್ಯಯಾತ್ರೆಗೆ ಬರುವ ಹರಿದಾಸರನ್ನು ಹೀನಾಯದಿಂದ ಕಾಣುವ ಜನ ಇಲ್ಲದಿರಲಿಲ್ಲ. ಅವರು ತಮ್ಮನ್ನು ಜರಿಯುವುದನ್ನು ಮೂದಲಿಸುವುದನ್ನು ದಾಸರು ಕೇಳಿ ಅದಕ್ಕಾಗಿ ದುಗುಡಪಟ್ಟುಕೊಳ್ಳದೆ ಸಮಾಧಾನಚಿತ್ತರಾಗಿಯೇ ಇರುತ್ತಿದ್ದರು. ತಮಗೆ ತಾವೇ ಆಡಿಕೊಂಡ ಮಾತು ಈ ಹಾಡಿನಲ್ಲಿ ಹೊರಹೊಮ್ಮಿದೆ ]

ಮಾನದಿಂದ ಅಭಿಮಾನ—ಮಾನವೆಂದರೆ ಜನರು ತೋರಿಸುವ ಮನ್ನಣೆ, ಗೌರವ, ಇದರಿಂದ ವ್ಯಕ್ತಿಗೆ ತನ್ನಲ್ಲಿಯೇ ಹೆಚ್ಚಿನ ಹೆಮ್ಮೆ ಒದಗುವುದು ಅಭಿ–ಮಾನ (ತನಗೆ ತಾನೇ ತೋರಿಸಿಕೊಳ್ಳುವ ಮನ್ನಣೆ, ಗೌರವ)

ತಪ ಹಾನಿಯಾಗುವುದು—ಹರಿದಾಸರ ತಪಶ್ಚರ್ಯೆಯಲ್ಲಿ 'ಹರಿಯು ಪರಮ, ಸರ್ವ ಸಮರ್ಥ , ಜೀವನು ಅಲ್ಪ, ದುರ್ಬಲ' ಎಂಬ ನಿಲುವು ಆಧಾರಭೂತವಾದುದು ತಾನೇ ಬಲವಂತನೆಂದು ಭಾವಿಸಿಕೊಂಡಾಗ, ತಪಸ್ಸು ಕೆಡುವುದು

ಮಾನಿ ದುರ್ಯೋಧನನಿಗೆ—ಮಹಾಭಾರತದಲ್ಲಿ ದುರ್ಯೋಧನನಿಗೆ ಒದಗಿದ ಭಂಗವೆಲ್ಲ ಅವನ ಅಭಿಮಾನದ ಫಲವಾಗಿಯೇ ಸರಿಯಾದ ದಾರಿಯೆಂಬ ಅರಿವಿದ್ದರೂ ಅದನ್ನು ಹಿಡಿದರೆ ತನ್ನ ಹೆಮ್ಮೆಗೆ ಊನ ಎಂಬ ಬಾವನೆಯಿಂದ ಅದನ್ನು ಹಿಡಿಯಲಿಲ್ಲ , ಹಾಗೆ ಅವನು ಕೆಟ್ಟ

ಅವಮಾನದಿಂದಲಿ ನೃಪ ಧ್ರುವರಾಯಗೆ—ದುರ್ಯೋಧನನ ದೃಷ್ಟಾಂತಕ್ಕೆ ವಿರುದ್ಧವಾದುದು ಧ್ರುವನ ದೃಷ್ಟಾಂತ ತಂದೆಯ ತೊಡೆಯ ಮೇಲೆ ಕೂಡಲು ಹೋದ ಹುಡುಗನನ್ನು ಮಲತಾಯಿ ಹೀನಾಯವಾಗಿ ಕಂಡು ಹಳಿದುದೇ ಧ್ರುವನು ಕಾಡಿಗೆ ಹೋಗಿ ತಪಸ್ಸು ಮಾಡಲು ಕಾರಣವಾಯಿತು

ಕಾನನಚರಾರಾಧ್ಯ—ಕಾನನಚರರು ಎಂದರೆ ಅಡವಿಯಲ್ಲಿ ಅಲೆದಾಡುವ ತಾಪಸಿಗಳು , ವನೌಕಸರು ಅವರಿಂದ ಪೂಜಿಸಲ್ಪಟ್ಟವನು



ಮುಖಾರಿ ಝಂಪೆ

ಪಥ ನಡೆಯದ್ಯೆಯು ಪರಲೋಕಕ್ಕೈದುವರೆ, ಮ ಪ

ನ್ಮಥನೆಂಬ ಕಳ್ಳ ಮಾರ್ಗವ ಕಟ್ಟಿ ಸುಲಿಯುತಿರೆ ಅ

ಗಿಳಿವಿಂಡು ಕೋಗಿಲೆ ವಸಂತಮಾರುತ ಭ್ರಮರ
ಒಲವೆರಸಿ ಮದನ ಮಾರ್ಗವ ಕಟ್ಟಲು
ಬಲವುಳ್ಳ ಭಟರು ಬಲು ಸನ್ಯಾಸಿ ಯೋಗಿಗಳು
ಸುಲಿಸಿಕೊಂಡರು ಕೆಲರು ಸಿಕ್ಕಿದರು ಕೆಲರು ೧

ತನು ರೋಮ ಗಿಡ ವೃಕ್ಷ ತಳಿತ ಭುಜಲತೆ ಮೆರೆಯೆ
ಘನ ಸಿಂಹ ಖಗ ಮೃಗಗಳಟ್ಟಣಿಸುವ
ವನಿತೆಯರ ಕಾಯಕಾಂತಾರದಲಿ ದುರ್ಗವು
ಸ್ತನ ಪರ್ವತದ ಕಣಿವೆಯಲಿ ಕಟ್ಟಿ ಸುಲಿಯುತಿರೆ ೨

ಕಾಳೆಗದೊಳಿದಿರಿಲ್ಲ ಸುರನರೋರಗರ ಕ
ಟ್ಟಾಳು ಮನ್ಮಥನ ಛಲದಂಕ ಬಿರುದು
ವೇಳೆಲೆನ್ನಳವಲ್ಲ ಪುರಂದರವಿಠಲನ
ಆಳು ಸಂಗಡವಿದ್ದರವಗೆ ಭಯವಿಲ್ಲ ೩

[ಹರಿದಾಸರಿಗೂ ಕಾಮದ ಸುಳಿಯಲ್ಲಿ ಸಿಕ್ಕು ಬವಣೆಪಡಬಾರದೆಂಬ ಎಚ್ಚರವಿರ ಬೇಕು, ಇನ್ನು ಲೌಕಿಕದಲ್ಲೇ ಇರುವವರ ಪಾಡೇನು ? ಕಾಮನು ಕಾಡುವ ಬಗೆ ಎಂತೆಂದು ತಿಳಿಯದು, ಅವನ ಕಾಟದಿಂದ ಯತಿಗಳೂ, ಅರಸರೂ, ಪಟುಭಟರೂ ತತ್ತರಿಸಿಹೋಗಿದ್ದಾರೆ ಕಾಮನ ಭಯವನ್ನು ತಪ್ಪಿಸಿಕೊಳ್ಳಲು ಒಂದೇ ಮಾರ್ಗ ಹರಿಯ ಹಿರಿಮೆಯನ್ನು ಹೊಗಳುತ್ತಲೇ ಇರುವ ದಾಸರ ಸಹವಾಸ ]

ಮಾರ್ಗವ ಕಟ್ಟಿ—ಯಾತ್ರಿಕನನ್ನು ದಾರಿಯಲ್ಲಿ ಅಡ್ಡಕಟ್ಟಿ ಇಲ್ಲಿ ದಾರಿಯೆಂದರೆ ಮುಕ್ತಿಯ ಸಂಪಾದನೆಗೆ ಕೈಗೊಳ್ಳುವ ಸಾಧನೆ, 'ಪರಲೋಕದ ಪಥ'

ಗಿಳಿವಿಂಡು —ಕಾಮನ ಶೃಂಗಾರಪರಿವಾರ, ಅವನ ಕೆಲಸಕ್ಕೆ ನೆರವಾಗುವ ವಿವರಗಳು, ಗಿಣಿಗಳ ಗುಂಪು, ಕೋಗಿಲೆಯ ಇಂಚರ, ವಸಂತಮಾಸದ ತಂಗಾಳಿ, ಹೂವಿನ ಬಂಡುಂಡು ಹಾಡುವ ದುಂಬಿ

ತನು ರೋಮ —ಕಾಮನ ಕಾರ್ಯಕ್ಷೇತ್ರವೆನಿಸಿದ ಹೆಂಗಳೆಯರ ವರ್ಣನೆ

ಕಾಳಗದೊಳಿದಿರಿಲ್ಲ—ಮನ್ಮಥನನ್ನು ಸೆಣಸಿ ಗೆದ್ದವರು ಯಾರೂ ಇಲ್ಲ

ಸುರನರೋರಗರ ಕಟ್ಟಾಳು—ದೇವತೆಗಳನ್ನೂ ಮನುಷ್ಯರನ್ನೂ ಪ್ರಾಣಿಗಳನ್ನೂ ಕಟ್ಟುವವ

ಛಲದಂಕ—ಚಲದಂಕ, ಚಾರಿತ್ರ್ಯದಲ್ಲಿ ಸ್ಥೈರ್ಯವುಳ್ಳ ಮನುಷ್ಯ

ಪುರಂದರವಿಠಲನ ಆಳು—ಹರಿದಾಸರು



## ೫೧

ಸಾವೇರಿ ಝಂಪೆ

ಸಾಕು ಸಾಕಿನ್ನು ಸಂಸಾರ ಸುಖವು ಪ

ಶ್ರೀಕಾಂತ ನೀನೊಲಿದು ಕರುಣಿಸೈ ಹರಿಯೆ ಅ

ಉದಿಸಿದುವು ಪಂಚಭೂತಗಳಿಂದ ಓಷಧಿಗ
ಳುದಯಿಸಿತು ಓಷದಿಗಳಿಂದನ್ನವು
ಉದಿಸಿದುವು ಅನ್ನದಿಂ ಶುಕ್ಲ ಶೋಣಿತವೆರಡು
ಉದಿಸಿದವು ಸತಿ ಪುರುಷರೀರ್ವರೊಳು ಹರಿಯೆ ೧

ಸತಿ ಪುರುಷರೊಂದಾಗಿ ರತಿಕ್ರೀಡೆಗಳ ಮಾಡೆ
ಪತನವಾದಿಂದ್ರಿಯವು ಹೊಲೆ ರಕ್ತವು
ಋತುಕಾಲದೊಳಗೆರಡು ಏಕತ್ರ ಸಂಧಿಸಲು
ಸತಿಯುದರದಲಿ ಕಳೆದೆ ನವಮಾಸ ಹರಿಯೆ ೨

ಮಾಸವೆರಡರಲಿ ಶಿರ ಮಾಂಸ ಮೂರರೊಳಂಗ
ಮಾಸ ನಾಲ್ಕರಲಿ ಚರ್ಮದ ಹೊದ್ದಿಕೆ
ಮಾಸವೈದಾರರೊಳು ನಖ ರೋಮ ನವರಂಧ್ರ
ಮಾಸವೇಳರಲಿ ಹಸಿವು ತೃಷೆ ಹರಿಯೆ ೩

ತಿಂಗಳೆಂಟರಲಿ ಪೂರ್ವಾನುಭೂತ ಕ
ರ್ಮಾಂಗವೆಲ್ಲವ ತಿಳಿದು ಅರಿವಿನಿಂದ
ಅಂಗನೆಯುರುದರಕಿನ್ನೆಂದಿಗೂ ಬರೆನೆಂದು
ಹಿಂಗದಲೆ ಧ್ಯಾನಿಸುತ ಕಳೆದೆನೈ ದಿನವ ೪

ಇನಿತು ನವಮಾಸ ಮಲಮೂತ್ರದ ಗರ್ಭದೊಳು
ತನು ಸಿಲುಕಿ ನರಕದಾಯಾಸದೊಳಗೆ
ಘನಮರುತಯೋಗದಿಂ ನರಳುತಿಲ್ಲಿಗೆ ಬಂದು
ಜನಿಸಿ ಮೃತಭಾವದಿಂ ನೊಂದೆನೈ ಹರಿಯೆ ೫

ಧರೆಯ ಮೇಲುದಿಸಿ ಶ್ರೀ ವಿಷ್ಣುಮಾಯಕೆ ಸಿಲ್ಕಿ
ಪರವಶದಿ ಹಸಿದು ನೀರಡಿಸಿ ಬೇಗ
ಭರದಿ ಕಣ್ತೆರೆದು ಗೋಳಿಟ್ಟು ಪ್ರಪಂಚವಿದು
ಸ್ಥಿರವೆಂದು ನಂಬಿ ಮರುಳಾದೆ ಹರಿಯೆ ೬

ಶಿಶುತನದೊಳಗೆ ನೊಣ ಮುಸುಕಲಂದರಿಂದಳಲು
ಹಸಿದವನೆಂದು ಸ್ತನ್ಯವ ಕೊಡುವರು
ಹಸಿದು ನೊಂದಳಲಾಗ ಹಾಡಿ ತೂಗುತಲಿಹರು
ಪಶುವಂತೆ ಶಿಶುತನದೊಳಿರಲಾರೆ ಹರಿಯೆ ೭

ಬಾಲ್ಯದಲಿ ಕೆಲವು ದಿನ ಬರಿದೆ ಹೋಯಿತು ಹೊತ್ತು
ಮೇಲೆ ಗೋಳಿಟ್ಟು ವಿದ್ಯೆಗಳ ಕಲಿತು
ಮೇಲು ಯೌವನ ಬರಲು ತನು ಮೂಲವನು ಮರೆತು
ಬಾಲೆಯರ ಬಯಸಿ ನಾ ಮರುಳಾದೆ ಹರಿಯೆ ೮

ಜ್ವರದ ಮೇಲತಿಸಾರ ಬಂದೆರಗಿದಂದದಲಿ
ನಿರುತ ಕಾಮಕ್ರೋಧ ವಿಷಯಗಳಲಿ
ತರುಣಿಯರಿಗೊಡವೆ ಬಂಗಾರ ಬೇಕೆಂದೆನುತ
ಪರಸೇವೆಯೊಳು ನಾನು ಕಡುನೊಂದೆ ಹರಿಯೆ ೯

ಧಿಟ್ಟತನದಲಿ ಗಳಿಸಿ ತರುವಾಗ ಸತಿಸುತರು
ಕಟ್ಟಿಕೊಂಡಿಹರು ತನು ಬಿಟ್ಟ ಬಳಿಕ
ಕುಟ್ಟಿಕೊಂಡಳುತ ಹೋಯೆಂದು ಗೋಳಿಡುತಂಜಿ
ಮುಟ್ಟದೆ ದೂರದಲಿ ನಿಂದಿಹರು ಹರಿಯೆ ೧೦

ಸತ್ತವರಿಗಳಲೇಕೆ ಸುತ್ತ ಬಂಧುಗಳೆಲ್ಲ
ಸ್ವಸ್ಥದಿಂ ಹೊತ್ತು ಹೋಯಿತು ಎನ್ನುತಲಿ
ಒತ್ತಿಸಿದ ಕಸಕಿಂತ ಅತ್ತತ್ತ ಈ ದೇಹ
ಹೊತ್ತುಕೊಂಡೊಯ್ದು ಅಗ್ನಿಯಲಿ ಬಿಸುಡುವರು ೧೧

ಇನ್ನು ನಾನೀಭವದಿ ಯೋನಿಮಾರ್ಗಗಳೊಳಗೆ
ಬನ್ನ ಬಡಲಾರೆನೈ ಬಹು ವಿಧದಲಿ
ಜನ್ಮ ಮೃತ್ಯು ಜರಾ ವ್ಯಾಧಿ ದುಃಖವ ಬಿಡಿಸಿ
ಸನ್ಮಾರ್ಗ ಪೊಂದಿಸೈ ಪುರಂದರವಿಠಲ ೧೨

[ವೈರಾಗ್ಯಪದ್ಧತಿಯಲ್ಲಿ ಜೀವನದ ಕ್ಲೇಶಗಳನ್ನು ಚಿತ್ರಿಸುವ ಪದ ]

ಪೂವಿ                                                                                    ಏಕ

ಹರಿ ಹರಿ ಎನಲಿಕ್ಕೆ ಹೊತ್ತಿಲ್ಲ ಈ
ನರಜನ್ಮ ವ್ಯರ್ಥವಾಗಿ ಹೋಗುವುದಲ್ಲ ಪ

ಹರಿ ಜಾಗರಣೆಯಲ್ಲಿ ಪಾರಣೆ ಚಿಂತೆ
ನಿರತಯಾತ್ರೆಯಲಿ ಶಾಕದ ಚಿಂತೆ ೧

ಕರ್ಮದಿ ಒಂದು ಚಿಂತೆ ಧರ್ಮದಿ ಒಂದು ಚಿಂತೆ
ಪೆರ್ಮನ ಮಾಡಲು ಬಲು ಚಿಂತೆ ೨

ವರ್ಮ ವೈರದಿ ಚಿಂತೆ
ಈರ್ಮನಸ್ಸಾಗೆ ಚಿಂತೆ
ದುರ್ಮದದಿ ನಡೆಯೆ ಪ್ರಾಣದ ಚಿಂತೆ ೩

ಗಂಗೆಯೊಳ್ಮುಳುಗುವಾಗ ಚೆಂಬುಮೇಲಿನ ಚಿಂತೆ
ಸಂಗಡದವರು ಪೋಗುವರೆಂಬ ಚಿಂತೆ
ಪನ್ನಗಶಯನ ಶ್ರೀ ಪುರಂದರವಿಠಲನ್ನ
ಹಿಂಗದೆ ಭಜಿಸಲು ಸತತ ನಿಶ್ಚಿಂತೆ ೪

[ವೈದಿಕರಾಗಲಿ ಲೌಕಿಕರಾಗಲಿ ಹರಿಭಕ್ತಿಯನ್ನು ಅಳವಡಿಸಿಕೊಳ್ಳದಿದ್ದರೆ ಚಿಂತೆ ತಪ್ಪಿದ್ದಲ್ಲ ಒದುಕಿನಲ್ಲಿ ಚಿಂತೆಯ ಬಗೆಗಳನ್ನು ಕುರಿತು ದಾಸರು ಪಟ್ಟಿಮಾಡಿದ್ದಾರೆ ]

ಹರಿಜಾಗರಣೆ —ಏಕಾದಶಿಯು ಹರಿದಿನ, ಅಂದಿನ ರಾತ್ರಿ ಎಚ್ಚರವಾಗಿದ್ದುಕೊಂಡು ಹರಿಭಜನೆಮಾಡಬೇಕೆಂದು ವಿಧಿ ಹಾಗೆ ಎಚ್ಚರವಾಗಿರುವಾಗ, ಮರುದಿನ, ದ್ವಾದಶಿಯ ಪಾರಣೆಗೆ ಸಿದ್ಧವಾಗಬೇಕೆಂಬ ಚಿಂತೆ

ನಿರತಯಾತ್ರೆಯಲಿ —ನಿತ್ಯಯಾತ್ರೆಯಲ್ಲಿ ಅಕ್ಕಿಯೇನೋ ಹರಿದಾಸರಿಗೆ ದೊರೆಯು ತ್ತದೆ , ಆದರೆ ತರಕಾರಿಗೇನು ಮಾಡುವುದು ಎಂಬ ಚಿಂತೆ

ಪೆರ್ಮನ —ಹಿರಿದಾದ ಮನಸ್ಸು, ಔದಾರ್ಯ

ಪೆರ್ಮ —ಕವಚತೊಟ್ಟವನಿಗೆ ಯಾರನ್ನು ಸೆಣಸಲಿ ಎಂಬ ಕಾತರ

ಈರ್ಮನಸ್ಸಾಗೆ —ಎರಡು ಮನಸ್ಸಾಗಲು



೫೩

ಪಂತುವರಾಳಿ ಚಾಪು

ಮುಯ್ಯಕ್ಕೆ ಮುಯ್ಯ ತೀರಿತು, ಜಗ
ದಯ್ಯ ವಿಜಯ ಸಹಾಯ ಪಂಢರಿರಾಯ ಪ

ಸಣ್ಣವನೆಂದು ನಾ ನೀರು ತಾರೆಂದರೆ
ಬೆಣ್ಣೆಗಳ್ಳ ಕೃಷ್ಣ ಮರಳು ಮಾಡಿ
ಚಿನ್ನದ ಗಿಂಡಿಲಿ ನೀರು ತಂದಿತ್ತರೆ
ಕಣ್ಣು ಕಾಣದೆ ನಾ ರೋಣಿದೆ ಪಂಢರಿರಾಯ ೧

ಎನ್ನ ಹೆಸರ ಹೇಳಿ ಸೂಳೆಗೆ ಕಂಕಣ
ವನ್ನು ನೀನೆ ಕೊಟ್ಟು ನಿಜವ ಮಾಡಿ
ಎನ್ನ ಹಿಡಿಸಿ ಪರಮ ಭಂಡನ್ನ ಮಾಡಿ
ನಿನ್ನ ಮುಯ್ಯಕ್ಕೆ ಮುಯ್ಯ ತೋರಿದೆ ಪಂಢರಿರಾಯ ೨

ಭಕ್ತವತ್ಸಲನೆಂಬ ಬಿರುದು ಬೇಕಾದರೆ
ಭಕ್ತರಾಧೀನರಾಗಿರಬೇಡವೆ
ಯುಕ್ತಿಯಲಿ ನಿನ್ನಂಥ ದೇವರ ನಾ ಕಾಣೆ
ಮುಕ್ತೀಶ ಪುರಂದರವಿಠಲ ಪಂಢರಿರಾಯ ೩

ಭಕ್ತವತ್ಸಲನೆಂಬ ಬಿರುದು ಬೇಕಾದರೆ
ಕಿತ್ತು ಈಡ್ಯಾಡೊ ಇನ್ನೊಂದು ಕಂಕಣವ
ಮುಕ್ತಿಗೆ ನೀನಲ್ಲದಾರನು ಕಾಣೆನು
ಮುಕ್ತೀಶ ಪುರಂದರವಿಠಲ ಪಂಢರಿರಾಯ (ಪಾಠಾಂತರ) ೪

[ದಾಸರ ಬದುಕಿನಲ್ಲಿ ನಡೆದದ್ದೆಂಬ ಘಟನೆಯೊಂದು ಈ ಹಾಡಿನ ಹಿನ್ನೆಲೆ ಪುರಂದರ ದಾಸರು ಪಂಢರಿಪುರದಲ್ಲಿದ್ದಾಗ ಒಮ್ಮೆ ಬಾಯಾರಿ ನೀರು ಕೇಳಿದರಂತೆ, ಹತ್ತಿರ ಶಿಷ್ಯರು ಯಾರೂ ಇಲ್ಲದಿರಲು ಪಾಂಡುರಂಗನೇ ಶಿಷ್ಯನಂತೆ ಬಂದು ಅವರಿಗೆ ನೀರು ಕೊಟ್ಟನಂತೆ ತಡವಾಗಿ ತಂದನೆಂದು ಸಿಟ್ಟಿಗೆದ್ದು ದಾಸರು ಗಿಂಡಿಯಿಂದಲೇ ಅವನನ್ನು

ಹೊಡೆದರಂತೆ  ಅಂದೇ ರಾತ್ರಿ ಪಾಂಡುರಂಗನು ಪುರಂದರದಾಸರಂತೆ ತೋರಿಕೊಂಡು ತನ್ನ ಕೈಯಲ್ಲಿದ್ದ ಬಂಗಾರದ ಕಡಗವೊಂದನ್ನು ತನ್ನ ಊಳಿಗದಲ್ಲಿದ್ದ ಸೂಳೆಯೊಬ್ಬಳಿಗೆ ಕೊಟ್ಟು ಬಂದನಂತೆ  ಮರುದಿನ ಅರ್ಚಕರು ಪಾಂಡುರಂಗನ ಕೈಗಳಲ್ಲಿದ್ದ ಒಂದು ಕಂಕಣ ಕಾಣದಿರಲು ಗದ್ದಲವೆಬ್ಬಿದಾಗ ಸೂಳೆಯು ತನಗೆ ಪುರಂದರದಾಸರೇ ಬಂದು ಕೊಟ್ಟ ಕಡಗವನ್ನು ಒಪ್ಪಿಸಿದಳಂತೆ  ಅದು ದೇವಾಲಯದ ಸ್ವತ್ತೇ ಆಗಿದ್ದುದರಿಂದ ಅಧಿಕಾರಿಗಳು ದಾಸರನ್ನು ಕರೆಯಿಸಿ ದೇಗುಲದ ಕಂಬಕ್ಕೆ ಕಟ್ಟಿಸಿ ಹೊಡೆಸಿದರಂತೆ ಏನೂ ಅರಿಯದ ದಾಸರು ಪರಿತಪಿಸುತ್ತಿರುವಾಗ ಗರ್ಭಗುಡಿಯಲ್ಲಿ ದೇವರ ಕೈಯಲ್ಲಿದ್ದ ಇನ್ನೊಂದು ಕಡಗವೂ ತಾನಾಗಿ ಕೆಳಗೆ ಬಿದ್ದು ಪುರಂದರದಾಸರು ನಿರಪರಾಧಿಗಳು ಎಂದು ಅಶರೀರವಾಣಿಯಾಯಿತಂತೆ  ಆ ಸಂದರ್ಭದಲ್ಲಿ ಈ ಹಾಡು ಹೊರಬಂದಿತೆಂದು ಪ್ರತೀತಿ  ಆದರೆ ಈ ಕತೆಗೆ ಏನೇನೂ ಆಧಾರವಿರದು  ವಿಜಯದಾಸರೂ ಇದನ್ನು ಉಲ್ಲೇಖಿಸಿಲ್ಲ  ಆದ್ದರಿಂದ ಇದು ಪುರಂದರದಾಸರ ಪದ ಇರಲಾರದು ಆದರೂ ಹಾಗ ಪ್ರಸಿದ್ಧವಾಗಿರುವುದರಿಂದ ಇಲ್ಲಿ ಸೇರಿಸಿದೆ ]

ಟೊಣೆದೆ—'ಟೊಣೆ' ಎನ್ನುವ ಕನ್ನಡಮಾತಿಗೆ 'ಮೋಸಮಾಡು' ಎಂದರ್ಥವಿದೆ, 'ಹಳ್ಳತೋಡು' ಎಂದೂ ಅರ್ಥವಿದೆ  ಇವೆರಡೂ ಅರ್ಥಗಳು ಇಲ್ಲಿ ಸರಿ ಹೋಗುವುದಿಲ್ಲ  ಸಂದರ್ಭವನ್ನು ನೋಡಿದರೆ 'ಹೊಡೆದೆನು' ಎಂಬ ಅರ್ಥವಿದ್ದೀತು

[ಇದೇ ಸಂದರ್ಭದಲ್ಲಿ ಮಾಡಿಕೊಂಡದ್ದೆಂಬ ಉಗಾಭೋಗವೂ ಬಂದಿದೆ  ದಾಸರನ್ನು ದೇಗುಲದ ಕಂಬಕ್ಕೆ ಕಟ್ಟಿ ದಂಡಿಸುತ್ತಿರುವಾಗ, ದಾಸರು ಈ ಉಗಾಭೋಗವನ್ನು ಹಾಡಲು ಕಟ್ಟುಗಳು ತಾವಾಗಿ ಕಳಚಿಕೊಂಡು ಬಿದ್ದು ಅವರ ಮಹಿಮೆ ವ್ಯಕ್ತವಾಯಿತೆಂದು ಹೇಳುತ್ತಾರೆ  ಉಗಾಭೋಗ ಇದು—

ಆನೆಯನು ಕಾಯಿದಾಗ ಜ್ಞಾನವಿದ್ದದ್ದೇನು
ನಾನು ಒದರಲು ಈಗ ಕೇಳದಿದ್ದದ್ದೇನು
ದಾನವಾಂತಕ ದೀನರಕ್ಷಕನೆಂಬೊ
ಮಾನ ಉಳಿಸಿಕೊಳ್ಳೊ ಶ್ರೀ ಪುರಂದರ ವಿಠಲ ]



ಕಾಂಬೋದಿ　　　　　　　　　　　　　　　　　　　ಝಂಪೆ

ಕನಕದಾಸನ ಮೇಲೆ ದಯಮಾಡಲು, ವ್ಯಾಸ
ಮುನಿಮರದ ಜನರೆಲ್ಲ ದೂರಿಕೊಂಬುವರೊ　　　ಪ

ತೀರ್ಥವನು ಕೊಡುವಾಗ ಕನಕನ್ನ ಕರೆಯೆನಲು
ಧೂರ್ತರಾಗಿದ್ದ ವಿದ್ವಾಂಸರೆಲ್ಲ
ಸಾರ್ಥಕಾಯಿತು ಇವರ ಸನ್ಯಾಸಿತನವೆಲ್ಲ
ಪೂರ್ತ್ಯಾಗಲೆಂತೆನಲು ಯತಿಯು ನಗುತಿಹನು　　　೧

ಮರುದಿನ ಅವರವರ ಪರೀಕ್ಷಿಸಲಿಬೇಕೆಂದು
ಕರೆದು ವಿದ್ವಾಂಸರನು ಕನಕನ್ನ ಬಿಡದೆ
ಕರದಲ್ಲಿ ಕದಳಿಯು ಫಲಗಳನೆ ಕೊಟ್ಟು
ಯಾರಿರದ ಸ್ಥಳದಲ್ಲಿ ಮೆದ್ದು ಬನ್ನಿರೆನಲು　　　೨

ಊರ ಹೊರಗ್ಹೋಗಿ ಬೇರೆ ಬೇರೆ ಕುಳಿತು
ತೋರದಲೆ ಎಲ್ಲರೂ ಮೆದ್ದು ಬರಲು
ತೋರಲಿಲ್ಲವು ಎನಗೆ ಏಕಾಂತ ಸ್ಥಳವೆನುತ
ಸಾರಿ ಕದಳೀಫಲವ ತಂದು ಮುಂದಿಟ್ಟ　　　೩

ಡಿಂಭದೊಳು ಶಬ್ದವಾಗಾದಿ ಶ್ರೋತ್ರಗಳಲ್ಲಿ
ಇಂಬಾಗಿ ತತ್ತ್ವೇಶರೆಲ್ಲ ತುಂಬಿಹರೊ
ತಿಂಬುವುದು ಹೇಗೆನುತ ವ್ಯಾಸರಾಯರ ಕೇಳೆ
ಸಂಭ್ರಮದವರೆಲ್ಲ ಕುಳಿತು ಕೇಳಿದರು　　　೪

ಮಾಣಿಕವು ಕೋಡಗನ ಕೈಯಲ್ಲಿ ಇದ್ದಂತೆ
ಕೋಣನೆದುರಿಗೆ ಕಿನ್ನರಿಯ ಮೀಟಿದಂತೆ
ವೇಣುಧ್ವನಿ ಬಧಿರನ ಬಳಿ ಮಾಡಿದಂತೆ ಕಣ್ಣು
ಕಾಣದವನಿಗೆ ಕನ್ನಡಿಯು ತೋರಿದಂತೆ　　　೫

ನೋಡಿದರೆ ಈ ಕನಕನಾಡುವ ಮಾತುಗಳ
ಮೂಢಜನರರಿಯಬಲ್ಲರೆ ಮಹಿಮೆಯು
ನಾಡಾಡಿಯಂತೆಯೇ ಮಾಡಿಬಿಟ್ಟರು ಇವಗೆ
ನಾಡೆಲ್ಲ ಹುಡುಕಿದರು ಈಡಾರ ಕಾಣೆ　　　೬

ತಮ್ಮ ಕೈಮುಷ್ಟಿಯನು ಪಿಡಿದು ಕೇಳಲು ಯತಿಯು
ತಮತಮಗೆ ತೋರಿದ್ದು ಪೇಳೆ ಬ್ರಾಹ್ಮಣರು
ಗಮ್ಮನೆ ಕನಕ ಸಿರಿ ವಾಸುದೇವನೆ ಪರ
ಬೊಮ್ಮ ಪುರಂದರವಿಠಲನೆನುತ ಸಾರಿದನು ೭

[ಕನಕದಾಸರು ವ್ಯಾಸತೀರ್ಥರ ಶಿಷ್ಯರು ದಾಸರು ಕುಲದಲ್ಲಿ ಅಂಡೆಕುರುಬರಾದರೂ ಮಠಾಧಿಪತಿಗಳಾದ ವ್ಯಾಸತೀರ್ಥರು ಅವರನ್ನು ತುಂಬ ಆದರದಿಂದ ಕಾಣುತ್ತಿದ್ದರು ಇದಕ್ಕಾಗಿ ಮಠದ ಪಂಡಿತರೂ, ಕುಹಕಿಗಳಾದ ಊರ ಬ್ರಾಹ್ಮಣರೂ ಕನಕನನ್ನು ಜರಿಯಲು, ಅವರಿಗೆಲ್ಲ ಕನಕದಾಸರ ಹಿರಿಮೆಯನ್ನು ಮನದಟ್ಟು ಮಾಡಿಕೊಡಬೇಕೆಂದು ವ್ಯಾಸತೀರ್ಥರು ಹೂಡಿದ ತಂತ್ರ ಈ ಪದದಲ್ಲಿದೆ ವ್ಯಾಸತೀರ್ಥರು ಮಾತ್ರವಲ್ಲದೆ ಹರಿದಾಸರೆಲ್ಲರೂ ಕನಕದಾಸರನ್ನು ಗೌರವಿಸುತ್ತಿದ್ದರು ಪುರಂದರದಾಸರಿಗೂ ಕನಕದಾಸರಿಗೂ ಸ್ನೇಹವಿದ್ದಿತೆಂದೂ, ಅವರಿಬ್ಬರೂ ಕೂಡಿ ಬೇಲೂರು ಮೊದಲಾದ ಕೆಲವು ಕ್ಷೇತ್ರಗಳಲ್ಲಿ ಸುತ್ತಾಡಿದರೆಂದೂ ಪ್ರತೀತಿಯಿದೆ ]

ಡಿಂಭದೊಳು—ದೇಹದಲ್ಲಿ

ಶಬ್ದವಾಗಾದಿ—ಶಬ್ದ (ಶ್ರೋತ್ರ), ರೂಪ (ಚಕ್ಷು), ರಸ (ಜಿಹ್ವಾ), ಗಂಧ (ನಾಸಾ), ಸ್ಪರ್ಶ (ತ್ವಕ್)ಗಳೆಂಬ ಐದು ತತ್ತ್ವಗಳು ಅವಕ್ಕನುಗುಣವಾದ ಜ್ಞಾನೇಂದ್ರಿಯಗಳು, ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಐದು ಕರ್ಮೇಂದ್ರಿಯಗಳು

ಇಂಬಾಗಿ —ಇಂದ್ರಿಯಗಳಲ್ಲಿ ಆಯಾ ತತ್ತ್ವಾಭಿಮಾನಿ ದೇವತೆಗಳು ನೆಲೆಯಾಗಿ (ಇಂಬಾಗಿ) ನಿಂತು, ಇಂದ್ರಿಯ ವ್ಯಾಪಾರದಲ್ಲೆಲ್ಲ ವ್ಯಾಪೃತರಾಗಿರುವರೆಂದು (ತುಂಬಿಹರು) ಸಿದ್ಧಾಂತ, ಹಾಗಲ್ಲವಾದರೆ ಜಡವಾದ ಇಂದ್ರಿಯಗಳಲ್ಲಿ ವ್ಯಾಪಾರ ಸಾಧ್ಯವಿಲ್ಲವಾಗುತ್ತದೆ

ನಾಡಾಡಿ —ಹಳ್ಳಿಯವ, ನಾಗರಿಕತೆ ಸಾಲದವನು

ತಮ್ಮ ಕೈಮುಷ್ಟಿಯನು —ಇದು ಎರಡನೆಯ ಪ್ರಸಂಗ ವ್ಯಾಸತೀರ್ಥರು ತಮ್ಮ ಕೈಮುಷ್ಟಿಯಲ್ಲಿ ಯಾವುದೋ ಒಂದು ವಸ್ತುವನ್ನು ಯಾರಿಗೂ ಕಾಣದಂತೆ ಮುಚ್ಚಿ ಹಿಡಿದು, ಇದೇನೆಂದು ಎಲ್ಲರನ್ನೂ ಕೇಳಲು ತಮತಮಗೆ ತೋರಿದಂತೆ ಹೇಳಿದರು. ಕನಕದಾಸರು ಮಾತ್ರ 'ನಿಮ್ಮ ಕೈಯೊಳಗಿರುವುದು ದೇವರ ಮೂರ್ತಿ' ಎಂದು ಸರಿಯಾಗಿ ಹೇಳಿಬಿಟ್ಟರು

## ೫೫

ಜಿಲಹರಿ — ಆದಿ

ಬಾರವ್ವ ಬಾಗೀರಥಿ ತೋರವ್ವ ಜನರಿಗೆ ॥ ಪ ॥

ನಾ ಸ್ನಾನ ಮಾಡುವುದು ತೋರವ್ವ ಜನರಿಗೆ ॥ ಅ ॥

ವ್ಯಾಸರಾಯರು ಬಂದು ಭೋಜನಕೆ ಕರೆಯಲು
ತ್ವರಿತದಿಂದಲಿ ಬಂದು ಪಾತ್ರದಲಿ ಕುಳಿತೆ ॥ ೧ ॥

ದಾಸರ ನುಡಿ ಕೇಳಿ ಲೇಸಾಗಿ ತಾ ಬಂದು
ಗ್ರಾಸಗೊಂಬುವ ಜನರ ಪಾತ್ರದಲ್ಲಿ ಪರಿಯಲು ॥ ೨ ॥

ಈ ಮಹಿಮೆಯ ನೋಡಿ ಗುರುವ್ಯಾಸರಾಯ
ಶ್ರೀಪತಿ ಪುರಂದರವಿಠಲನ ಕಂಡಂದ ॥ ೩ ॥

[ಈ ಪದವು ಪುರಂದರದಾಸರದ್ದು ಹೌದೋ ಅಲ್ಲವೋ ಸಂಶಯವಿದೆ ಆದರೆ ಅವರದ್ದೆಂದು ದಾಸಕೂಟದಲ್ಲಿ ಪ್ರತೀತಿಯಿರುವುದರಿಂದ ಇಲ್ಲಿ ಕೊಡಲಾಗಿದೆ ಇದರ ಹಿನ್ನೆಲೆಯ ಸಂದರ್ಭ ಹೀಗೆಂದು ಹೇಳುತ್ತಾರೆ ಹಂಪಿಯಲ್ಲಿ ವ್ಯಾಸರಾಯರ ಮಠದಲ್ಲಿ ಮಧ್ಯಾಹ್ನ ಭೋಜನದ ವೇಳೆಗೆ ಸ್ವಾಮಿಗಳು ಪುರಂದರದಾಸರನ್ನು ಕರೆತರಲು ಮಠದ ಪರಿಚಾರಕರನ್ನು ಕಳುಹಿಸಿದರು ಪುರಂದರದಾಸರು ಆಗ ತಾನೆ ನದಿಯಲ್ಲಿ ಸ್ನಾನಕ್ಕೆಂದು ಇಳಿಯಲು ಸಿದ್ಧರಾಗುತ್ತಿದ್ದರು ಪರಿಚಾರಕರು ಬಂದು ಅವಸರಪಡಿಸಲು ದಾಸರು ಹಾಗೆಯೇ ಮೇಲೆ ಬಂದು ದಡದ ಮೇಲೆ ಕುಳಿತರು ನದಿಯ ನೀರು ತಾನಾಗಿ ಮೇಲುಕ್ಕಿ ಬಂದು ಅವರ ಮೈತೊಳೆಯ ತೊಡಗಿತು ಪರಿಚಾರಕರು ಈ ಸೋಜಿಗವನ್ನು ಕಂಡು ನದಿಯ ದಡದ ಮೇಲೆ ಇದ್ದ ಮಠಕ್ಕೆ ಹೋಗಿ ಸ್ವಾಮಿಗಳಿಗೆ ಸುದ್ದಿ ತಿಳಿಸಲು ಸ್ವಾಮಿಗಳೂ ಜನರೂ ನೋಡುತ್ತಿದ್ದಂತೆ ನದಿಯ ನೀರು ಅವರೆಲ್ಲರ ನೆರೆಯಲ್ಲಿಯೇ ಹರಿಯತೊಡಗಿತು ಸ್ವಾಮಿಗಳಿಗೆ ಈ ಸಂದರ್ಭದಲ್ಲಿ ದೇವರ ಕಾರಣಿಕ ಮನದಟ್ಟಾಯಿತು ]

ಬಾಗೀರಥಿ—ತುಂಗಭದ್ರಾನದಿಯಾದರೂ, ಇಲ್ಲಿ ಬಾಗೀರಥಿಯೆಂದು ಕರೆದಿದ್ದಾರೆ, ಎಲ್ಲ ನದಿಯ ನೀರೂ ಗಂಗೆಗೆ ಸಮಾನ ಎಂಬುದು ಕಲ್ಪನೆ

ಪಾತ್ರದಲಿ—ದಡದ ಮೇಲೆ

ಗ್ರಾಸಗೊಂಬುವ—ಊಟಮಾಡಲು ಕುಳಿತಿರುವ ಜನರ ಪಾತ್ರದಲ್ಲಿ, ನೆರೆಯಲ್ಲಿ



ಭೂಪಾಲಿ ಝಂಪೆ

ಯಾಕೆನ್ನ ಎಬ್ಬಿಸಿದ ಶ್ರೀಹರಿಯ ಸೇವೆ ಧ್ಯಾನದ ಒಳಗಿದ್ದೆನೆ ಪ

ಉದಯಕಾಲಕೆ ಎದ್ದು ನದಿಯ ತೀರಕೆ ಹೋಗಿ ಮಲಮೂತ್ರಗಳನೆ ಮಾಡಿ
ಮೃತ್ತಿಕೆ ಶೌಚದಿಂ ಆತ್ಮಶುದ್ಧಿಯನೆ ಮಾಡಿ
ನದಿಯಲಿ ನಿಂತು ಸ್ತೋತ್ರಂಗಳನೆ ಮಾಡಿ
ತೀರ್ಥಾಭಿಮಾನಿ ಪ್ರಾರ್ಥನೆಗಳನೆ ಮಾಡಿ
ಸ್ನಾನಸಂಧ್ಯಾನ ಜಪತಪಂಗಳನೆ ಮಾಡಿ
ಶ್ರೀಹರಿಯ ಧ್ಯಾನದಲಿ ನಾ ಮನೆಗೆ ಬರುತಲಿದ್ದೆ ೧

ಆಕಳ ಸೆಗಣಿಯಲಿ ಬಾಗೀರಥಿ ಉದಕದಲಿ ದೇವರ ಜಗುಲಿಯನು
ಸಾರಿಸಿ ನಾನು ಕಾರಣೆಗಳನು ತೆಗೆದು
ಶಂಖ ಚಕ್ರ ಸ್ವಸ್ತಿಕ ಪದ್ಮದಿಂದ
ಬಗೆ ಬಗೆ ಬೃಂದಾವನ ರಂಗವಲ್ಲಿಯನಿಟ್ಟು
ಶ್ರೀಹರಿಯ ವಂದಿಸಿ ನಾನು ಕೈಯ ಮುಗಿಯುತಲಿದ್ದೆ ೨

ಸುವರ್ಣದ ಮಣಿ ಕುಂದಣದ ಕೀಲು ಬೆಳ್ಳಿ ಹೀರದ ಮಣೆಗಳು
ಭಂಗಾರದ ರಾಜವರ್ಣದ ಮಣೆಗಳು
ಈ ಪರಿ ಮಣೆಗಳ ತಾರತಾರಕೆ ಇಟ್ಟು
ಶ್ರೀಹರಿಗೆ ವಂದಿಸಿ ನಾನು ಕೈಯ ಮುಗಿಯುತಲಿದ್ದೆ ೩

ಸುವರ್ಣದ ಛತ್ರಿಯ ಮಂಟಪ ಬೆಳ್ಳಿಚೂಡದ ಮಂಟಪ
ಭಂಗಾರದ ರಾಜವರ್ಣದ ಮಂಟಪ
ಕುಂಭವ ನಿಲಿಸಿ ಸಂದು ಸಂದು ಬೋದಿಗೆ
ದುಂಡು ಮುತ್ತಿನ ಕುಚ್ಚು ನಾನಿಡುತಿದ್ದೆ ೪

ಸೂರ್ಯಹೀರದ ಮುಖ ಮೇಲೆ ಹಾಸಿಗೆಗಳು ರತ್ನ ಹುವ್ವಗಳೆ
ಬುಟ್ಟೆದಾರಿ ಜರತಾರಿ ಹುವ್ವಗಳೆ
ಎಡೆಗೆಡೆಗೆ ಬೋದಿಗ್ಗೆ ಬಿಗಿದು ಮುತ್ತಿನ ಸುತ್ತಿ
ಜಗದೊಡೆಯನಾದಗೆ ಅಣಿಮಾಡುತಲಿದ್ದೆ ೫

ಹಲಸು ತೆಂಗಿನ ಮರ ಕಿತ್ತಳೆ ದಾಳಿಂಬೆ ಕಬ್ಬಿನ ಗೆಣಿಕೆಗಳೆ
ಸೀತಾಫಲ ದ್ರಾಕ್ಷಿ ಗೊಂಚಲುಗಳ ಈ ಪರಿಯಿಂದ ಹರಿಯ ಮಂಟಪಕೆ
ಗೊನೆಗಳ ಕಟ್ಟಿ ನಾ ಕೈಯ ಮುಗಿಯುತಲಿದ್ದೆ ೬

ಗಂಡಕಿ ಶಾಲಗ್ರಾಮವುಭಯ ಸುದರುಶನ ವೇಣುಗೋಪಾಲ ಮೂರುತಿ
ಹಯಗ್ರೀವ ಎಂಬೊ ಶ್ರೀಧರಮೂರುತಿ
ವಾಸುದೇವ ಎಂಬೊ ಶ್ರೀಧರಮೂರುತಿ
ಲಕ್ಷ್ಮೀನಾರಾಯಣ ಲಕ್ಷ್ಮೀನರಸಿಂಹ ವಿಷ್ಣು
ಮೂರುತಿಗೆ ಎನ್ನ ಕೈಯ ಮುಗಿಯುತಲಿದ್ದೆ ೭

ಸುವರ್ಣವಾದ ಗದ್ದಿಗೆ ಮಂಟಪ ಕೆತ್ತಿಗೆ ಸೂರ್ಯಪಾನ
ನೌಬತ್ತು ನಗಾರಿ ಭೇರಿ ವಾದ್ಯ
ತಾಳ ಮದ್ದಳೆ ವಾದ್ಯ ನಾನಾ ಪರಿ ವಾದ್ಯ
ದುಂದುಭಿ ನೌಬತ್ತು ನಾ ಮುಂದೆ ಹೊಯ್ದಿದ್ದೆ ೮

ಅಗರು ಚಂದನ ಗಂಧ ವರಕಚ್ಚೂರವೆ ಪರಿಪರಿ ಕೇಸರಿಯೆ
ಬಗೆಬಗೆ ಬೆರೆಸಿದ ಜಾಪರವೆ
ಕಸ್ತೂರಿ ಬೆರೆಸಿದ ಎಳೆಯ ಶ್ರೀಗಂಧವು
ಶ್ರೀಹರಿಯ ಶಿರದಲ್ಲಿಟ್ಟು ಕೈ ಮುಗಿಯುತಲಿದ್ದೆ ೯

ಮರುಗ ಮಲ್ಲಿಗೆ ಜಾಜಿ ತರುವು ಶೇವಂತಿಗೆ ಮುಡಿವಾಳ
ಪಚ್ಚೆ ದವನ ಕೇದಿಗೆ ಕಮಲ
ಮರುಗ ಮಲ್ಲಿಗೆಯೆ ಎಳೆಯ ಶ್ರೀ ತುಳಸಿ
ವನಮಾಲೆಗಳನು ಧರಿಸಿ
ಎರಡು ಕೈಗಳಲಿ ಪಿಡಿದು ಶ್ರೀಹರಿಗೆ ಅರ್ಪಿಸುತಿದ್ದೆ ೧೦

ಕಂಚು ಹಿತ್ತಾಳಿ ಸುವರ್ಣಮಯ ಕುಂದಣದ ಕೀಲು ಸಾಲು ದೀವಿಗೆಗಳೆ
ಸಾಲುದೀವಿಗೆಗಳೆ ಕಟ್ಟು ದೀವಿಗೆಗಳು
ಹಚ್ಚಿಟ್ಟು ತುಪ್ಪದ ದೀವಿಗೆಯೆ
ಬಗೆಬಗೆ ತುಂಬಿಟ್ಟ ಹಲಗಾರತಿ
ಸಾಲುದೀವಿಗೆಯನ್ನು ಲಕ್ಷ ದೀವಿಗೆಯನ್ನು
ವಿಷ್ಣುಮೂರುತಿಗೆ ನಾ ಕೈಯ ಮುಗಿಯುತಲಿದ್ದೆ ೧೧

ಉತ್ತಮವಾಗೋದು ಮೊದಲೆತ್ತೋದು ಧೂಪಾರತಿ
ಒಡನೆ ಏಕಾರತಿ ಪಂಚವರ್ಣದಾರತಿ ಕರ್ಪೂರದಾರತಿ
ಶ್ರೀಹರಿಗೆ ಅರ್ಪಿಸಿ ನಾನು ಕೈಯ ಮುಗಿಯುತಲಿದ್ದೆ ೧೨

ಮಂಡಲಂಗಳ ಮಾಡಿ ರಂಗವಲಿಗಳ ಹಾಕಿ
ಹಂಡಾಹಂಡದಲಿಯಿಳಿವಿ ಭೂ
ಮಂಡಲಾಧಿಪತಿ ನಿನಗೆ ಅರ್ಪಿತವೆಂದು
ತಂದು ನೈವೇದ್ಯಿಟ್ಟು ಶ್ರೀಹರಿಗೆ ಅರ್ಪಿಸುತ್ತಿದ್ದೆ ೧೩

ಅರುವತ್ತು ದಿನಸಿನ ಪರಿಪರಿ ಶಾಕಗಳು
ಕರಿದು ಸಾತಾಳಿಸಿದ ಬಗಬಗೆ ಲವಣಶಾಕಗಳು
ಈ ಪರಿಯಿಂದಲಿ ಎಡೆಗಳನೆ ಮಾಡಿ
ತಂದು ನೈವೇದ್ಯಿಟ್ಟು ಶ್ರೀಹರಿಗೆ ಅರ್ಪಿಸುತಿದ್ದೆ ೧೪

ಐದು ದಿನಸಿನ ಪರಮಾನ್ನವ ಮಾಡಿ
ಸಣ್ಣಕ್ಕಿ ಶಾಲ್ಯನ್ನ ಚಿತ್ರಾನ್ನ ದಧ್ಯನ್ನ
ಮೊಸರು ಅನ್ನವ ಮಾಡಿ ಮಧುರೆಯ ಕೃಷ್ಣ ನಿನಗೆ ಅರ್ಪಿತವೆಂದೆ ೧೫

ಕರಿ ಆಕಳ ಹಾಲು ಕೆನೆಮೊಸರುಗಳು
ನೊರೆಹಾಲು ಘೃತಗಳನು
ಸಕ್ಕರೆ ಬೆರೆಸಿದ ನೊರೆಹಾಲುಗಳನೆ
ತಂದು ಉಡುಪಿಯ ಕೃಷ್ಣ ನಿನಗೆ ಅರ್ಪಿತವೆಂದೆ ೧೬

ಅಷ್ಟಭೋಗದ ಅಡಿಕೆ ಕರ್ಪೂರದ ವೀಳ್ಯ ಹೆಚ್ಚಿನ ಬಿಡಿಯೆಲೆಯೋ
ಸುಣ್ಣ ಸಹಿತವಾದ ಲವಂಗವು ಏಲಕ್ಕಿ
ಶ್ರೀಹರಿಗೆ ಅರ್ಪಿಸಿ ನಾನು ಕೈಯ ಮುಗಿಯುತಲಿದ್ದೆ ೧೭

ಉತ್ತಮದ ರಾಮ ಅಯೋಧ್ಯೆಯ ರಾಮ
ಪಟ್ಟಾಭಿರಾಮನೆ ಸೀತಾಪತಿ ಜಾನಕೀಮನೋಹರ
ಹಾಸಿಗೆಯನು ಹಾಕಿ ಅಣಿ ಮಾಡುತಲಿದ್ದೆ ೧೮

ಬೆಣ್ಣೆಕಳ್ಳನು ಕೃಷ್ಣ ಚಿಣ್ಣ ಮಾಯದ ಕೃಷ್ಣ
ವದನ ತೋರಿದ ಕೃಷ್ಣನೇ
ಮೃತ್ತಿಕೆ ತಿಂದ ಕಾಳಿಯಮರ್ದನ ಕೃಷ್ಣನೆ
ರುಗ್ಮಿಣೀ ವಲ್ಲಭ ಜಾನಕೀಮನೋಹರ
ಇಂದು ಶ್ರೀಕೃಷ್ಣಗೆ ಕೈಯ ಮುಗಿಯುತಲಿದ್ದೆ ೧೯

ಪ್ರಳಯಕಾಲದಲಿ ಆಲದೆಲೆಯ ಮೇಲೆ
ಚತುರ್ಮುಖ ಪರಬ್ರಹ್ಮನೇ ಮಲಗಿಹ
ವಿರಾಟರೂಪನಾಗಿ ಈರೇಳು ಭವನವ ಉದರದಲಿ ಇಟ್ಟ
ಪುರಂದರವಿಠಲನ್ನ ಧ್ಯಾನದೊಳಗೆ ಇದ್ದೆ ೨೦

[ಈ ಪದದಲ್ಲಿ ಮಾನಸಪೂಜೆಯ ಸ್ವಾರಸ್ಯ ಮೂಡಿಬಂದಿದೆ ವ್ಯಾಸರಾಯಸ್ವಾಮಿಗಳ ಮಠದಲ್ಲಿ ಒಮ್ಮೆ ಸಾಧನೆ ದ್ವಾದಶಿಯ ಸಂದರ್ಭದಲ್ಲಿ ಮುಂಜಾನೆ ಪಂಕ್ತಿ ಭೋಜನಕ್ಕೆ ಪುರಂದರದಾಸರನ್ನು ಕರೆಹೇಳಲು ಪರಿಚಾರಕರನ್ನು ದಾಸರ ಮನೆಗೆ ಕಳುಹಿಸಿದರಂತೆ ದಾಸರು ಇನ್ನೂ ನಿದ್ರೆಯಿಂದ ಎದ್ದೇ ಇರಲಿಲ್ಲ, ಪರಿಚಾರಕರು ಅವರನ್ನು ಎಬ್ಬಿಸಲು ಅವರು ಒಡನೆಯೇ ಎದ್ದು ನಿತ್ಯಕರ್ಮಗಳನ್ನು ಮುಗಿಸದೆಯೇ, ಹಾಗೇ ಮಠಕ್ಕೆ ಬಂದು ಊಟಕ್ಕೆ ಕುಳಿತರಂತೆ ವೈದಿಕಬ್ರಾಹ್ಮಣರೂ ಪಂಡಿತರೂ ಈ ವಿಪರೀತವರ್ತನೆಗೆ ಸಿಟ್ಟಿಗೆದ್ದಾಗ ಸ್ವಾಮಿಗಳು 'ದಾಸರು ನಿದ್ರೆಯಲ್ಲೇ ಪೂಜೆಯನ್ನು ಮುಗಿಸಿರುತ್ತಾರೆ ಅವರನ್ನು ಎಲ್ಲರಂತೆ ಬಗೆಯಬಾರದು' ಎಂದು ಹೇಳಿ ದಾಸರ ಕಡೆ ನೋಡಿದರಂತೆ 'ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ' ಎನ್ನುವ ಗೀತಾವಚನ ಸ್ವಾಮಿಗಳ ಮನಸ್ಸಿನಲ್ಲಿದ್ದುದು ಆಗ ದಾಸರು ಹಾಡಿದ ಹಾಡು ಇದೆಂದು ಪ್ರತೀತಿ

ಈ ಪದದಲ್ಲಿ ಸಾಂಪ್ರದಾಯಿಕವಾಗಿ ನಡೆಸುವ ಆರಾಧನೆಯ ವಿವರಗಳೆಲ್ಲವನ್ನೂ ನಿರೂಪಿಸಿದ್ದಾರೆ ಇದರಲ್ಲಿ ಕಾಣಬರುವುದು ವೈಭವದ ಪೂಜೆ ಆದರೆ ಹೊರಗಣ ಪರಿಕರಗಳಿಲ್ಲದೆ, ತೋರಾಣಿಕೆಯಿಲ್ಲದೆ ಅಂತರಂಗದಲ್ಲೇ ಆಗಮಾಡಿಸುವ ಪೂಜೆ ]

ತಾರತಾರಕೆ—ಮೇಲೆ ಮೇಲೆ

ಚೂಡ—ಶಿಖರ , ಮಂಟಪದ ಮೇಲ್ಭಾಗದ ಕಳಶ

ರಾಜವರ್ಣ—ಹೊಳೆಯುವ ಹಳದಿಬಣ್ಣ

ಗಂಡಕಿಶಾಲಗ್ರಾಮ—ನೇಪಾಳದ ಗಂಡಕೀನದಿಯಲ್ಲೇ ದೊರೆಯುವ ಶಾಲಗ್ರಾಮಶಿಲೆ

ಸದರುಶನ—ಚಕ್ರಾಕಾರವನ್ನು ಮೂಡಿಸಿಕೊಂಡಿರುವ ಶಾಲಗ್ರಾಮಶಿಲೆ (ಸುದರ್ಶನ)

ಸೂರ್ಯಪಾನ—ದೇವರೆದುರು, ರಾಜರೆದುರು ಮರ್ಯಾದೆಗಾಗಿ ಇರಿಸುವ ವೃತ್ತಾಕಾರದ, ಮೇಲೆದ್ದುನಿಲ್ಲುವ ಛತ್ರಿ ಅಥವಾ ವ್ಯಜನ

ನೌಬತ್ತು—ನವಪತ್ತು , 'ನಗಾರಿನವಬತ್ತು' ಎನ್ನುವ ಪ್ರಯೋಗವಿದೆ, ನಗಾರಿಯೂ ಇನ್ನಿತರ ಎಂಟು ವಾದ್ಯಗಳೂ ಸೇರಿ ನವಬತ್ತು , ದೊಡ್ಡ ಭೇರಿಯಂಥ ವಾದ್ಯವನ್ನೂ ನವಬತ್ತು ಎಂದು ಕರೆಯುವುದುಂಟು

ಅಗರು—ಕರೇ ಅಗರುಚಕ್ಕೆ, ಸುವಾಸನೆಯ ಮರ, ಸುಗಂಧದ್ರವ್ಯ

ಕಚ್ಚೂರ—ಕಚೋರ

ಜಾಪರ—ಜಾಪಾರ, ಚಾಪಾರ, ಯವಾನಿ, ಅಜವಾನದ ಜಾತಿಗೆ ಸೇರಿದ ಗಿಡ

ತರುವು—ಗಿಡವು

ಮುಡಿವಾಳ—ಹ್ರೀವೇರವೆಂಬ ಸುಗಂಧ ಗಿಡ, ಲಾವಂಚಕ್ಕೂ ಈ ಹೆಸರಿದೆ ಬೇರನ್ನು ಬಳಸುತ್ತಾರೆ

ಹಂಡಾಹಂಡಿಯಲಿ ಇಳಿವಿ—ಹಂಡಾ (ಹಂಡೆ) ಎಂದರೆ ದೊಡ್ಡಪಾತ್ರೆ, ಹಂಡಿ ಎಂದರೆ ಸಣ್ಣಪಾತ್ರೆ ಈ ಪಾತ್ರೆಗಳಲ್ಲಿರಿಸಿಕೊಂಡು

ಪರಮಾನ್ನ—ಪಾಯಸ

ದಧ್ಯನ್ನ—ಮೊಸರು ಅನ್ನ (ದಧ್ಯೋದನ)

ಈರೇಳು ಭುವನ—ಹದಿನಾಲ್ಕು ಲೋಕಗಳು , ಕೆಳಗ ಅತಲ, ಸುತಲ ಮೊದಲಾದ ಏಳು ಲೋಕಗಳು, ಮೇಲೆ ಭುವರ್ಲೋಕ, ಸುವರ್ಲೋಕ ಮೊದಲಾದ ಏಳು ಲೋಕಗಳು



೫೬

ಆನಂದಭೈರವಿ　　　　　　　　　　　　　　　　　　　　　　　　　ಅಟ್ಟ

ಗಿಳಿಯು ಪಂಜರದೊಳಿಲ್ಲ ಹರಿಹರಿಯೆ
ಬರಿ ಪಂಜರವಾಯಿತಲ್ಲ　　　　　　　ಪ

ಅಕ್ಕ ಕೇಳೆ ಎನ್ನ ಮಾತು
ಚಿಕ್ಕದೊಂದು ಗಿಳಿಯು ಸಾಕಿದೆ
ಅಕ್ಕ ನಾನಿಲ್ಲದ ವೇಳೆ
ಬೆಕ್ಕು ಕೊಂಡು ಹೋಯಿತಯ್ಯೊ　　　　　೧

ಅರ್ಥಿಲೊಂದು ಗಿಳಿಯ ಸಾಕಿ
ಮುತ್ತಿನ್ಹಾರವನ್ನು ಹಾಕಿದೆ
ಮುತ್ತಿನ್ಹಾರ ಕೊಂಡು ಗಿಳಿಯು
ಎತ್ತಲ್ಹಾರಿ ಹೋಯಿತಯ್ಯೊ　　　　　೨

ಹಸುರು ಬಣ್ಣದ ಗಿಳಿಯು
ಕುಶಲ ಬುದ್ಧಿಯ ಗಿಳಿಯು
ಅಸುವು ಗುಂದಿ ಮರಿಯು ತಾನು
ಹಸನಗೆಡಿಸಿ ಹೋಯಿತಯ್ಯೊ　　　　　೩

ರಾಮ ರಾಮ ಎಂಬ ಗಿಳಿ
ಕೋಮಲ ಕಾಯದ ಗಿಳಿ
ಸಾಮಜ ಪೋಷಕ ತನ್ನ
ಪ್ರೇಮದಿ ಸಾಕಿದ ಗಿಳಿ　　　　　　೪

ಒಂಬತ್ತು ಬಾಗಿಲ ಮನೆಯೊಳ್
ತುಂಬಿದ ಸಂದಣಿ ಇರಲು
ಕಂಭ ಮುರಿದು ಡಿಂಬ ಬಿದ್ದು
ಅಂಬರಕ್ಕೆ ಹಾರಿ ಹೋಯಿತು　　　　　೫

ಮುಪ್ಪಾಗದ ಬೆಣ್ಣೆ ತಿಂದು
ತಪ್ಪದೆ ಹಾಕಿದ ಹಾಲ
ಒಪ್ಪದಿಂದ ಕುಡಿದು ಕೈ
ತಪ್ಪಿ ಹಾರಿಹೋಯಿತಯ್ಯೊ　　　　　೬

ಅಂಗೈಲಾಡುವ ಗಿಳಿ
ಮುಂಗೈಮೇಲಣ ಗಿಳಿ
ರಂಗ ಪುರಂದರವಿಠಲನ್ನ
ಅಂಗಣದೊಳಾಡುವ ಗಿಳಿ ೭

[ಪುರಂದರದಾಸರ ಮಗನೊಬ್ಬನು ಅವರ ಕಣ್ಣೆದುರಿಗೇ ತೀರಿಕೊಂಡನೆಂದೂ, ಆ ಸಂಕಟದಿಂದ ಈ ಹಾಡು ಹೊರಬಂದಿತೆಂದೂ ಪ್ರತೀತಿ ]

ಅರ್ಥಿಲಿ—ಪ್ರೀತಿಯಿಂದ

ಅಸುವು ಗುಂದಿ—ಪ್ರಾಣವನ್ನು ಕಳೆದುಕೊಂಡು

ಹಸನಗೆಡಿಸಿ—ನನ್ನ ಸುಖವನ್ನು ಹಾಳುಮಾಡಿ

ಸಾಮಜ ಪೋಷಕ—ಸಾಮವೇದದಿಂದ ಉತ್ಪನ್ನವಾದ, ಅದಕ್ಕೆ ಉಪವೇದವೆನಿಸಿದ, ಗಾಂಧರ್ವ ವಿದ್ಯೆ (ಸಂಗೀತ) , ಅದನ್ನು ಬೆಳೆಸಿದವರೆಂದು ದಾಸರು ತಮ್ಮನ್ನು ಬಣ್ಣಿಸಿಕೊಂಡಿದ್ದಾರೆ

ಒಂಬತ್ತು ಬಾಗಿಲ ಮನೆಯೊಳ್—ಒಂಬತ್ತು ಛಿದ್ರಗಳಿರುವ ಶರೀರ ('ನವದ್ವಾರೇ ಪುರೇ')

ಡಿಂಬ—ಈ ಮಾತಿಗೆ ಹೊಟ್ಟೆ, ಮಗು (ಡಿಂಭ) ಎಂಬರ್ಥಗಳಿವೆ ಆದರೆ ಈ ಸಂದರ್ಭದಲ್ಲಿ ಮನೆಯೆಂದು ಅರ್ಥಮಾಡಿದರೆ ಒಪ್ಪುತ್ತದೆ ಡಿಂಬವೆಂದರೆ ದೇಹವೂ ಆಗುತ್ತದೆ



ಭೈರವಿ ಝಂಪೆ

ಎಂದಪ್ಪಿಕೊಂಬೇ ರಂಗಯ್ಯನ, ಎಂದಪ್ಪಿಕೊಂಬೇ ಪ

ಎಂದಪ್ಪಿಕೊಂಬೆ ನಾನೆಂದು ಮುದ್ದಾಡುವೆ
ಎಂದಿಗೆ ಸವಿ ಮಾತನಾಡಿ ನಾ ದಣಿವೆ ಅ

ಅಂದುಗೆ ಪಾಡಗ ಗೆಜ್ಜೆ ಘಲು ಘಲ್ಲೆಂದು
ಚೆಂದಾಗಿ ಕುಣಿವ ಮುಕುಂದನ ಚರಣವ ೧

ಹೊನ್ನುಂಗುರ ಉಡಿದಾರ ಹೊಳೆವ ಪೀತಾಂಬರ
ಚೆನ್ನಾಗಿ ನಡುವಿಲಿಟ್ಟ ಜಾಹ್ನವಿ ಜನಕನ ೨

ಅರಳೆಲೆ ಮಾಗಾಯಿ ಕೊರಳ ಮುತ್ತಿನ ಹಾರ
ತರಳರ ಒಡಗೂಡಿ ಮುರಳಿಯ ಲೋಲನ ೩

ಅಪ್ಪಣ್ಣ ಭಾಗವತನ ರೂಪವು ತಾನಾಗಿ
ತುಪ್ಪದ ಬಿಂದಿಗೆ ತಂದ ಸರ್ಪಶಯನನ ೪

ಧರೆಯೊಳು ಸುಜನರ ಪೊರೆಯುತ್ತಲಿರುವನ
ಪುರಂದರವಿಠಲನ ಚರಣ ಕಮಲವ ೫

[ಈ ಹಾಡಿನ ಹಿನ್ನೆಲೆಯನ್ನು ಹೀಗೆ ಹೇಳುತ್ತಾರೆ ಪುರಂದರದಾಸರೊಮ್ಮೆ ತಮ್ಮ ತಂದೆಯ ಶ್ರಾದ್ಧಕ್ಕೆ ತಮ್ಮ ಗುರುಗಳಾದ ವ್ಯಾಸತೀರ್ಥರನ್ನು ಬರಮಾಡಿಕೊಂಡಿದ್ದರಂತೆ ಆಗ ನಡೆದ ಸಮಾರಾಧನೆಯಲ್ಲಿ ತಮ್ಮೊಬ್ಬ ಶಿಷ್ಯನನ್ನು ಕರೆದು 'ತುಪ್ಪವನ್ನು ಬಡಿಸೆಂ'ದರಂತೆ ಆದರೆ ತುಪ್ಪವು ಮುಗಿದುಹೋಗಿದ್ದು ಏನು ಮಾಡುವುದೆಂದು ಶಿಷ್ಯನು ದೂರ ಹೋಗಿ ವಿಚಾರಮಾಡುತ್ತಿರುವಷ್ಟರಲ್ಲಿ ದೇವರು ತಾನೇ ಆ ಶಿಷ್ಯನ ರೂಪವನ್ನು ತಾಳಿ ತುಪ್ಪ ತುಂಬಿದ ಬಿಂದಿಗೆಯನ್ನು ತಂದು ಎಲ್ಲರಿಗೂ ಬಡಿಸಿಹೋದನಂತೆ ಆಮೇಲೆ ಈ ಸಂಗತಿ ಪುರಂದರದಾಸರ ಗಮನಕ್ಕೆ ಬಂದಾಗ ಅವರು ದೇವರ ಕರುಣೆಯನ್ನು ಕೊಂಡಾಡಿ ಈ ಪದವನ್ನು ಹಾಡಿದರಂತೆ

ದಾಸರ ಮಗನೆಂದು ಹೇಳಲಾದ 'ಗುರುಪುರಂದರ ವಿಠ್ಠಲ' ಅಂಕಿತದ ದಾಸರ ಪದವೊಂದರಲ್ಲಿ ಪುರಂದರದಾಸರಿಗೆ ಅಪ್ಪಣ್ಣ ಭಾಗವತ ಪರಶು ಭಾಗವತ ಎಂಬಿಬ್ಬರು ಶಿಷ್ಯರಿದ್ದರೆಂದು ಹೇಳಿದೆ ]

## ೫೯

ಭೈರವಿ | | ಅಟ್ಟ
--- | --- | ---

ಒತ್ತೈಸಿದ ವ್ಯಾಸರಾಯ
ಚಿತ್ರಜನ್ನೈಯನ ಸಭೆಗೆ ಪ

ನಿತ್ಯ ಮುತ್ತೈದೆಯರೆಲ್ಲ
ಎತ್ತೆ ರತ್ನದಾರತಿಯ ಅ

ಹೇಮಮಯವಾದ ದಿವ್ಯ
ವ್ಯೋಮಯಾನವನ್ನ ಏರಿ
ಸ್ವಾಮಿ ವ್ಯಾಸರಾಯ ಪೊರಟ
ಪ್ರೇಮದಿ ಹರಿಪುರಕೆ ೧

ಹಾಟಕದ ಬೆತ್ತಕೋಟಿ
ಸಾಟಿಯಿಲ್ಲದೆ ಪಿಡಿದು
ನೀಟಾದ ಓಲಗದವರ
ಕೂಟಗಳ ಮಧ್ಯದಲ್ಲಿ ೨

ಸಾಧು ವಿಪ್ರ ಜನರೆಲ್ಲ
ವೇದಘೋಷಣೆಯ ಮಾಡೆ
ನಾದವುಳ್ಳ ನಗಾರಿಯು
ಭೇದಿಸಿತು ನಾಲ್ಕು ದಿಕ್ಕು ೩

ಹೇಮಮಯ ಪಿಡಿಯುಳ್ಳ
ಚಾಮರಂಗಳನ್ನೆ ಪಿಡಿದು
ಕಾಮಿನಿಮಣಿಯರ್ ಕೆಲದಿ
ಸ್ವಾಮಿಯೆಂದು ಬೀಸುತ್ತಿರೆ ೪

ಅರವಿಂದಾಸನಯ್ಯ
ಪುರಂದರವಿಠ್ಠಲನು
ಸಿರಿಸಹಿತದಿ ಬಂದು
ಕರ ಪಿಡಿದೆತ್ತಿದ್ದ ಕಂಡೆ ೫

[ವ್ಯಾಸತೀರ್ಥರು ತೀರಿಕೊಂಡ ಸಂದರ್ಭದಲ್ಲಿ ದಾಸರು ರಚಿಸಿದ ಪದ ಇದು ವ್ಯಾಸತೀರ್ಥರ ನಿರ್ಯಾಣವಾದದ್ದು ವಿಳಂಬಿನಾಮ ಸಂವತ್ಸರದ ಫಾಲ್ಗುಣ ಬಹುಳ ಚತುರ್ಥೀ ಸ್ಥಿರವಾರದಲ್ಲಿ, ಎಂದರೆ 1539ರ ಮಾರ್ಚ್ ಎಂಟರಂದು , ಅವರು ತೀರಿ ಕೊಂಡದ್ದು ಹಂಪಿಯಲ್ಲೇ ಅವರ ಬೃಂದಾವನ ಆನೆಗೊಂದಿಯ ನವಬೃಂದಾವನ ಗಡ್ಡೆಯಲ್ಲಿ ಒಂದು ]

ಚಿತ್ತಜನೈಯನ ಸಭೆಗೆ—'ಚಿತ್ತಜ'ನೆಂದರೆ ಮನ್ಮಥ (ಮನಸಿಜ), ಅವನ ಅಯ್ಯ, ಎಂದರೆ ತಂದೆ, ಕೃಷ್ಣ , ಅಥವಾ ವಿಷ್ಣು ಅವನ ಸಭೆಯೆಂದರೆ ವೈಕುಂಠ

ನಿತ್ಯಮುಕ್ತೈದಯರು—ದೇವತಾಸ್ತ್ರೀಯರು , ದೇವದಾಸಿಯರೆಂದು ಲೌಕಿಕ ಪ್ರಯೋಗ

ದಿವ್ಯವ್ಯೋಮವನ್ನೆ ಏರಿ—ಅರ್ಚಿರಾದಿಮಾರ್ಗವನ್ನು ಹಿಡಿದು

ಹರಿಪುರಕೆ—ಹರಿಯ ಪುರವೆಂದರೆ ವೈಕುಂಠ

ಹಾಟಕ—ಬಂಗಾರ

ನೀಟಾದ—ನೇಟ, ನೆಟ್ಟ, ನೇರ್ , ಇಲ್ಲಿ ಚೆಲುವಾದ ಎಂಬರ್ಥ

ಹೇಮಪುಯ —ಬಂಗಾರದಿಂದ ಮಾಡಿದ ಹಿಡಿಗಳನ್ನುಳ್ಳ ಚಾಮರಗಳನ್ನು ಹಿಡಿದು

ಕೆಲದಿ—ಪಕ್ಕದಲ್ಲಿ ನಿಂತು

ಅರವಿಂದಾಸನಯ್ಯ—ಅರವಿಂದ ಎಂದರೆ ತಾವರೆ, ವಿಷ್ಣುವಿನ ನಾಭಿಕಮಲ , ಅದ ರಲ್ಲಿ ಕುಳಿತು ಕಾಣಿಸಿಕೊಂಡ ಚತುರ್ಮುಖ ಬ್ರಹ್ಮ ಅರವಿಂದಾಸನ , ಅವನ ಅಯ್ಯ ಎಂದರೆ ತಂದೆ, ವಿಷ್ಣು



ಪಧ್ಮಮಾವತಿ ಅಟ್ಟ

ಪಾಪ್ಪೋಸು ಹೋದುವಲ್ಲ ಸ್ವಾಮಿ ಎನ್ನ
ಪಾಪ್ಪೋಸು ಹೋದುವಲ್ಲ ಪ
ಅಪಾರ ದಿನಗಳಿಂದ ಆರ್ಜನೆ ಮಾಡಿದ ಅ

ಉರಗಾದ್ರಿಯಲಿ ಸ್ವಾಮಿಪುಷ್ಕರಣಿ ಮೊದಲಾದ
ಪರಿಪರಿ ತೀರ್ಥ ಸ್ನಾನಗಳ ಮಾಡಿ
ಹರಿದಾಸರ ಕೂಡಿ ಗಿರಿರಾಯನ ಮೂರ್ತಿ
ದರುಶನದಲ್ಲಿ ಪ್ರೇಮರೆತಿರಲು ಎನ್ನ ೧

ಪರಮ ಭಾಗವತರ ಹರಿಕಥೆ ಕೇಳಲು
ಪರಮ ಭಕುತಿಯಿಂದ ಕೇಳುತಿರೆ
ಪರಮ ಪಾಪಿಗಳ ಪಾಲಾಗಿ ಪೋದುವು
ಪರಮ ಪುರುಷನ ಮನಸಿಗೆ ಬಂದೀಗ ೨

ಮಾಯಾದೇವಿ ಎನಗೆ ಮೆಚ್ಚಿ ಕೊಟ್ಟಿದ್ದಳು
ದಾಯಾದಿಗಳು ನೋಡಿ ಸಹಿಸಲಿಲ್ಲ
ಮಾಯಾರಮಣ ನಮ್ಮ ಪುರಂದರವಿಠಲನ
ಮಾಯದಿಂದಲಿ ಮಟ್ಟಮಾಯವಾದವು ಎನ್ನ ೩

[ಪುರಂದರದಾಸರು ಒಮ್ಮೆ ತಿರುಪತಿ ಯಾತ್ರೆಗೆ ಹೋಗಿದ್ದಾಗ, ಗುಡಿಯ ಹೊರಗೆ ಹರಿಕಥೆಯಾಗುತ್ತಿದ್ದಿತಂತೆ , ಅದನ್ನು ಕೇಳುತ್ತ ಕುಳಿತಿರಲು, ಹೊರಗಡೆ ಇರಿಸಿದ್ದ ಇವರ ಮೆಟ್ಟುಗಳನ್ನು ಯಾರೋ ಕದ್ದೊಯ್ದರಂತೆ ಹೊರಗೆ ಬಂದು ನೋಡಲು ಮೆಟ್ಟುಗಳಿಲ್ಲದಿರಲು ಈ ಹಾಡು ಹೊರಬಂದಿತೆಂದು ಹೇಳುತ್ತಾರೆ ಇಲ್ಲಿ 'ಪಾಪೋಸು' ಎಂಬ ಮಾತಿಗೆ ಕಾಲಿಗೆ ಹಾಕಿಕೊಳ್ಳುವ ಮೆಟ್ಟು ಎಂದೂ ಅರ್ಥವಿದೆ , ಪಾಪ–ಓಸು (ಓಸು, ಅನಿತು) ಪಾಪಗಳಷ್ಟು ಎಂಬ ಅರ್ಥವೂ ಆಗುತ್ತದೆ ದಾಸರು ಈ ಚಮತ್ಕಾರದ ಮಾತಿನಿಂದ ಸಮಾಧಾನವನ್ನು ತಂದುಕೊಂಡಿದ್ದಾರೆ ]

ಪಾಪೋಸು—ಪಾಪಾಸು, ಹಿಂದಿಯ 'ಪಾಯಪಾಸ' ಎಂಬ ಮಾತಿನ ರೂಪ , ಮೇಲೆ ಹೇಳಿದಂತೆ ಪಾಪ+ಓಸು, ಅಷ್ಟು ಪಾಪಗಳು

ಉರಗಾದ್ರಿ—ಶೇಷಾಚಲ, ತಿರುಮಲೆ–ತಿರುಪತಿಯ ಬೆಟ್ಟ

ಸ್ವಾಮಿಪುಷ್ಕರಿಣಿ—ವೇಂಕಟೇಶ್ವರ ಗುಡಿಯ ಹತ್ತಿರ ಇರುವ ಕೊಳ, ಇದಲ್ಲದೆ ಪಾಪ ವಿನಾಶನ, ಆಕಾಶಗಂಗೆ, ತುಂಬುರುತೀರ್ಥ ಮೊದಲಾದ ಇತರ ಕೊಳಗಳೂ ಇವೆ (ಪರಿ ಪರಿ ತೀರ್ಥ)

ಗಿರಿರಾಯನ—ಬೆಟ್ಟದೊಡೆಯನಾದ ಶ್ರೀನಿವಾಸನ

ಮಾಯಾದೇವಿ—ಜೀವನ ಸ್ವರೂಪ ಜ್ಞಾನಕ್ಕೆ ಅಡ್ಡಿಯಿರುವ, ತೆರೆಯಂತಿರುವ, ಅಜ್ಞಾನ, ಅದರ ಫಲವಾಗಿ ವಿಷಯಾಸಕ್ತಿ, ರಾಗದ್ವೇಷಾದಿಗಳು, ಪಾಪ ಸಂಘಟನೆ

ಮಾಯಾರಮಣ—ಲಕ್ಷ್ಮಿಯು ನಾರಾಯಣನ ಮಾಯಾ ರೂಪಿಣಿ, ಇಲ್ಲಿ ಮಾಯೆ ಯೆಂದರೆ ಅಚಿಂತ್ಯಾದ್ಭುತಶಕ್ತಿ



ಪಂತುವರಾಳಿ ಆದಿ

ನಿಮ್ಮ ಭಾಗ್ಯ ದೊಡ್ಡದೋ ನಮ್ಮ ಭಾಗ್ಯ ದೊಡ್ಡದೋ ಪ
ಸಮ್ಮತಿಂದ ನಾವು ನೀವು ಸಾಟಿ ಮಾಡಿ ನೋಡುವ ಬನ್ನಿ ಅ

ಹೇಮ ಹೊನ್ನು ಹಣಗಳಿಗೆ ಹೇರಳ ಭಯಗಳುಂಟು
ರಾಮನಾಮ ದ್ರವ್ಯಕಿನ್ನು ಯಾರ ಭಯವಿಲ್ಲವಯ್ಯ ೧

ಕಡಗ ಕಂಠಮಾಲೆಗಳಿಗೆ ಕಳ್ಳರ ಅಂಜಿಕೆಯುಂಟು
ಅಡವಿ ತುಳಸಿಮಾಲೆಗಿನ್ನು ಆರ ಅಂಜಿಕಿಲ್ಲವಯ್ಯ ೨

ವ್ಯಾಪಾರ ಉದ್ಯೋಗಕಿನ್ನು ವ್ಯಾಕುಲದ ಭಯವುಂಟು
ಗೋಪಾಳದ ವೃತ್ತಿಗಿನ್ನು ಗೊಡವೆ ಯಾರದಿಲ್ಲವಯ್ಯ ೩

ನರಕು ಬೆಲ್ಲ ತುಪ್ಪ ಧಾನ್ಯ ಸವೆದೀತೆಂಬ ಚಿಂತೆಯುಂಟು
ಹರಿನಾಮಾಮೃತಕೆ ಇನ್ನು ಯಾವ ಚಿಂತೆಯಿಲ್ಲವಯ್ಯ ೪

ನಿಮ್ಮ ಭಾಗ್ಯ ಲಕ್ಷ್ಮೀದೇವಿ ನಮ್ಮ ಭಾಗ್ಯ ನಾರಾಯಣನು
ನಮ್ಮ ನಿಮ್ಮ ಭಾಗ್ಯದೊಡೆಯ ಪುರಂದರವಿಠಲನು ೫

[ವಿಜಯನಗರದ ಅರಸ ಕೃಷ್ಣದೇವರಾಯನು ಪುರಂದರದಾಸರ ವೈರಾಗ್ಯವನ್ನು ಪರೀಕ್ಷಿಸಬೇಕೆಂದು ಮನಸ್ಸುಮಾಡಿ, ಅವರೊಂದಿಗೆ ಮಾತನಾಡುತ್ತಿರುವಾಗ ಈ ಪದ ಮೈದಳೆಯಿತೆಂದು ಪ್ರತೀತಿ ]

ಸಮ್ಮತಿಂದ—ಪರಸ್ಪರ ಒಡಂಬಡಿಕೆಯಿಂದ

ಹೇಮಹೊನ್ನು—ಈ ಚರಣಕ್ಕೆ ಪಾಠಾಂತರವಿದೆ

ಹೆಣ್ಣು ಹೊನ್ನು ಮಣ್ಣುಗಳಿಗೆ ಕಣ್ಣಿಡುವರಂಜಿಕೆಯುಂಟು
ಪನ್ನಗಶಯನನ ನಾಮಕೆ ಯಾರಂಜಿಕೆ ಇಲ್ಲವೋ

ವ್ಯಾಕುಲ—ಲಾಭನಷ್ಟಗಳ ಎಣಿಕೆ

೬೨

ವರಾಳಿ ಅಟ್ಟ

ಕರೆದರೆ ಓ ಎನ್ನಬಾರದೇ ಪ
ಕರುಣಾಸಾಗರ ಅನಿಮಿತ್ತ ಬಂಧುವೆ ಕೃಷ್ಣಾ ಅ

ತಂದೆ ವಿಠಲ ನಿನ್ನ ಗುಡಿಯೊಳಗೊಂದಿನ
ಮಂದಮತಿಗಳು ಕಂಭಕೆ ಕಟ್ಟಲು
ಸುಂದರ ರತ್ನಖಚಿತ ಕಡಗವ ವೇಗ
ದಿಂದಾ ಸೂಳೆಗೆ ಯಿತ್ತು ಕಾಯ್ದುಕೊಂಡೆಲೆ ಈಗ ೧

ಮಾತಾಯಿ ಎನ್ನನು ಕೊಲ್ಲಬೇಕೆನುತ, ಹಾ
ಲೊಳಗೆ ವಿಷವ ಬೆರೆಸಿರಲಾಕ್ಷಣ
ತಿಳಿದವರಿಗೆ ಶ್ರೇಷ್ಠನಾದುದರಿಂದ ಗ
ರಳವುಂಡು ಕ್ಷೀರವೆನಗುಣಿಸಿದೆ ಈಗ ೨

ಮಲ್ಲಿಕಾರ್ಜುನನ ಯಾತ್ರೆಗೆ ಪೋಗುವ ಮಾರ್ಗ
ದಲ್ಲಿ ವ್ಯಾಘ್ರ ಬಂದು ಕೊರಳ ಪಿಡಿಯೆ
ಬಿಲ್ಲುಗಾರನಾಗಿ ಅಂದು ಕೊಂದು ಭಕ್ತ ವ
ತ್ಸಲನೆಂಬುವ ಬಿರುದುಳಿಸಿಕೊಂಡೆಲೊ ಈಗ ೩

ಪರಿಷೆಯೊಳಗೆ ಮರದಡಿಯಲ್ಲಿ ಮಲಗಿರೆ
ಉರಗನು ಬಂದು ಅಂಗುಟವ ಪಿಡಿಯೆ
ಕರದಿಂದ ಮೈಯೆಲ್ಲ ನೇವರಿಸಿ ಬಹು
ಪರಿಣಾಮವೆನಗಿತ್ತ ಪರಮಾತ್ಮನೆ ಈಗ ೪

ಕಳ್ಳರು ಒಂದಿನದಲಿ ಬಂದು ಎನ್ನನು
ಕಳ್ಳಿ ಸಾಲೊಳಗೆ ಕಡಿದು ತುಳಿಯೆ
ಅಲ್ಲೆ ವೈದ್ಯನಾಗಿ ಬಂದು ಅಡವಿಯು ತೊ
ಪ್ಪಲ್ಲ ಕಟ್ಟಿ ಗಾಯ ವೇಗದಿ ಮಾಯಿಸಿದೆ ಈಗ ೫

ಭೀಮರಥೀ ನದಿಯ ದಾಟಬೇಕೆನುತಲಿ
ನೇಮದಿಂದಲಿ ಬಂದು ತಟದಿ ನಿಲ್ಲೆ
ಶ್ರೀಮನೋರಮನೆ ನಿನ್ನಂಶದಿ ಪೊತ್ತೆನ್ನ
ಈ ಮಹಿಮೆಯೊಳಗೆ ತಂದಿತ್ತೆ ಹರಿಯೆ ಎನ್ನ ೬

ಪರಿಪರಿ ಭಕ್ತರ ಕಾಯ್ದೆಂದು ನಿಗಮದಿ
ಹಿರಿದಾಗಿ ಪೇಳಿದ್ದು ನಿಜವಹುದು
ಗರುಡಾದ್ರಿವಾಸ ಶ್ರೀ ಪುರಂದರವಿಠಲ
ಪೊರೆ ಜನ್ಮಜನ್ಮಕ್ಕೆ ತಾಯಿತಂದೆ ಈಗ ೭

[ಈ ಪದದ ನುಡಿಗಳಲ್ಲಿ ಒಂದೊಂದರಲ್ಲೂ ಒಂದೊಂದು ಜೀವನಪ್ರಸಂಗದ ನೆನಹಿದೆ ಮೊದಲನೆಯ ನುಡಿಯೇನೋ 'ಮುಯ್ಯಕ್ಕೆ ಮುಯ್ಯ ತೀರಿತು' ಎಂಬ ಹಾಡಿನ ಹಿನ್ನೆಲೆಯಲ್ಲಿರುವ ಕತೆಯನ್ನು ಸೂಚಿಸುತ್ತದೆ ಉಳಿದ ಪ್ರಸಂಗಗಳು ಪ್ರಸಿದ್ಧವಾಗಿಲ್ಲ ಅವರ ಮಲತಾಯಿ ಅವರನ್ನು ಕೊಲ್ಲಲೆಣಿಸಿದ್ದು ಅವರು ಶ್ರೀಶೈಲ ಯಾತ್ರೆಗೆ ಹೋದಾಗ ಹುಲಿ ಅವರನ್ನು ಕಾಡಿದ್ದು, ಯಾವುದೋ ಜಾತ್ರೆಯಲ್ಲಿ ಮರದ ಕೆಳಗೆ ಮಲಗಿದ್ದಾಗ ಹಾವು ಕಚ್ಚಿದ್ದು, ಕಾಡಿನಲ್ಲಿ ಕಳ್ಳರು ಅವರನ್ನು ಹೆಡೆಕಟ್ಟಿ ಹಿಂಸಿಸಿದ್ದು, ಪಂಢರಪುರದ ಭೀಮಾನದಿಯನ್ನು ದಾಟಬೇಕೆಂದಿರುವಾಗ ಹರಿಯೇ ಅವರನ್ನು ದಾಟಿಸಿದ್ದು ಇವೆಲ್ಲ ನಮಗೆ ಬೇರೆ ಯಾವ ಆಕರದಿಂದಲೂ ತಿಳಿದುಬರುವುದಿಲ್ಲ ]

ಅನಿಮಿತ್ತಬಂಧು—ಯಾವ ಪ್ರತ್ಯುಪಕಾರವನ್ನೂ ಅಪೇಕ್ಷಿಸದೆ, ನೆರವಿನ ಕರೆಗಾಗಿ ಕಾಯದೆ ಸಮಯಕ್ಕೆ ಬಂದೊದಗುವವನು

ಗರಳ—ವಿಷ

ಮಲ್ಲಿಕಾರ್ಜುನನ ಯಾತ್ರೆಗೆ—ಶ್ರೀಶೈಲ ಕ್ಷೇತ್ರಕ್ಕೆ

ಪರಿಷೆ—ಜಾತ್ರೆ, ಸಂತೆ

ಉರಗ—ಹಾವು

ಅಂಗುಟ—ಕಾಲ ಬೆರಳು

ಅಡವಿಯ ತೊಪ್ಪಲ—ಕಾಡಿನ ಸೊಪ್ಪು (ಮದ್ದಿಗೆ ಬರುವಂಥದು)

ಭೀಮರಥೀ—ಸಹ್ಯಾದ್ರಿಯಲ್ಲಿ ಹುಟ್ಟುವ ನದಿ, ಪಂಢರಪುರದ ನೆರೆಯಲ್ಲಿ ಹರಿಯುತ್ತದೆ

ಗರುಡಾದ್ರಿ—ತಿರುಮಲೆ–ತಿರುಪತಿಯ ಬೆಟ್ಟಸಾಲುಗಳಲ್ಲಿ ಒಂದು

೬೩

ತೋಡಿ — ಆದಿ

ಏನು ಒರೆದೆಯೊ ಬ್ರಹ್ಮ ನೀನೆಷ್ಟು ನಿರ್ದಯನೊ ಅಭಿ
ಮಾನವನು ತೊರೆದು ಪರರನ್ನು ಬೇಡುವುದ — ಪ

ಗೇಣೊಡಲು ಪೊರೆವುದಕೆ ಪೋಗಿ ಪರರನು ಪಂಚ
ಬಾಣಸಮ ರೂಪ ನೀನೆಂದು ಪೊಗಳೆ
ಆಣೆ ನಿನ್ನಾಣೆಲ್ಲ ನಾಳೆ ಬಾರೆಂದೆನಲು
ಗಾಣ ತಿರುಗುವ ಎತ್ತಿನಂತೆ ಬಳಲುವುದ — ೧

ಒಲ್ಲಿದರ ಮನೆಯ ಬಾಗಿಲ ಕಾಯ್ದು ಬೇಸತ್ತು
ನೊಲ್ಲು ಸೊಲ್ಲಿಗೆ ಆವರ ಕೊಂಡಾಡುತ
ಇಲ್ಲ ಈ ವೇಳೆಯಲಿ ತಿರುಗಿ ಬಾರೆಂದನಲು
ಅಲ್ಲವನು ತಿಂದ ಇಲಿಯಂತೆ ಕೊರಗುವುದ — ೨

ಹಿಂದೆ ಬರೆದ ಬರಹ ಹೇಗಾದರಾಗಲಿ
ಮುಂದೆನ್ನ ವಂಶದಲಿ ಜನಿಸುವರ ಕಾಯೊ
ಸಂದೇಹಿಸಲಿಬೇಡ ಪುರಂದರವಿಠ್ಠಲ
ಕಂದರ್ಪ ಜನಕ ಉಡುಪಿಯ ಕೃಷ್ಣನಾಣೆ — ೩

[ಹೊಟ್ಟೆಯ ಪಾಡಿನ ಕ್ರೌರ್ಯದ ಧಗೆಯಲ್ಲಿ ಅಭಿಮಾನ ಆತ್ಮಗೌರವಗಳ ಕುಡಿ ಒಣಗಿ ಹೋಗುವ ಸಂದರ್ಭದ ವಿಶ್ಲೇಷಣೆ ಈ ಪದದಲ್ಲಿದೆ 'ಬೇಡುವ ಕೈಕೆಳಗೆ' ಎಂಬ ಗಾದೆಯ ಮಾತನ್ನು ಈ ಪದ ನೆನಪಿಗೆ ತರುತ್ತದೆ ಆತ್ಮಾಭಿಮಾನವನ್ನು ಬಲಿ ಕೊಟ್ಟು ಪರರ ಎದುರಿಗೆ ಕೈಯೊಡ್ಡಿ ನಿಲ್ಲುವವರ ದೇಹಸ್ಥಿತಿ, ಮನಸ್ಸಿನ ಸ್ಥಿತಿಗಳು ಇಲ್ಲಿ ಚಿತ್ರಣಗೊಂಡಿವೆ ಹೊಟ್ಟೆಗಿಲ್ಲದ ಸ್ಥಿತಿ ನಮ್ಮನ್ನು, ಇತರರನ್ನು ಆಶ್ರಯಿಸುವ ದೀನ ಸಂದರ್ಭಕ್ಕೆ ಒಳಗುಮಾಡುತ್ತದೆ ಸುಳ್ಳೇ ಹೇಳಿ ಅವರನ್ನು ಹೊಗಳಿ ಮನ್ಮಥನಿಗೆ ಸಮಾನರೂಪದವರು ಎಂದು ಮೆಚ್ಚಿಸಲು ಹೋಗುವ ಬುದ್ಧಿಯನ್ನು ಪ್ರೇರಿಸುತ್ತದೆ ಗಾಣ ತಿರುಗುವ ಎತ್ತು, ಅಲ್ಲ (ಶುಂಠಿ) ತಿಂದ ಇಲಿ ಈ ಹೋಲಿಕೆಗಳಂತೂ ತುಂಬ ಸಮಂಜಸವಾಗಿವೆ ಇಂಥ ಕಂಗಾಲಿನ ಸ್ಥಿತಿ ತನ್ನ ಕಾಲಕ್ಕೇ ಮುಗಿದು ಹೋಗಲಿ, ವಂಶದಲ್ಲಿ ಮುಂದುವರಿಯುವುದು ಬೇಡ ಎಂದು ಆ ನೊಂದ ಜೀವ ಹಾರೈಸುತ್ತದೆ ]

ಏನು ಬರೆದೆಯೋ —ಪ್ರತಿಯೊಬ್ಬ ಮನುಷ್ಯನೂ ಭೂಮಿಯ ಮೇಲೆ ಕಾಣಿಸಿಕೊಳ್ಳುವಾಗಲೇ ಅವನ ಹಣೆಯ ಮೇಲೆ ಬ್ರಹ್ಮನ ಬರಹವಿದ್ದು (ಲಲಾಟ ಲಿಖಿತಾ ರೇಖಾ) ಅದರ ಪ್ರಕಾರ ಅವನ ಸುಖದುಃಖಾನುಭವಗಳು ಒದಗುತ್ತವೆ ಎಂದೂ, ಈ ಬರಹವನ್ನು ಯಾರೂ ತಿದ್ದಲಾರರು, ಅಳಿಸಲಾರರು ಎಂದೂ ನಂಬಿಕೆ

ಅಭಿಮಾನ—ಆತ್ಮಾಭಿಮಾನ , ದೈನ್ಯವೃತ್ತಿಯಲ್ಲಿರಬಾರದೆಂಬ ಆತ್ಮವಿಶ್ವಾಸ

ಗೇಣೊಡಲು —ಗೇಣುಪ್ರಮಾಣದ ಹೊಟ್ಟೆಯನ್ನು ಹೊರೆಯಲು

ಪಂಚಬಾಣನವು—ಪಂಚಬಾಣನೆಂದರೆ ಮನ್ಮಥ , ಅರವಿಂದ (ತಾವರೆ), ಅಶೋಕ, ಚೂತ (ಮಾವಿನ ಚಿಗುರು), ನವಮಲ್ಲಿಕಾ (ಮಲ್ಲಿಗೆ), ನೀಲೋತ್ಪಲ (ಕನ್ನೈದಿಲೆ) ಈ ಐದು ಹೂಗಳನ್ನೇ ಬಾಣಗಳಾಗಿ ಉಪಯೋಗಿಸುವವ ಅವನಂತೆ ಚೆಲುವನೆಂದು ಕಂಡಕಂಡವರನ್ನು ಹೊಗಳಬೇಕಾದ ಪರಿಸ್ಥಿತಿ

ಬಲ್ಲಿದರ—ಹಣವಂತರ

ಸೊಲ್ಲುಸೊಲ್ಲಿಗೆ—ಮಾತುಮಾತಿಗೆ , ಅಡಿಗಡಿಗೆ

ಅಲ್ಲ—ಶುಂಠಿ

ಕಂದರ್ಪಜನಕ—ಮನ್ಮಥನ ತಂದೆಯಾದ ಕೃಷ್ಣ



ಕಾಂಬೋದಿ ಝಂಪೆ

ಯಾಕೆನ್ನನೀ ರಾಜ್ಯಕೆಳೆತಂದ ಹರಿಯೆ ಪ

ಸಾಕಲಾರದೆ ಎನ್ನನೇಕೆ ಪುಟ್ಟಿಸಿದೆ ಅ

ದೇಶ ಪರಿಚಯವಿಲ್ಲ ದೇಹದಲಿ ಬಲವಿಲ್ಲ
ವಾಸಿ ಪಂಥಗಳೆಂಬ ಒಲುಮೆ ಎನಗಿಲ್ಲ
ಬೇಸರಿಸೆರೆದುರಿಲ್ಲ ಬೇರೆ ಹಿತಜನರಿಲ್ಲ
ವಾಸುದೇವನೆ ಬಲ್ಲ ಈ ಬಗೆಯನೆಲ್ಲ ೧

ಎನ್ನ ಕುಲದವರಿಲ್ಲ ಎನಗೊಬ್ಬರ್ಹಿತರಿಲ್ಲ
ಮನ್ನಿಸುವ ಧೊರೆಯಿಲ್ಲ ಮನಕೆ ಜಯವಿಲ್ಲ
ಹೊನ್ನು ರನ್ನಗಳಿಲ್ಲ ಒಲಿಸಿಕೊಂಬುವರಿಲ್ಲ
ಇನ್ನಿಲ್ಲಿ ತರವಲ್ಲ ಇಂದಿರೇಶನೆ ಬಲ್ಲ ೨

ಕರೆದು ಕೊಡುವವರಿಲ್ಲ ಕರುಣೆ ತೋರುವರಿಲ್ಲ
ಪರಮಾತ್ಮನಲ್ಲದೆ ಪರಗತಿಯು ಇಲ್ಲ
ಹರಣದಲಿ ಹುರುಡಿಲ್ಲ ಕರುಣದಲಿ ದೃಢವಿಲ್ಲ
ಧೊರೆ ಪುರಂದರವಿಠ್ಠಲ ತಾನೆಲ್ಲ ಬಲ್ಲ ೩

[ಪುರಂದರದಾಸರು ತಮ್ಮ ಕಡೆಗಾಲದಲ್ಲಿ ಹಂಪೆಯನ್ನು ಬಿಟ್ಟು ದೂರದ ವೆಂಗಿ ನಾಡಿಗೆ ಹೊರಟುಬಂದಾಗ, ತಮ್ಮ ಬವಣೆಯನ್ನು ಈ ಹಾಡಿನಲ್ಲಿ ತೋಡಿಕೊಂಡರೆಂದು ಹೇಳುತ್ತಾರೆ 'ಈ ರಾಜ್ಯ'ವೆಂದರೆ ಸಂಸಾರವೆಂದಾದರೂ ಆಗಬಹುದು ]

ವಾಸಿಪಂಥಗಳು—ಅನುಸರಿಸಬಹುದಾದ ದಾರಿಗಳು
ಬೇಸರಿಸೆರೆದುರಿಲ್ಲ—ಬೇಸರಪಟ್ಟುಕೊಳ್ಳದೆ ವಿಧಿಯಿಲ್ಲ
ಮನಕೆ ಜಯ—ಮನಸ್ಸಿಗೆ ಹರ್ಷ, ಉತ್ಸಾಹ,
ಇನ್ನಿಲ್ಲಿ ತರವಲ್ಲ—ಇನ್ನು ಮುಂದೆ ಇಲ್ಲಿ ಬಾಳುವುದು ಸರಿಯಲ್ಲ
ಹರಣ—'ಪ್ರಾಣ'ವೆಂಬ ಸಂಸ್ಕೃತ ಮಾತಿನ ತದ್ಭವರೂಪ
ಹುರುಡು—ಪುರುಳ್ , ಶಕ್ತಿ, ಸಾಮರ್ಥ್ಯ
ಕರಣದಲಿ—ಇಂದ್ರಿಯಗಳಲ್ಲಿ

ಕಾಂಭೋದಿ ರಘಂಪೆ

ಆರೇನು ಮಾಡುವರು ಅವನಿಯೊಳಗೆ ಪ

ಪೂರ್ವಜನ್ಮದ ಕರ್ಮ ಹಣೆಯಲ್ಲಿ ಒರೆದುದಕೆ ಅ

ಮಾಡಿಪಡುಗೆಯು ಕೆಡಲು ಮನೆಯ ಗಂಡನು ಬಿಡಲು
ಕೂಡಿದ್ದ ಸತಿ ತಾನು ಕುಣಸ್ಯಾಡಲು
ಗೋಡೆಗೆ ಬರೆದ ಹುಲಿ ಘುಡಿಘುಡಿಸಿ ತಿನಬರಲು
ಆಡದ ಮಾತುಗಳ ಅಖಿಳರೂ ನಿಜವೆನಲು ೧

ಹೊಲ ಬೇಲಿ ಮೆದ್ದರೆ ಮೊಲವದ್ದು ಇರಿದರ
ತಲೆಗೆ ತನ ಕೈಪೆಟ್ಟು ತಾಕಿದರೆ
ಹಳಲು ಹಾವಾದರೆ ಗೆಳೆಯ ರಿಪುವಾದರೆ
ಕಲಸಿಟ್ಟ ಅವಲಕ್ಕಿ ಕಲಪರಟಿ ನುಂಗಿದರೆ ೨

ಹೆತ್ತತಾಯಿ ಮಕ್ಕಳಿಗ ಹಿಡಿದು ವಿಷ ಹಾಕಿದರೆ
ಮತ್ತೆ ತಂದೆಯು ಹೊರಗೆ ಮಾರಿದರೆ
ತೊತ್ತು ಅರಸಿಗೆ ಪ್ರತಿ ಉತ್ತರವನಾಡಿದರೆ
ಕತ್ತಲೆಯುಂ ಬೆನ್ನಟ್ಟಿ ಕರಡ್ಯಾಗಿ ಕಚ್ಚಿದರೆ ೩

ಕಣ್ಣಿನೊಳಗಿನ ಬೊಂಬೆ ಕಚ್ಚ್ಯಾಡ ಬಂದರೆ
ಹೆಣ್ಣಿನ ಹೋರಾಟ ಹೆಚ್ಚಾದರೆ
ಅನ್ನ ಉಣ್ಣದೆ ಬಹಳ ಅಜೀರ್ಣವಾದರೆ
ಪುಣ್ಯ ತೀರ್ಥಗಳಲ್ಲಿ ಪಾಪ ಘಟಿಸಿದರೆ ೪

ಏರಿ ಕುಳಿತ ಕೊಂಬೆ ಎರಡಾಗಿ ಮುರಿದರೆ
ಮೇರೆ ತಪ್ಪಿ ವಿಧಿಯು ಮೆರೆದರೆ
ಆರಿದ್ದ ಇದ್ದಲಿಯು ಅಗ್ನಿಯಾಗುರಿದರೆ
ಧೀರ ಪುರಂದರವಿಠಲ ನಿನ್ನ ದಯ ತಪ್ಪಿದರೆ ೫

[ಮತ್ತೊಂದು ಅರ್ಥವಾಗದ ಪದ]

ಗೋಡೆಗೆ ಬರೆದ ಹುಲಿ —ಗೋಡೆಯ ಮೇಲೆ ಬರೆದ ಹುಲಿಯು ಚಿತ್ರವೇ ಪ್ರಾಣ ವನ್ನು ಪಡೆದು ತನ್ನನ್ನು ತಿನ್ನ ಬರುವುದಾದರೆ

ಆಡಿದ ಮಾತುಗಳ —ತಾವು ಆಡದಿದ್ದ ಮಾತುಗಳನ್ನೂ ಆಡಿದರೆಂದು ಎಲ್ಲರೂ ಸಾಧಿಸುವುದಾದರೆ

ಮೊಲವೆದ್ದು ಇರಿದರೆ—ಸಾಧುಪ್ರಾಣಿಯೂ, ಅಂಜಿಕೆಯ ಸ್ವಭಾವದ್ದೂ ಆದ ಮೊಲ ಕ್ರೂರಿಯಾಗಿ ತನ್ನ ಮುಸುಡಿಯಿಂದ ತಿವಿಯಲು ಬರುವುದಾದರೆ

ಹೆಳಲು—ಹಿಣಿಲ್, ಹೆರಳು , ತಲೆಗೂದಲನ್ನು ಹೆಣೆದು ಓರಣಮಾಡಿದ ಜಡೆ,

ಕಲಪರಟಿ—ಕಲ್ಲಿನ ಪಾತ್ರೆ, ಗಡಿಗೆ

ತೊತ್ತು—ದಾಸಿ, ಕೆಲಸದವಳು

ಆನಂದಭೈರವಿ | ರೂಪಕ

ನಾನೇಕೆ ಪರದೇಶಿ ನಾನೇಕೆ ಬಡವನೊ
ಶ್ರೀನಿಧೇ ಹರಿ ಎನಗೆ ನೀನಿರುವ ತನಕ ಪ

ಪುಟ್ಟಿಸಿದ ತಾಯಿ ತಂದೆ ಇಷ್ಟಮಿತ್ರನು ನೀನೆ
ಇಷ್ಟ ಬಂಧು ಬಳಗ ಸರ್ವ ನೀನೆ
ಪೆಟ್ಟಿಗೆಯೊಳಗಿನ ಅಷ್ಟಾಭರಣ ನೀನೆ
ಶ್ರೇಷ್ಠಮೂರುತಿ ಕೃಷ್ಣ ನೀನಿರುವತನಕ ೧

ಒಡಹುಟ್ಟಿದವ ನೀನೆ ಒಡಲಹೊರೆವವ ನೀನೆ
ಉಡಲು ಹೊದೆಯಲು ವಸ್ತ್ರ ಕೊಡುವವ ನೀನೆ
ಮಡದಿ ಮಕ್ಕಳನೆಲ್ಲ ಕಡೆಹಾಯಿಸುವವ ನೀನೆ
ಬಿಡದೆ ಸಲಹುವ ಒಡೆಯ ನೀನಿರುವತನಕ ೨

ವಿದ್ಯೆ ಹೇಳುವವ ನೀನೆ ಬುದ್ಧಿ ಕಲಿಸುವವ ನೀನೆ
ಉದ್ಧಾರಕರ್ತ ಮಮಸ್ವಾಮಿ ನೀನೆ
ಮುದ್ದು ಶ್ರೀ ಪುರಂದರವಿಠಲ ನಿನ್ನಡಿಮೇಲೆ
ಬಿದ್ದು ಕೊಂಡಿರುವತನಕ ಏತರ ಭಯವೊ ೩

[ಹಿಂದಿನ ಪದದಲ್ಲಿ ಕಾಣುವ ದೈನ್ಯಭಾವವನ್ನು ಹೊರದೂಡಿ, ತಾವೇ ಸಮಾಧಾನ ತಂದುಕೊಂಡ ವೇಳೆ ಮೂಡಿಕೊಂಡ ಪದ ದೂರದ ವೆಂಗಿನಾಡು ಅವರಿಗೆ ಪರದೇಶವೇ , ಅಲ್ಲಿ ಅವರನ್ನು ಆದರಿಸುವ ಜನವಿಲ್ಲದೆ ಬಡವರಾಗಿಯೇ ಇದ್ದಿರಬಹುದು ಆದರೆ ಹರಿಯನ್ನೇ ನಂಬಿಕೊಂಡಿರುವ ಅವರಿಗೆ ಈ ದೀನಭಾವ ಸರಿಯಾದುದಲ್ಲ ಎಂದೆನಿಸಿರಬೇಕು ]

ಅಷ್ಟಾಭರಣ—ಆಭರಣಗಳಲ್ಲಿ ಆಭೇದ್ಯ (ಕುಂಡಲದ್ವಯ), ಬಂಧನೀಯ (ಕುಸುಮ, ಧಮ್ಮಿಲ್ಲ), ಕ್ಷೇಪ್ಯ (ನೂಪುರ, ಉಂಗುರ), ಮತ್ತು ಆರೋಪ್ಯ (ಹಾರ, ಕಂಕಣ) ಎಂಬುವು

ಒಡಲಹೊರೆವ—ಹೊಟ್ಟೆತುಂಬಿಸಿಕೊಳ್ಳಲು ಕಾರಣವಾಗುವವ

ಕಡೆಹಾಯಿಸುವವ—ದಾರಿ ತೋರಿಸಿ ಕಾಪಾಡುವವ

೬೭

## ಮರಣ

ತೆರಳಿದರು ಹರಿಪುರಕೆಂದು ಪ

ಪುರಂದರದಾಸರಾಯರು ದೀನಬಂಧು ಅ

ರಕ್ತಾಕ್ಷಿವತ್ಸರ ಪುಷ್ಯಾಂತ ರವಿವಾರ
ಮುಕ್ತಿಗೈದಿದರು ಕೇಳಿ ಬುದಜನರು ೧

ವಿರೂಪಾಕ್ಷ ಕ್ಷೇತ್ರದಿ ವಿಠಲನ್ನ ಸನ್ನಿಧಿಯಲ್ಲಿ
ಶರೀರವನಿರಿಸಿ ಅನಾದರನು ಹರಿಸಿ ೨

ಎತ್ತುವರಾರತಿ ಪುಷ್ಪಕವೇರಿಸಿ
ಸತ್ತಿಗೆ ಪಿಡಿಯೇ ದುಂದುಭಿಗಳು ೩

ಆ ಮಹಾವೈಕುಂಠನೈದುವರಿಗೆ ಹರಿ
ನಾಮದ ಸೋಪಾನ ದಯದಿಂದ ತೋರಿ ೪

ವರವೇದತುಲ್ಯ ಪದಗಳ ಸಂಖ್ಯೆಯ ಮಾಡಿ
ಗುರು ಮಧ್ವಪತಿವಿಠಲನ್ನ ಸ್ಮರಿಸುತಲಿ ೫

[ಈ ಪದವನ್ನು ರಚಿಸಿರುವ ಗುರುಮಧ್ವಪತಿವಿಠಲಾಂಕಿತದ ದಾಸರು ಪುರಂದರ ದಾಸರ ಮಕ್ಕಳೆಂದೇ ಪ್ರತೀತಿ ಕಮಲಾಪುರದ ತಾಮ್ರಶಾಸನದಲ್ಲಿ ಮಧ್ವಪದಾಸ ರೆಂಬ 'ಶ್ರೀಪುರಂದರದಾಸಜ'ರ ಹೆಸರಿದೆ ಆದರೆ ಈ ಪದವನ್ನು ರಚಿಸಿದವರು ಅವರೇ ಎಂಬುದು ಸಂದೇಹ ]

ಹರಿಪುರಕೆ—ವೈಕುಂಠಕ್ಕೆ ವಿವರಗಳಿಗೆ ನೋಡಿ, ವಾದಿರಾಜರ 'ವೈಕುಂಠವರ್ಣನೆ'

ವಿರೂಪಾಕ್ಷ ಕ್ಷೇತ್ರದಿ—ಹಂಪೆಯಲ್ಲಿ , ವಿಜಯವಿಟ್ಠಲನ ಗುಡಿಯಲ್ಲಿ

ಹರಿನಾಮದ ಸೋಪಾನ —ಹರಿಯ ಪ್ರಸಾದಕ್ಕೆ ನಾಮಸ್ಮರಣೆ ಒಂದೇ ಸಾಕೆಂಬ ತತ್ತ್ವವನ್ನು ಜನರಿಗೆ ಹೇಳಿ

ವರವೇದತುಲ್ಯಪದಗಳ —ಉಪನಿಷತ್ತುಗಳಿಗೆ ಸಮಾನವಾದ ವ್ಯಾಸತೀರ್ಥರು ಪುರಂದರದಾಸರ ರಚನೆಗಳನ್ನು ಪುರಂದರೋಪನಿಷತ್ತೆಂದು ಬಣ್ಣಿಸಿದರು



# ಭಾಗ ೩

## ಕ್ಷೇತ್ರಸಂದರ್ಶನ

ಹರಿದಾಸರಿಗೆ ಕ್ಷೇತ್ರಾಟನ ತೀರ್ಥಸ್ನಾನಗಳು ಸಾಧನೆಯಲ್ಲಿ ಮುಖ್ಯವಾದ ವಿವರ. ಹರಿಯ ವಿಭಿನ್ನ ಅವತಾರಗಳ ಸ್ವಾರಸ್ಯವನ್ನು ಮನಗಾಣುವುದು ಉದ್ದೇಶ. ಹಿನ್ನೆಲೆಯಲ್ಲಿನ ನಂಬಿಕೆ ಇದು—ದೇವರು ಸಾಕಾರ, ಅವನ ಮಹಿಮೆಗಳು ಅನಂತ. ಭಕ್ತರಿಗೆ ಅವನು ಒಲಿಯುವ ಬಗೆಗಳ ಪರೆ ವೇರ. ಅವನು ಒಲಿದ ಎಡೆಗಳು ಪವಿತ್ರವಾದುವು. ಅವನ ಒಲುಮೆಯನ್ನು ನಿರ್ದೇಶಿಸುವ ಪುರಾಣಪ್ರಸಂಗಗಳು ಹರಿಸ್ಮರಣೆಗೆ ನೆರವಾಗುತ್ತವೆ. ಮೇಲಾಗಿ ಕ್ಷೇತ್ರಗಳಲ್ಲಿ ತಿರುಗಾಡುವಾಗ ಭಕ್ತಜನರ ಸಂಪರ್ಕ ಒದಗುತ್ತದೆ, ಸತ್ಸಂಗದಿಂದ ಅಂತರಂಗ ಶುದ್ಧಿ. ಪುರಂದರದಾಸರು ಉತ್ತರಭಾರತಕ್ಕೆ ಹೋಗಿದ್ದರೋ ಇಲ್ಲವೋ ತಿಳಿಯುವುದಿಲ್ಲ. ಆದರೆ ಅಲ್ಲಿನ ಕೆಲವು ಕ್ಷೇತ್ರಗಳನ್ನು ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ. ದಕ್ಷಿಣಭಾರತದಲ್ಲೇನೋ ಅವರು ಅಡ್ಡಾಡಿದ ಪ್ರತೀತಿಯಿದೆ. ತಿರುಪತಿ, ಕಂಚಿ, ಶ್ರೀರಂಗ, ಮನ್ನಾರುಗುಡಿ, ಅನಂತಶಯನ, ಸೇತು, ಶ್ರೀಮುಷ್ಣ, ಭದ್ರಾಚಲ, ಕುಂಭಕೋಣ, ಘಟಿಕಾಚಲಗಳಲ್ಲದೆ ಕನ್ನಡನಾಡಿನಲ್ಲಿ ಹಂಪಿ, ಶ್ರೀರಂಗಪಟ್ಟಣ, ಉಡುಪಿ, ಮೇಲುಕೋಟೆ, ಬೇಲೂರು, ಮುಳೂರು, ತೊರವೆ, ನಾಗಮಂಗಲ, ಗದಗು, ಕೂಡಲಿಪುರ, ಹೊಳೆಹೊನ್ನೂರು ಇಲ್ಲೆಲ್ಲ ಅವರು ತಿರುಗಾಡಿದುದಕ್ಕೆ ಸಾಕ್ಷಿಯಾಗಿ ಪದಗಳಿವೆ.

# ಅರುಣಗಿರಿ

ಅರುಣಗಿರಿ (ಅರುಣಾಚಲ) ತಮಿಳುನಾಡಿನ ಹೆಸರಾಂತ ಶೈವಕ್ಷೇತ್ರಗಳಲ್ಲಿ ಒಂದು , ಈಗ ತಿರುವಣ್ಣಾಮಲೆಯೆಂಬ ಹೆಸರಾಗಿದೆ ಇಲ್ಲಿರುವ ಬೆಟ್ಟದಿಂದ ಈ ಕ್ಷೇತ್ರದ ಹೆಸರು , ಅರುಣಗಿರಿಯೆಂಬುದೇ ಬೆಟ್ಟ, ಮೊದಲಿಗೆ ಶೋಣಾಚಲವೆಂಬ ಹೆಸರಿದ್ದಿತು ಸುಮಾರು ಮೂರುಸಾವಿರ ಅಡಿ ಎತ್ತರವಿರುವ ಈ ಬೆಟ್ಟ ಶಿವಲಿಂಗದ ಆಕಾರದಲ್ಲೇ ಇದ್ದು, ಶಿವನ ಪ್ರತೀಕವೆಂದೇ ನಂಬಿಕೆಯಿದೆ ಯಾತ್ರಿಕರು ಗಿರಿಪ್ರದಕ್ಷಿಣೆಯನ್ನು ಕೈಗೊಳ್ಳುತ್ತಾರೆ ಬೆಟ್ಟದ ನೆರೆಯಲ್ಲಿ ಕೆಳಗೆ ಅರುಣಾಚಲೇಶ್ವರನ ಗುಡಿಯಿದೆ ಇಷ್ಟು ವಿಶಾಲವಾದ ಗುಡಿ ದಕ್ಷಿಣಭಾರತದಲ್ಲೇ ಬೇರೊಂದಿಲ್ಲ ಪಂಚಭೂತಗಳನ್ನು ಪ್ರತಿನಿಧಿಸುವ ಶಿವಲಿಂಗಗಳಲ್ಲಿ ಇಲ್ಲಿರುವುದು ಜ್ಯೋತಿರ್ಲಿಂಗ ಪಾರ್ವತಿಯು ತಪಸ್ಸುಮಾಡಿ ಶಿವನ ವಾಮಾರ್ಧಭಾಗವನ್ನು ಪಡೆದುಕೊಂಡಳೆಂದು ಸ್ಥಳಪುರಾಣ ಹೇಳುತ್ತದೆ ಪುರಂದರದಾಸರು ತಮ್ಮ ಪದದಲ್ಲಿ ಇದನ್ನು ಪಾರ್ವತೀಪುರವೆಂದು ಕರೆದಿರುವುದು ಇದೇ ಕಾರಣಕ್ಕೆ ಈ ದೇವಾಲಯದ ಉತ್ತುಂಗಗೋಪುರ (ಹನ್ನೊಂದು ಮಜಲುಗಳದ್ದು) ಭವ್ಯವಾಗಿದೆ ಇದರ ನಿರ್ಮಾಣವು ವಿಜಯನಗರದ ಅರಸ ಕೃಷ್ಣದೇವರಾಯನ ಕಾಲದಲ್ಲಿ ಎಂದರೆ 1516ರ ಸುಮಾರಿಗೆ, ಆರಂಭವಾಗಿ ತಂಜಾವೂರಿನ ದೊರೆ ಶೆವ್ವಪ್ಪನಾಯಕನ ಕಾಲದಲ್ಲಿ 1535ರಲ್ಲಿ, ಮುಗಿಯಿತು ವಿಜಯನಗರದ ಅರಸರು ಈ ದೇವಾಲಯವನ್ನು ಆದರದಿಂದ ಕಾಣುತ್ತಿದ್ದರು



ಜ್ಯೋತಿರ್ಲಿಂಗ ದೇವಾಲಯ, ಅರುಣಗಿರಿ

## ೭೮

ಮುಖಾರಿ　　　　　　　　　　　　　　ಆದಿ

ಕರುಣಾನಿಧಿಯೆ ಈಶ ಅರುಣಗಿರಿಯವಾಸ　　　ಪ

ಮುರನ ವೈರಿಯ ಚರಣದಾಸ
ಅರುಣ ರವಿಯ ಕೋಟಿಪ್ರಕಾಶ　　　ಅ

ಭಸ್ಮ ಧೂಳಿತ ಸರ್ವಾಂಗ ಮತ್ತೆ ತಲೆಯೊಳಿಟ್ಟ ಗಂಗಾ
ವಸ್ತ್ರರಹಿತ ದಿಗಂಬರ ಲಿಂಗ
ಕಸ್ತೂರಿ ರಂಗನ ಸ್ನೇಹದ ಭೃಂಗ　　　೧

ಮತ್ತೆ ತ್ರಿಪುರ ಸಂಹಾರಿ ಚಿತ್ತಜನಯ್ಯನ ಸೇರಿ
ಹಸ್ತದಲಿ ಶೂಲ ಕಪಾಲಧಾರಿ
ಕರ್ತ ಶ್ರೀಹರಿಗೆ ನಿಜವ ತೋರಿ　　　೨

ನಂದಿಗ ನರನ ಬಾಪ್ಪ ಚಂದ್ರನು ಶಿರದೊಳಿಪ್ಪ
ಇಂದ್ರನ ತೀರ್ಥ ದಡದಲ್ಲಿಪ್ಪ
ಎಂದೆಂದಿಗು ನಮ್ಮ ಪಾಲಿಸುತಿಪ್ಪ　　　೩

ಬೇಡಿದ ವರಗಳನೀವ ಮತ್ತೆ ಬೇಡಿದ ಭಕ್ತರ ಕಾವ
ಜಡೆಯ ಮರಳೆ ಶಿರಳು ಭಾವ
ಕೊಂಡಾಡುವರೊಳಗಲ್ಲಿ ನಿನ್ನದು ಶಿವ　　　೪

ಪಾರ್ವತಿಪುರದ ನಾಥ ಕರುಣಿಸು ಸಂತತ ದಾತ
ನಾರದ ಪ್ರಿಯ ಪ್ರಖ್ಯಾತ
ಪುರಂದರವಿಠಲನ ದೂತ　　　೫

ಮುರನ ವೈರಿ—ವಿಷ್ಣು
ಚಿತ್ತಜನಯ್ಯನ ಸೇರಿ—ಶಿವನು ತ್ರಿಪುರವನ್ನು (ತಾರಕಾಸುರನ ಮಕ್ಕಳಾದ ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ ಇವರ ಪುರಗಳನ್ನು) ನಿಗ್ರಹಿಸಲು ವಿಷ್ಣುವಿನ (ಚಿತ್ತಜನೆಂದರೆ ಮನ್ಮಥ, ಅವನ ತಂದೆ) ನೆರವನ್ನು ಪಡೆದುಕೊಂಡದ್ದು ಇಲ್ಲಿನ ಸಂದರ್ಭ

ಕರ್ತುರ್—ಕರ್ತೃ

ನಿಜವ—ತನ್ನ ಸ್ವರೂಪವನ್ನು

ನಂದಿಗೆ —ಆರ್ದವಾಗುವುದಿಲ್ಲ

ಇಂದ್ರನ ತೀರ್ಥ— ಇಲ್ಲಿನ ಪುಷ್ಕರಿಣಿಗೆ ಇಂದ್ರ ತೀರ್ದವೆಂಬ ಹೆಸರಿದೆ

ಮರಳ ಶಿರಳು—ಗಂಗೆಯು , ನದಿಯ ದಡದಲ್ಲಿ ಮರಳಿರುವುದು ಇಲ್ಲಿನ ಸಂದರ್ಭ ಗಂಗೆಗೆ ಪುಲಿನವತೀ ಎಂದು ಹೆಸರಿದೆ



# ಅಹೋಬಲ

ಆಂಧ್ರಪ್ರದೇಶದ ಕರ್ನೂಲು ಜಿಲ್ಲೆಯಲ್ಲಿ, ಶಿರಿವೇಲು ತಾಲ್ಲೂಕಿಗೆ ಸೇರಿದಂತೆ, ನಂದ್ಯಾಲದಿಂದ ಮೂವತ್ತು ಮೈಲು ದೂರದಲ್ಲಿರುವ ನಲ್ಲಮಲೈಕೊಂಡ ಎಂಬ ಬೆಟ್ಟದ ಮೇಲೆ ಅಹೋಬಲ ಸ್ವಾಮಿಯ ಗುಡಿಯಿದೆ ಶ್ರೀ ವೈಷ್ಣವರ ನೂರೆಂಟು ತಿರುಪತಿಗಳಲ್ಲಿ ಇದೊಂದು, ಮುಖ್ಯವಾದುದು ಇದಕ್ಕೆ ಮೊದಲು ಸಿಂಗವೇಲ್ ಕುನ್ರಂ ಎಂಬ ಹೆಸರಿದ್ದಿತು ಬೆಟ್ಟದ ಮೇಲಿರುವ ಗುಡಿಯಲ್ಲಿ ಉಗ್ರನರಸಿಂಹನ ಸ್ವಯಂಭುಮೂರ್ತಿಯಿದೆ, ಇದನ್ನೇ ಅಹೋಬಲವೆಂದು ಕರೆಯುವುದು ಇಲ್ಲಿರುವ 'ಉಕ್ಕು ಸ್ತಂಭಂ' ಎನ್ನುವ ಕಂಬದಿಂದಲೇ ನರಸಿಂಹ ಹೊರಹೊರಟುಬಂದುದಂತೆ ಈ ಕ್ಷೇತ್ರವು ಪುರಾಣಕಾಲದಲ್ಲಿ ಹಿರಣ್ಯಕಶಿಪುವಿನ ರಾಜಧಾನಿಯಾಗಿದ್ದಿತಂತೆ ಬೆಟ್ಟದ ಕೆಳಗಡೆ 'ಚಿನ್ನ ಅಹೋಬಲ'ವೆಂಬಲ್ಲಿ ಲಕ್ಷ್ಮೀನರಸಿಂಹನ ಗುಡಿಯಿದೆ ಇಲ್ಲಿನ ದೇವರನ್ನು ಪ್ರಹ್ಲಾದವರದರೆಂದು ಕರೆಯುತ್ತಾರೆ ಹತ್ತಿರ ಇರುವ ಜ್ವಾಲಾ ಎಂಬ ಬೆಟ್ಟದ ಮೇಲೇ ನರಸಿಂಹನು ಹಿರಣ್ಯಕಶಿಪುವನ್ನು ಹಿಡಿದುಕೊಂಡದ್ದಂತೆ ಈ ಬೆಟ್ಟದಿಂದ ಭವನಾಶಿನಿಯೆಂಬ ನದಿ ಹರಿಯುತ್ತದೆ ಈ ಕ್ಷೇತ್ರವು ನವನಾರಸಿಂಹಕ್ಷೇತ್ರವೆಂದು ಪ್ರತೀತಿ, ಜ್ವಾಲಾನಾರಸಿಂಹ, ಅಹೋಬಲ ನಾರಸಿಂಹ, ಮಾಲೋಲ ನಾರಸಿಂಹ, ಕ್ರೋಡಾಕಾರ ನಾರಸಿಂಹ, ಕಾರಂಜ ನಾರಸಿಂಹ, ಭಾರ್ಗವ ನಾರಸಿಂಹ, ಯೋಗಾನಾರಸಿಂಹ ಛತ್ರವಟ ನಾರಸಿಂಹ, ಪಾವನ ನಾರಸಿಂಹ ಈ ಒಂಬತ್ತು ರೂಪಗಳನ್ನು ನವನಾರಸಿಂಹರೆಂದು ವ್ಯವಹರಿಸುತ್ತಾರೆ ಈ ಮೂರ್ತಿಗಳಿರುವ ಸ್ಥಳಗಳೆಲ್ಲ ಅಹೋಬಲದ ನೆರೆಯಲ್ಲಿಯೇ ಇವೆ ಅಹೋಬಲದಲ್ಲಿ ಫಾಲ್ಗುಣ ಮಾಸದಲ್ಲಿ ನಡೆಯುವ ಬ್ರಹ್ಮೋತ್ಸವ ಪ್ರಸಿದ್ಧವಾದುದು

ಸೌರಾಷ್ಟ್ರ ತ್ರಿಪುಟೆ

ಶರಣು ಶರಣು ಶರಣ್ಯ ವಂದಿತ ಶಂಖಚಕ್ರ ಗದಾಧರ ಪ

ಶರಣು ಸರ್ವೇಶ್ವರಗೆ ಅಹೋಬಲಗಿರಿಯ ನೃಸಿಂಹಮೂರ್ತಿಗೆ ಅ

ಕಂಬದಲಿ ಶಿಶು ನಿಮ್ಮ ಕರೆಯಲು
ಕಾಲಿರೊದ್ದತಿ ಖಳನನು
ಲೀಲೆಯಿಂದಲಿ ಚಿಟಿಲು ಛುಗಿಛುಗಿ
ಉರಿ ಉಕ್ಕಿನ ಕಂಬದಿ
ತಾಳದಿರ್ಗಡಿ ತೋಳಿನಿಂದೆದ
ಸೀಳಿ ಹೊಟ್ಟೆಯ ಕರುಳನು
ಮಾಲೆಯನು ಕೊರಳೊಳಗೆ ಧರಿಸಿದ
ಜ್ವಾಲ ನರಸಿಂಹಮೂರ್ತಿಗೆ — ಕರಾಳ ನರಸಿಂಹಮೂರ್ತಿಗೆ ೧

ಮೋರೆ ಕೆಂಗೆರೆ ಕಣ್ಣು ಕಿವಿ
ತೆರೆ ಬಾಯಿ ಮೂಗಿನ ಶ್ವಾಸದಿ
ಮೇರುವಿಗೆ ಮಿಗಿಲೆನಿಸಿ ಮೊರೆಯುತ
ತೋರ ಕಿಡಿಗಳ ಸೂಸುತ
ಸಾರಿಸಾರಿಗೆ ಹೃದಯ ರಕುತವ
ಘೀರು ಘೀರನೆ ಹೀರುತ
ಧೀರತನದ ಉಪೇಂದ್ರ ಮೆರೆಯುವ
ವೀರ ನರಸಿಂಹಮೂರ್ತಿಗೆ—ಕರಾಳ ನರಸಿಂಹಮೂರ್ತಿಗ ೨

ಖಳನು ಖಿಲಿಖಿಲಿಲೆಂದು ಕೂಗಲು
ಕೋಟಿ ಸಿಡಿಲಿನ ರಭಸದಿ
ಖಲವು ಗುಳುಗುಳು ಗುಳನೆ ಉಕ್ಕಲು ಜರಿದು ಕುಲಗಿರಿ ಉರುಳಲು
ನೆಲನು ಫಳಫಳ ಫಳನೆ ಒಡೆಯಲು
ನಲುಗಿ ದಿಗ್ದೆಸೆ ಬೆದರಲು
ಧಳನು ಧಳಧಳ ಧಳನೆ ಹೊಳೆಯುವ
ಚೆಲುವ ಕೋರೆಯ ಮೂರ್ತಿಗೆ—ದಿವ್ಯ ಕುಲಿಶ ಕೋರೆಯ ಮೂರ್ತಿಗೆ ೩

ವರವ ಬೇಡೆನೆ ಇರುವ ತಂದೆಯು
ಪರಿಯನೆಲ್ಲವ ಕಂಡಿರೆ
ನಿರುತದಲಿ ನಿಮ್ಮೆರಡು ತೊಡೆಯಲಿ
ಶರೀರ ಬಿಡಲೆಂದೆನುತಿರೆ
ಕರುಣಿ ಕರುಣಿಸು ಕರುಣಿಸೆನಲಾಗ
ಕರದ ಅಭಯುವನಿತ್ತಗೆ
ಸ್ಥಿರದಿ ಸಾಮ್ರಾಜ್ಯವನು ಆಳಿದ
ಗಿರಿಯ ನಾಮದ ಮೂರ್ತಿಗೆ—ನರಸಿಂಹ ನಾಮದ ಮೂರ್ತಿಗೆ ೬

ಹರನು ವಾರಿಜಭವನು ಕರಯುಗ
ಮೆರಗಿ ಜಯ ಜಯವೆನುತಿರೆ
ತರಳ ಪ್ರಹ್ಲಾದನು, ತಾನಾಗ
ಶಿರವ ಬಾಗಿ ಪೊಗಳಲು
ಸುರರು ಪೂಮಳೆ ಗರೆಯೆ ಹರುಷದಿ
ನರಸಿಜಾಕ್ಷನು ಶಾಂತದಿ
ಸಿರಿಯು ಸಹಿತದಿ ಮೆರೆದ ಅಹೋಬಲ
ವರದ ಪುರಂದರವಿಠಲಗೆ—ನಮ್ಮ ಕರುಣಿ ಪುರಂದರವಿಠಲಗೆ ೭

**ಶಿಶು—ಪ್ರಹ್ಲಾದನು**
ಖಳನನು—ಪ್ರಹ್ಲಾದನ ತಂದೆಯಾದ ಹಿರಣ್ಯಕಶಿಪುವನ್ನು
ಖಲನು—ರಾಕ್ಷಸನು
ಖಿಲವು—ಔಷಧ ದ್ರವ್ಯಗಳನ್ನು ಸೇರಿಸಿ ಕುದಿಯಲೆಂದು ಇರಿಸಿದ ನೀರು
ಕುಲಗಿರಿ—ಕುಲಾಚಲ, ನೀಲ, ನಿಷಧ, ವಿಂಧ್ಯ, ಪಾರಿಯಾತ್ರ ಮೊದಲಾದ ಎತ್ತರದ ಬೆಟ್ಟಗಳು
ನೆಲನು—ನೆಲವು
ದಿಗ್ದೆಸೆ—ಎಂಟು ದಿಕ್ಕುಗಳು ಇರುವ ಪ್ರದೇಶಗಳು, ಎಂದರೆ ಸುತ್ತಲೂ
ಕೋರೆ—ಕೋರ (ಘೋರ), ಕಣ್ಣು ಕೋರೈಸುವ.

ದಿವ್ಯಕುಲಿಶ ಕೋರೆ—ಪರ್ವತಗಳನ್ನೂ ಸೀಳಬಲ್ಲ ವಜ್ರಾಯುಧ (ಇಂದ್ರನದು), ಕುಲಿಶ , ಅದರಂತೆ ಹರಿತವಾಗಿ ಇರುವ ಕೋರೆದಾಡೆಗಳುಳ್ಳ

ಹರನು ವಾರಿಜಭವನು—ಶಿವನೂ, ಬ್ರಹ್ಮನೂ

ಸಿರಿಯು ಸಹಿತದಿ ಮೆರೆದ—ಲಕ್ಷ್ಮೀನರಸಿಂಹಮೂರ್ತಿ , ಬೆಟ್ಟದ ಕೆಳಗಿರುವುದು , ಪ್ರಹ್ಲಾದವರದ



ನಟ್ಟ ತ್ರಿಪುಟೆ

ಮಹದಾದಿದೇವ ನಮೋ ಪ

ಮಹದಾದಿದೇವ ನಮೋ
ಮಹಾಮಹಿಮನೆ ನಮೋ
ಪ್ರಲ್ಹಾದವರದ ಅಹೋಬಲ ನಾರಸಿಂಹ ಅ

ಧರಣಿಗುಬ್ಬಸವಾಗೆ ತಾರಾಪಥವು ನಡುಗೆ
ಸುರರು ಕಂಗೆಟ್ಟೋಡೆ ನಭವ ಬಿಟ್ಟು
ತರುಗಿರಿಗಳೆಲ್ಲಾಡೆ ಶರಧಿಗಳು ಕುದಿದುಕ್ಕಿ
ಉರಿಯನುಗುಳುತ ಉದ್ಭವಿಸಿದೆ ನರಸಿಂಹ ೧

ಸಿಡಿಲಿನಂತೆ ಗರ್ಜಿಸುತ ಕುಡಿಯನಾಲಗೆ ಚಾಚಿ
ಅಡಿಗಡಿಗೆ ಲಂಘಿಸುತ ಕಡುಕೋಪದಿಂದ
ಮುಡಿ ಪಿಡಿದು ರಕ್ಕಸನ ಕೆಡಹಿ ನಖದಿಂದೊತ್ತಿ
ಕಡು ಉದರ ಬಗಿವೆ ಕಡುಗಲಿ ನಾರಸಿಂಹ ೨

ಸರಸಿಜೋದ್ಭವ ಹರ ಪುರಂದರಾದಿ ಸಮಸ್ತ
ಸುರರು ಅಂಬರದಿ ಪೂಮಳೆಯ ಕರೆಯೆ
ಸಿರಿಸಹಿತ ಗರುಡಾದ್ರಿಯಲಿ ನಿಂತು ಭಕುತನ
ಕರುಣಿಸಿದೆ ಪುರಂದರ ವಿಠಲ ನರಸಿಂಹ ೩

ಧರಣಿಗುಬ್ಬಸವಾಗೆ—ಭೂಮಿಯು ಉಬ್ಬಸ ಬಂದಂತೆ ತಲ್ಲಣಿಸಲು
ತಾರಾಪಥವು—ನಕ್ಷತ್ರಗಳು ಕೂಡಿಕೊಂಡಿರುವ ಆಕಾಶಗಂಗೆ
ನಭವ—ಆಕಾಶವನ್ನು

ಕ್ಲಿಷ್ಟಪದ—

ತರು ಗಿರಿಗಳು—ಮರಗಳು, ಬೆಟ್ಟಗಳು

ಶರಧಿಗಳು—ಸಮುದ್ರಗಳು

ಲಂಘಿಸುತ—ಹಾರಿ ಕುಪ್ಪಳಿಸುತ್ತ

ಮುಡಿ ಪಿಡಿದು—ರಾಕ್ಷಸನ ತಲೆಗೂದಲನ್ನು ಹಿಡಿದು

ಸರಸಿಜೋದ್ಭವ ಹರ ಪುರಂದರಾದಿ—ಬ್ರಹ್ಮ, ಶಿವ ಇಂದ್ರ ಮೊದಲಾದ



# ಉಡುಪಿ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಪ್ತಕ್ಷೇತ್ರಗಳೆಂಬ ವ್ಯವಹಾರವಿದೆ ರಜತಪುರ (ಉಡುಪಿ) ಕುಮಾರಾದ್ರಿ (ಸುಬ್ರಹ್ಮಣ್ಯ) ಕುಂಭಾಸಿ ಕೋಟೇಶ್ವರ ಕ್ರೋಡ (ಶಂಕರನಾರಾಯಣ), ಕೊಲ್ಲೂರು (ಮೂಕಾಂಬಿಕಾ) ಮತ್ತು ಗೋಕರ್ಣ ಈ ಸಪ್ತಕ್ಷೇತ್ರಗಳಲ್ಲಿ ಉಡುಪಿಗೇ ಅಗ್ರಸ್ಥಾನ ಮೊದಲಿಗೆ ಶಿವಳ್ಳಿ (ಶಿವಬೆಳ್ಳಿ ಸಂಸ್ಕೃತದ ರೂಪವಾಗಿ ರಜತಪುರ ಅಥವಾ ರೌಪ್ಯಪೀಠ) ಎಂಬ ಗ್ರಾಮದ ಭಾಗವಾಗಿ 'ಉಡುಪು' (ಈಗಿನ ಅನಂತೇಶ್ವರನ ಗುಡಿ ಮತ್ತು ಕೃಷ್ಣಮಠಗಳು ಸೇರಿದ ಸ್ಥಳ) ಇದ್ದಿತು ಅದೇ ಉಡುಪಿಯಾಗಿದೆ ಕ್ಷೇತ್ರದ ಪಾವಿತ್ರ್ಯ ಮೊದಲಿಗೆ ಅನಂತೇಶ್ವರನ ಗುಡಿಯಿಂದಲೇ ಇಲ್ಲಿಂದ ಈಶಾನ್ಯ ದಿಕ್ಕಿಗೆ ಮುಂದೆ ಮೂಡಿಕೊಂಡ ಕೃಷ್ಣನ ದೇಗುಲ ಬರುಬರುತ್ತ ಹೆಚ್ಚು ಪ್ರಾಶಸ್ತ್ಯವನ್ನು ಪಡೆಯಿತು ಇಲ್ಲಿಯೇ ಹುಟ್ಟಿ ಬೆಳೆದ ಮಧ್ವಾಚಾರ್ಯರು ಇಲ್ಲಿಯ ಕೃಷ್ಣ ವಿಗ್ರಹವನ್ನು ಪ್ರತಿಷ್ಠೆ ಮಾಡಿದರೆಂದು ಪ್ರತೀತಿ ಮಧ್ವಾಚಾರ್ಯರು ದ್ವೈತವೇದಾಂತದ ಪ್ರಚಾರಕರಾಗಿ ನಾಡಿನಲ್ಲೆಲ್ಲ ಪ್ರಸಿದ್ಧರಾದಂದು ಉಡುಪಿಯ ಹೆಗ್ಗಳಿಕೆ ಹೆಚ್ಚಿತು ಗುಡಿಗೆ ಹೊಂದಿಕೊಂಡಿರುವ ಕೊಳ ಮಧ್ವಸರೋವರವೆಂದೇ ಹೆಸರಾಗಿದೆ ಇಲ್ಲಿ ವರ್ಷವರ್ಷವೂ ನಡೆಯುವ ಲಕ್ಷದೀಪೋತ್ಸವ ಮಕರ ಸಂಕ್ರಮಣೋತ್ಸವ, ಎರಡು ವರ್ಷಗಳಿಗೊಮ್ಮೆ ನಡೆಯುವ ಪರ್ಯಾಯೋತ್ಸವ ಇವು ಬಹು ವೈಭವದಿಂದ ಕೂಡಿದವು ಇಲ್ಲಿಂದ ಮೂರು ಮೈಲು ದೂರದಲ್ಲಿ, ಅರಬ್ಬೀ ಸಮುದ್ರತೀರದಲ್ಲಿ ವಡಭಾಂಡೇಶ್ವರ (ಬಲರಾಮ)ನ ಗುಡಿಯೊಂದಿದೆ ಉಡುಪಿಯ ಕೃಷ್ಣ ಹರಿದಾಸರಿಗೆ ಅಚ್ಚುಮೆಚ್ಚಿನ ದೇವರು, ದಾಸಕೂಟದವರಿಗೆ ಉಡುಪಿ, ಪಂಢರಪುರ, ತಿರುಪತಿ ಇವು ಮೂರೂ ಅತ್ಯಂತ ಆದರಣೀಯ ಕ್ಷೇತ್ರಗಳು ಉಡುಪಿಯು ದಾಸರಿಗೆ ಪ್ರಿಯವಾದುದು ವಾದಿರಾಜಸ್ವಾಮಿಗಳ ಕಾಲದಿಂದ ಎಂದು ತೋರುತ್ತದೆ ಸೋದೆಮಠದ ವಾದಿರಾಜಸ್ವಾಮಿಗಳು ವ್ಯಾಸತೀರ್ಥರ ಶಿಷ್ಯರು, ಪುರಂದರದಾಸರ ಸತೀರ್ಥರು





ಉಡುಪಿ ಶ್ರೀಕೃಷ್ಣ

## ೭೦

ರೇಗುಪ್ತಿ — ಅಟ್ಟ

ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ
ಫುಲ್ಲನಾಭ ನೀನಿದ್ದಲ್ಲಿ ಸೇರಿಸೆನ್ನ ಪ

ಮರಣವನೊಲ್ಲೆ ಜನನವನೊಲ್ಲೆ
ದುರಿತ ಸಂಸಾರ ಕೋಟಲೆಯ ನಾನೊಲ್ಲೆ
ಕರುಣಾದಿ ಕರುಗಳ ಕಾಯ್ದ ಗೋವಳ ನಿನ್ನ
ಚರಣ ಕಮಲದ ಸ್ಮರಣೆಯೊಳಿರಿಸೆನ್ನ ೧

ಬೆಂದ ಸಂಸಾರವೆಂಬೊ ಬೇಗೆ ಮಧ್ಯದಲ್ಲಿ
ನೊಂದೆನೊ ನಾ ಬಹಳ ಕರೆಕರೆಯಲ್ಲಿ
ನಂದಗೋಪನ ಕಂದ ವೃಂದಾವನ ಪ್ರಿಯ
ಎಂದೆಂದೂ ನಿನ್ನ ಸ್ಮರಣೆಯೊಳಿರಿಸೆನ್ನ ೨

ಪುತ್ರ ಮಿತ್ರ ಕಳತ್ರ ಬಂಧುಗಳೆಂಬ
ಕತ್ತಲೆಯೊಳು ಸಿಲುಕಿ ಕಡುನೊಂದನಲ್ಲಿ
ಮುಕ್ತಿದಾಯಕ ಉಡುಪಿಯ ಕೃಷ್ಣರಾಯ
ಭಕ್ತವತ್ಸಲ ಶ್ರೀ ಪುರಂದರವಿಠಲ ೩

ಫುಲ್ಲನಾಭ—ತಾವರೆಯ ಹೂವೇ ಹೊಕ್ಕುಳಾಗಿ ಉಳ್ಳವನು, ವಿಷ್ಣು
ಕತ್ತಲೆಯೊಳು—ಮಮಕಾರ ಮೋಹದಲ್ಲಿ

ಶಹನ ಆದಿ

ಎಂಥಾ ಬಲವಂತನೊ ಕುಂತಿಯ ಸುಜಾತನೊ ಪ

ಭಾರತಿಗೆ ಕಾಂತನೊ ನಿತ್ಯ ಶ್ರೀವಂತನೊ ಅ

ರಾಮಚಂದ್ರನ ಪ್ರಾಣನೊ ಅಸುರ ಹೃದಯ ಬಾಣನೊ
ಖಳರ ಗಂಟಲ ಗಾಣನೊ ಜಗದೊಳಗೆ ಪ್ರವೀಣನೊ ೧

ಕುಂತಿಯ ಕಂದನೊ ಸೌಗಂಧಿಕವ ತಂದನೊ
ಕುರುಕ್ಷೇತ್ರಕೆ ಬಂದನೊ ಕೌರವರ ಕೊಂದನೊ ೨

ಭಂಡಿ ಅನ್ನವನುಂಡನೊ ಬಕನ ಪ್ರಾಣವ ಕೊಂಡನೊ
ಭೀಮ ಪ್ರಚಂಡನೊ ದ್ರೌಪದಿಗ ಗಂಡನೊ ೩

ವೈಷ್ಣವಾಗ್ರಗಣ್ಯನೊ ಸಂಚಿತಾಗ್ರ ಪುಣ್ಯನೊ
ದೇವವರೇಣ್ಯನೊ ದೇವಶರಣ್ಯನೊ ೪

ಮಧ್ವಶಾಸ್ತ್ರವ ರಚಿಸಿದನೊ ಸರ್ವ್ವೈಷ್ಣವರ ಸಲಹಿದನೊ
ಉಡುಪಿಕೃಷ್ಣನ ನಿಲಿಸಿದನೊ ಪುರಂದರವಿಠಲನ ಒಲಿಸಿದನೊ ೫

ಸೌಗಂಧಿಕವ—ತುಂಬ ಸುವಾಸನೆಯುಳ್ಳ ಹೂವು, ದ್ರೌಪದಿಯು ಅದನ್ನು ಬಯಸಿದಾಗ ಭೀಮನು ಅದನ್ನು ಗಂಧಮಾದನಪರ್ವತದಿಂದ ತಂದುಕೊಟ್ಟ ಕಥೆಯಿದೆ

ಕುರುಕ್ಷೇತ್ರಕೆ—ಯುದ್ಧಭೂಮಿಗೆ

ಭಂಡಿ ಅನ್ನವನುಂಡನೊ—ಏಕಚಕ್ರಪುರದಲ್ಲಿ ಪಾಂಡವರು ಅಜ್ಞಾತವಾಸಮಾಡುವಾಗ ಭೀಮನು ಬಕಾಸುರನನ್ನು ಕೊಂದ ಸಂದರ್ಭದಲ್ಲಿ ಬಕಾಸುರನಿಗಾಗಿ ಗ್ರಾಮದವರು ಕಳುಹಿಸಿದ್ದ ಒಂದು ಬಂಡಿ ತುಂಬ ಅನ್ನವನ್ನು ಭೀಮನು ತಿಂದದ್ದು ಅದರಿಂದ ಬಕಾಸುರನು ಸಿಟ್ಟಿಗೆದ್ದದ್ದು ಇಲ್ಲಿನ ಕಥೆ

ಮಧ್ವಶಾಸ್ತ್ರವ ರಚಿಸಿದನೋ — ಮಧ್ವಾಚಾರ್ಯರಾಗಿ ಅವತರಿಸಿ , ಹನುಮ-ಭೀಮ-ಮಧ್ವ ಎಂಬ ಅವತಾರತ್ರಯದ ಕಲ್ಪನೆ ಹಿನ್ನೆಲೆಯಲ್ಲಿದೆ

ಉಡುಪಿ ಕೃಷ್ಣನ ನಿಲಿಸಿದನೋ—ಹಡಗಿನಲ್ಲಿ ಭಾರಕ್ಕೆಂದು ಹೊತ್ತು ತರುತ್ತಿದ್ದ ಗೋಪೀಚಂದನ ಗಡ್ಡೆಯೊಂದರಲ್ಲಿ ಕೃಷ್ಣನ ಶಾಲಿಗ್ರಾಮ ಶಿಲಾಮೂರ್ತಿಯನ್ನು ಮಧ್ವಾಚಾರ್ಯರು ಪಡೆದುಕೊಂಡು ಸಮುದ್ರ ತೀರದಿಂದ ತಾವೇ ಅದನ್ನು ಮೂರುಮೈಲು ಹೊತ್ತುತಂದು ಉಡುಪು ಎಂಬಲ್ಲಿ, ಅನಂತೇಶ್ವರನ ಗುಡಿಯ ಒಳಿ, ಇದನ್ನು ಪ್ರತಿಷ್ಠೆ ಮಾಡಿದರೆಂದು ಉಡುಪಿಯ ಸ್ಥಳಪುರಾಣ



ಹಿಂದೂಸ್ತಾನಿ ಕಾಪಿ — ಆದಿ

ನಗುವರಲ್ಲೋ ರಂಗಯ್ಯ ನಿನ್ನಾಟವ ಕಂಡು — ಪ

ಹಗರಣವಾಗಿದೆ ಎನಗೆ ನಿಗಮಗೋಚರನೆ — ಅ

ನಿಗಮವನ್ನು ತರಲು ಮತ್ಸ್ಯಾಕೃತಿಯ ತಾಳಿದ
ನಗವನೆತ್ತಿ ಕೂರ್ಮನೆಂಬ ಹೆಸರ ಧರಿಸಿದೆ
ಜಗತಿಯನ್ನು ತರಲು ವರಾಹಮೂರ್ತಿಯೆನಿಸಿದೆ
ಮಗುವಿಗಾಗಿ ಘೋರಾಕೃತಿ ನರಮೃಗನೆನಿಸಿದೆ — ೧

ಹೆಡೆಮುಡಿ ಕಟ್ಟಿ, ದಾನವ ಕೊಟ್ಟ ಬಲಿಯ ಬಂಗಿಸಿದೆ
ಪಡೆದ ತಾಯ ಶಿರವ ಕಡಿದು ನ್ಯಾಯನೆನಿಸಿದೆ
ಮಡದಿಗಾಗಿ ಮರ್ಕಟರ ಹಿಂಡ ಕೂಡಿಸಿದೆ
ಕಡಲ ಕಟ್ಟಿ ಕಪಿಗಳಿಂದ ದುರವ ಜೈಸಿದೆ — ೨

ಅಷ್ಟಮಿಯೊಳರ್ಧರಾತ್ರಿ ವೇಳೆ ಜನಿಸಿದೆ
ದುಷ್ಟ ಕಂಸನು ಹಾಕಿದ ಸೆರೆಯ ಬಾಗಿಲ ತೆಗೆಸಿದೆ
ಥಟ್ಟನೆ ಗೋಕುಲದಲ್ಲಿ ಬಂದು ನೆಲೆಸಿದೆ
ಸೃಷ್ಟಿಸಿ ಚಂಡಿಕೆಯ ಖಳನ ಮುಂದೆ ನಿಲಿಸಿದೆ — ೩

ಬಣ್ಣಿಸಿ ಮಕ್ಕಳ ಕರೆದು ಬೆಣ್ಣೆಯುಣಿಸಿದೆ
ಚಿಣ್ಣಿಕೋಲು ಚೆಂಡು ಬುಗುರಿ ಗಜ್ಜುಗವಾಡಿದೆ
ಕಣ್ಣ ಸನ್ನೆ ಮಾಡಿ ಅವರ ಕಾಕು ಮಾಡಿದೆ
ಮಣ್ಣ ತಿಂದು ಬಾಯೊಳು ಬ್ರಹ್ಮಾಂಡ ತೋರಿದೆ — ೪

ಗೊಲ್ಲರ ಮನೆಗೆ ನೀನು ಮೆಲ್ಲಗೆ ಪೋಗಿ
ಚೆಲ್ಲಿ ಪಾಲು ಮೊಸರು ಬೆಣ್ಣೆ ಸೂರೆ ಮಾಡಿದೆ
ವಲ್ಲಭೆಯರ ಕೂಡೆ ನೀನು ಸರಸವಾಡಿದೆ
ಮೊಲ್ಲೆ ಮಲ್ಲಿಗೆ ಅರಳ ಮುಡಿಗೆ ಮುಡಿಸಿದೆ — ೫

ಬಾಲಕರ ಕೂಡೆ ಮೊಸರ ಭಾಂಡ ಒಡೆಸಿದೆ
ಹಾಲು ಮೊಸರು ಬೆಣ್ಣೆ ಕದ್ದು ಕಳ್ಳನೆನಿಸಿದೆ
ಬಾಲೆಯರ ವಸ್ತ್ರವ ಕೊಂಡು ಮರವನೇರಿದೆ
ಕಾಲಾಹಿವೇಣಿಯರೊಡಗೂಡಿ ರಮಿಸಿದೆ — ೬

ತುರುಗಳ ಹಿಂಡನು ನಡೆಸಿ ವನವ ಚರಿಸಿದ
ಪೊರದು ಮುದುಕಿ ಕುಬುಜೆಯುನ್ಮಾದವರದಿ ಕೂಡಿದೆ
ಕರುಣೆಯಿಷ್ಟಿಲ್ಲದೆ ಸೋದರಮಾವನ ಮಡುಹಿದೆ
ನರನ ರಥದ ಬೋವನಾಗಿ ಕುದುರ ನಡಸಿದೆ ೭

ತರುಣಿಯರ ವ್ರತವ ಕೆಡಿಸಿ ಬತ್ತಲ ನಿಲಿಸಿದ
ತುರಗವೇರಿ ಕಲ್ಕಿಯಾಗಿ ಖಡ್ಗ ಧರಿಸಿದ
ಗುರುಮಧ್ವರಾಯರಿಗೊಲಿದು ಉಡುಪಿಲಿ ನೆಲೆಸಿದ
ವರದ ಪುರಂದರವಿಠಲನೆ ನಮಗೆ ಗತಿಯಾದೆ ೮

[ಇದು ದಶಾವತಾರಗಳನ್ನು ವರ್ಣಿಸುವ ಪದ ಆದರೆ ಕೃಷ್ಣಾವತಾರವನ್ನೇ ಹೆಚ್ಚಾಗಿ ಹೇಳುತ್ತದೆ ]

ನಿಗಮ—ವೇದ (ಮತ್ಸ್ಯಾವತಾರ)
ನಗ—ಬೆಟ್ಟ, ಮಂದರಪರ್ವತ (ಕೂರ್ಮಾವತಾರ)
ಜಗತಿ—ಭೂದೇವಿ (ವರಾಹಾವತಾರ)
ಮಗು—ಪ್ರಹ್ಲಾದ (ನರಸಿಂಹಾವತಾರ)
ಪಡೆದ ತಾಯಿ—ರೇಣುಕೆ (ಜಮದಗ್ನಿಯ ಹೆಂಡತಿ) (ಪರಶುರಾಮಾವತಾರ)
ಮಡದಿಗಾಗಿ—ಸೀತೆಗಾಗಿ (ರಾಮಾವತಾರ).
ಮಣ್ಣು ತಿಂದು —ಕೃಷ್ಣನು ಮಣ್ಣು ತಿಂದನೆಂದು ಅಣ್ಣ ಬಲರಾಮನು ತಾಯಿಗೆ ದೂರಿದಾಗ, ತಾಯಿ ಕೃಷ್ಣನನ್ನು ಕರೆದು ಬಾಯಿತೆರೆಯೆಂದು ಗದರಿಸಲು, ಕೃಷ್ಣನು ತಾಯಿಗೆ ತನ್ನ ಬಾಯಲ್ಲಿ ಬ್ರಹ್ಮಾಂಡವನ್ನೇ ತೋರಿಸಿದ ಕಥೆ

[ ಕೃಷ್ಣೇನಾಂಬ ಗತೇನ ರಂತುಮಧುನಾ ಮೃದ್‌ಭಕ್ಷಿತಾ ಸ್ವೇಚ್ಛಯಾ ' ಎಂದು ಮೊದಲಾಗುವ ಶ್ಲೋಕ ಕೃಷ್ಣಕರ್ಣಾಮೃತದಿಂದ ]

ಬಾಲೆಯರ ವಸ್ತ್ರವ —ಗೋಪಿಕಾವಸ್ತ್ರಾಪಹರಣದ ಸಂದರ್ಭ
ಕಾಲಾಹಿ —ಕಾಳಿಂದೀಮಡುವಿನಲ್ಲಿ ಕಾಳಿಯನಾಗನನ್ನು ನಿಗ್ರಹಿಸಿದ ಸಂದರ್ಭ
ಸೋದರಮಾವನ —ಕಂಸನನ್ನು
ನರನ ರಥಕೆ —ಅರ್ಜುನನಿಗೆ ಸಾರಥಿಯಾದೆ
ತರುಣಿಯ ವ್ರತವ ಕೆಡಿಸಿ—ಬೌದ್ಧಾವತಾರ
ತುರಗವೇರಿ—ಕಲ್ಕ್ಯವತಾರ



ನಾದನಾಮಕ್ರಿಯ ಆದಿ

ಕೂಸಿನ ಕಂಡೀರಾ ಮುಖ್ಯ ಪ್ರಾಣನ ಕಂಡೀರಾ ಪ

ಬಾಲನ ಕಂಡೀರಾ ಬಲವಂತನ ಕಂಡೀರಾ ಅ

ಅಂಜನೆ ಉದರದಿ ಜನಿಸಿತು ಕೂಸು
ರಾಮರ ಪಾದಕ್ಕೆರಗಿತು ಕೂಸು
ಸೀತೆಗೆ ಉಂಗುರ ಕೊಟ್ಟಿತು ಕೂಸು
ಲಂಕಾಪುರವನು ಸುಟ್ಟಿತು ಕೂಸು ೧

ಭಂಡೀ ಅನ್ನವ ನುಂಗಿತು ಕೂಸು
ಬಕನ ಪ್ರಾಣವ ಕೊಂಡಿತು ಕೂಸು
ವಿಷದ ಲಡ್ಡುಗೆಯ ಮೆದ್ದಿತು ಕೂಸು
ಮಡದಿಗೆ ಪುಷ್ಪವ ಕೊಟ್ಟಿತು ಕೂಸು ೨

ಮಾಯ್ಯವೆಲ್ಲ ಗೆದ್ದಿತು ಕೂಸು
ಮಧ್ವ ಮತವನುದ್ಧರಿಸಿತು ಕೂಸು
ಪುರಂದರವಿಠಲನ ದಯದಿಂದ ಕೂಸು
ಸುಮ್ಮನೆ ಉಡುಪಿಲಿ ನಿಂತಿತು ಕೂಸು ೩

[ಹನುಮ–ಭೀಮ–ಮಧ್ವರೆಂಬ ಅವತಾರತ್ರಯವನ್ನು ಹೇಳುವ ಪದ ಮೊದಲನೆಯ ನುಡಿ ಹನುಮಂತನ ಚರಿತ್ರೆಯನ್ನೂ, ಎರಡನೆಯ ನುಡಿ ಭೀಮನ ವಿಚಾರವನ್ನೂ, ಮೂರನೆಯದು ಮಧ್ವಾಚಾರ್ಯರ ಸಾಧನೆಯನ್ನೂ ತಿಳಿಸುತ್ತವೆ.]

ಮುಖ್ಯಪ್ರಾಣ—ಹನುಮಂತ
ಮಡದಿಗೆ ಪುಷ್ಪವ—ಭೀಮನು ದ್ರೌಪದಿಗೆ ಸೌಗಂಧಿಕಪುಷ್ಪವನ್ನು ತಂದುಕೊಟ್ಟ ಕಥೆ
ಮಾಯವೆಲ್ಲ—ಮಾಯಾವಾದವೇ ಮೊದಲಾದ ಇಪ್ಪತ್ತೊಂದು ವಾದಗಳನ್ನೆಲ್ಲ
ಉಡುಪಿಲಿ ನಿಂತಿತು—ಕೃಷ್ಣನ ಗರ್ಭಗುಡಿಯ ಹೊರಗೆ, ಹನುಮಂತನ ಸನ್ನಿಧಿಯಿದೆ;
ಅಲ್ಲಿ ಅಂಜಲಿಬದ್ಧಮುದ್ರೆಯಲ್ಲಿ ಸ್ಥಾನಕಭಂಗಿಯಲ್ಲಿರುವ ಮೂರ್ತಿ

ಕಾಂಬೋದಿ ಆದಿ

ಕೃಷ್ಣಮೂರ್ತಿ ಕಣ್ಣಮುಂದ ನಿಂತಿದ್ದಂತಿದೆ ಪ

ಕಷ್ಟಗಳೆಲ್ಲವ ಪರಿಹರಿಸಿ ಮನ
ದಿಷ್ಟಾರ್ಥಗಳನೆಲ್ಲ ಕೊಟ್ಟು ರಕ್ಷಿಸುವಂದ ಅ

ಮಸ್ತಕದಲಿ ಮಾಣಿಕದ ಕಿರೀಟ
ಕಸ್ತೂರಿ ತಿಲಕದಿ ಹೊಳೆವ ಲಲಾಟ
ಶಿಸ್ತಿಲಿ ಕೊಳಲನೂದುವ ಓರೆನೋಟ
ಕೌಸ್ತುಭ ಎಡಬಲದಲ್ಲಿ ಓಲಾಟ ೧

ಮಘಮಘಿಸುವ ನೊಸಲಿನ ಸುಳಿಗುರುಳು
ಚಿಗುರು ತುಲಸಿ ವನಮಾಲೆಯು ಕೊರಳು
ಬಗೆಬಗೆ ಹೊನ್ನುಂಗುರವಿಟ್ಟ ಬೆರಳು
ಸೊಬಗಿನ ನಾಭಿಯು ತಾವರೆಯರಳು ೨

ಉಡುದಾರ ವಡ್ಯಾಣ ಸಕಲಾಭರಣ
ಬೆಡಗು ಪೀತಾಂಬರ ಶತರವಿ ಕಿರಣ
ಕಡಗ ಗಗ್ಗರ ಪೆಂಡೆಯನಿಟ್ಟ ಚರಣ
ಒಡೆಯ ಪುರಂದರವಿಠಲನ ಕರುಣ ೩

[ಈ ಪದದಲ್ಲಿ ಉಡುಪಿಯ ಉಲ್ಲೇಖವಿಲ್ಲದಿದ್ದರೂ, ಬಂದಿರುವ ವರ್ಣನೆ ಅಲ್ಲಿಯ ಕೃಷ್ಣನದೇ ಎಂಬುದರಲ್ಲಿ ಸಂಶಯವಿಲ್ಲ ಉತ್ಸವಸಂದರ್ಭದಲ್ಲಿ ಉಡುಪಿ ಕೃಷ್ಣನ ಮೂಲಮೂರ್ತಿಗೆ ವಿಶೇಷಾಲಂಕಾರಗಳನ್ನು ಮಾಡಿರುತ್ತಾರೆ , ಅದರ ವರ್ಣನೆಯೇ ಇದು ]

ಕಡಗ—ಕೈಬಳೆ
ಗಗ್ಗರಿ—ಕಾಲುಬಳೆ.
ಪೆಂಡೆ—ಗೆಜ್ಜೆಗಳು

ಘುರಪಿ ಅಟ್ಟ

ಮಂಗಳಂ ಜಯ ಮಂಗಳಂ ಪ

ಇಂದೀವರಾಕ್ಷಗೆ ಇಭರಾಜ ವರದಗೆ
ಇಂದಿರಾರಮಣ ಗೋವಿಂದ ಹರಿಗೆ
ನಂದನ ಕಂದಗೆ ನವನೀತ ಚೋರಗೆ
ವೃಂದಾರಕೇಂದ್ರ ಉಡುಪಿಯ ಕೃಷ್ಣಗ ೧

ಕ್ಷೀರಾಬ್ಧಿವಾಸಗೆ ಕ್ಷಿತಿಜನಪಾಲಗೆ
ಮಾರನ ಪಿತಗೆ ಮಂಗಳ ಮೂರ್ತಿಗೆ
ಚಾರು ಚರಣದಿಂದ ಜೆಲುವ ಗಂಗೆಯ ಪಡೆದ
ಕಾರುಣ್ಯಮೂರ್ತಿ ಕೌಸ್ತುಭಧಾರಿಗೆ ೨

ವ್ಯಾಸಾವತಾರಗೆ ವೇದ ಉದ್ಧಾರಗೆ
ವಾಸಿತಾನಂತಪದ ಸಕಲೇಶಗೆ
ವಾಸುದೇವಮೂರ್ತಿ ಪುರಂದರವಿಠ್ಠಲಗೆ
ದಾಸರ ಕಾಯ್ವ ರುಕ್ಮಿಣಿ ರಮಣಗೆ ೩

ಇಂದೀವರಾಕ್ಷ—ತಾವರೆಯಂತೆ ಕಣ್ಣುಳ್ಳವ
ಇಭರಾಜವರದ—ಮೊರೆಹೊಕ್ಕ ಆನೆಯನ್ನು ಕಾಪಾಡಿದವ (ಗಜೇಂದ್ರಮೋಕ್ಷ)
ವೃಂದಾರಕೇಂದ್ರ—ದೇವತೆಗಳ ಒಡೆಯ
ಕ್ಷೀರಾಬ್ಧಿವಾಸ—ಪಾಲ್ಗಡಲ ಮೇಲೆ ಮಲಗಿರುವವ
ಮಾರನ ಪಿತ—ಮನ್ಮಥನ ತಂದೆ.
ವಾಸಿತಾನಂತಪದ—ಕೊರೆಯಿಲ್ಲದ ವೈಕುಂಠದಲ್ಲಿ ಇರುವವ, ವಿಷ್ಣುವಿನ ಮೂರು
ನೆಲೆಗಳು, ವೈಕುಂಠ, ಶ್ವೇತದ್ವೀಪ ಮತ್ತು ಅನಂತಾಸನ ಎಂದೂ ಇದೆ

ನೀಲಾಂಬರಿ	ಅಟ್ಟ

ಕಂಡೆ ನಾ ಉಡುಪಿಯ ಕೃಷ್ಣರಾಯನ್ನ ಭೂ
ಮಂಡಲದೊಳಗೆ ಉದ್ದಂಡ ಮೋಹಿಪನ	ಪ

ಸಮುದ್ರವ ನಾ ಕಂಡು ಸ್ನಾನಾದಿಗಳಮಾಡಿ ಚಂ
ದ್ರಮೌಳೀಶ್ವರನ ಚರಣಕೆರಗಿ
ಆಮೇಲೆ ನಾ ಒಂದು ಅನಂತೇಶ್ವರನ್ನ ಕಂಡು ಹ
ನೂಮಂತನೆ ಪಾಡಿ ಮನದಿ ನಿಲಿಸಿ	೧

ಸುತ್ತು ನದಿಯು ಕಂಡೆ ಸೂರ್ಯನ ಪ್ರಭೆ ಕಂಡೆ ಅ
ಲ್ಲಿದ್ದ ಮಧ್ವಸರೋವರವ ಕಂಡೆ
ಮಧ್ವಮತದ ಅಷ್ಟಮುನಿಗಳ ಕಂಡೆ ಪ್ರ
ಸಿದ್ಧವಾಗಿರುವ ಶ್ರೀ ಉಡುಪಿಯ ಕೃಷ್ಣನ ಕಂಡೆ	೨

ಉಂಗುರ ಉಡಿದಾರ ಉಡಿಘಂಟೆ ನಾ ಕಂಡೆ
ರಂಗು ಮಾಣಿಕ್ಯದ ನವರತ್ನಮಾಲೆ ಕಂಡೆ
ಧಿಂ ಧಿಮಿಧಿಮಿಕೆಂದು ಕುಣಿವ ಕೃಷ್ಣನ ಕಂಡೆ
ಪುರಂದರ ವಿಠಲನ್ನ ಪಾದಕಮಲವ ಕಂಡೆ	೩

ಉದ್ದಂಡ—ಶ್ರೇಷ್ಠವಾಗಿ
ಸಮುದ್ರವ—ಉಡುಪಿಯಿಂದ ಮೂರುಮೈಲು ದೂರವಿರುವ ಅರಬೀಸಮುದ್ರ
ಚಂದ್ರಮೌಳೀಶ್ವರನ —ಉಡುಪಿಯ ಮುಖ್ಯ ಬೀದಿಯಲ್ಲೇ ಚಂದ್ರೇಶ್ವರನ ಮತ್ತು ಅನಂತೇಶ್ವರನ ಗುಡಿಗಳಿವೆ ಇವು ಕೃಷ್ಣನ ಗುಡಿಗಿಂತ ಪ್ರಾಚೀನವಾದುವು ಚಂದ್ರೇಶ್ವರನಿಂದಲೇ ಊರ ಹೆಸರು ಉಡುಪು ('ಉಡು', ನಕ್ಷತ್ರಗಳ 'ಪ' ಒಡೆಯ, ಚಂದ್ರ) ಎಂದಾದುದು ಅನಂತೇಶ್ವರನ ಗುಡಿಯಲ್ಲೇ ಮಧ್ವಾಚಾರ್ಯರು ಇರುತ್ತಿದ್ದುದು ; ಅಲ್ಲೇ ಕಣ್ಮರೆಯಾದುದು.

ಈಗಲೂ ಅನಂತೇಶ್ವರನ ಗುಡಿಯಲ್ಲೇ ಮಧ್ವಾಚಾರ್ಯರ ಸನ್ನಿಧಿಯಿದೆ ಇದನ್ನು ಅನಂತಾಸನವೆಂದೂ ಕರೆಯುತ್ತಾರೆ

ಹನೂಮಂತನ—ವಾದಿರಾಜರ ಪ್ರತಿಷ್ಠೆ

ಮಧ್ವಸರೋವರ—ಕೃಷ್ಣನ ಗುಡಿಯ ನೆರೆಯಲ್ಲಿರುವ ಕೊಳ ಮಧ್ವಾಚಾರ್ಯರು ಗೋಪೀಚಂದನದ ಗಡ್ಡೆಯಲ್ಲಿ ಅಡಗಿದ್ದ ಕೃಷ್ಣನ ಮೂರ್ತಿಯನ್ನು ಸಮುದ್ರ ತೀರದಿಂದ ಹೊತ್ತುತಂದು, ಪ್ರತಿಷ್ಠೆಮಾಡುವ ಮೊದಲು ಈ ಕೊಳದಲ್ಲಿ ತೊಳೆದರೆಂದು ಪ್ರತೀತಿ

ಅಷ್ಟಮುನಿಗಳ—ಮಧ್ವಾಚಾರ್ಯರು ತಾವು ಪ್ರತಿಷ್ಠೆಮಾಡಿದ ಕೃಷ್ಣನ ಪೂಜೆಯನ್ನು ಸರದಿಯಂತೆ ಮಾಡಲು, ಮತ್ತು ತಮ್ಮ ಸಿದ್ಧಾಂತವನ್ನು ಪ್ರಚಾರಮಾಡಲು ಎಂಟು ಮಠಗಳನ್ನು ಕೃಷ್ಣಗುಡಿಯ ನೆರೆಯಲ್ಲೇ ಏರ್ಪಡಿಸಿದರು ಅದಮಾರು, ಕಾಣಿಯೂರು, ಕೃಷ್ಣಾಪುರ, ಪುತ್ತಿಗೆ, ಪೇಜಾವರ, ಫಲಿಮಾರು, ಶೀರೂರು, ಸೋದೆ ಇವೇ ಅಷ್ಟಮಠಗಳು ಈ ಮಠದ ಸ್ವಾಮಿಗಳು ಎರಡು ವರ್ಷಕ್ಕೊಮ್ಮೆ ಪರ್ಯಾಯಕ್ರಮದಲ್ಲಿ ಕೃಷ್ಣನ ಪೂಜೆಯನ್ನು ನಿರ್ವಹಿಸುತ್ತಾರೆ ಒಂದು ಮಠದ ಸ್ವಾಮಿಗಳು ಇನ್ನೊಂದು ಮಠದ ಸ್ವಾಮಿಗಳಿಂದ ಪೂಜೆಯ ಅಧಿಕಾರವನ್ನು ವಹಿಸಿಕೊಳ್ಳುವುದು ಪರ್ಯಾಯೋತ್ಸವವೆನಿಸಿಕೊಳ್ಳುತ್ತದೆ.



# ಕಂಚಿ

ಕಂಚಿ ಅಥವಾ ಕಾಂಚೀಪುರವು ನಾಡಿನ ಸಪ್ತ ಮುಕ್ತಿಕ್ಷೇತ್ರಗಳಲ್ಲಿ ಒಂದು ಅಯೋಧ್ಯಾ, ಮಧುರಾ, ಮಾಯಾ (ಹರಿದ್ವಾರ), ಕಾಶಿ, ಅವಂತಿಕಾ ಮತ್ತು ದ್ವಾರಕಾ ಇವು ಇತರ ಆರು ಮುಕ್ತಿ ಕ್ಷೇತ್ರಗಳು ಮದ್ರಾಸಿನಿಂದ ನೈಋತ್ಯದಿಕ್ಕಿನಲ್ಲಿ ನಲವತ್ತೈದು ಮೈಲು ದೂರದಲ್ಲಿರುವ ಕಂಚಿ ಒಂದು ಕಾಲಕ್ಕೆ ತುಂಬಾ ಪ್ರಖ್ಯಾತವಾದ ಪಟ್ಟಣ ಪಲ್ಲವರಾಜರ ಕಾಲದಲ್ಲಿ ರಾಜಧಾನಿಯಾಗಿದ್ದಿತು ಪ್ರಾಚೀನ ಕಾಲದಲ್ಲಿ ವಿದ್ಯಾಸ್ಥಾನವೆಂದು ಹೆಸರಾಗಿದ್ದಿತು ಇಲ್ಲಿ ಜೈನ ಮತ್ತು ಬೌದ್ಧಧರ್ಮಗಳೂ ನೆಲೆಗೊಂಡಿದ್ದವು ಕಂಚಿಯಲ್ಲಿ ಶಿವಕಂಚಿ, ವಿಷ್ಣುಕಂಚಿ, ಜಿನಕಂಚಿ ಎಂಬ ವಿಭಾಗಗಳಿವೆ ಈಗ ಇದು ಶೈವಕ್ಷೇತ್ರವೂ ಹೌದು ವೈಷ್ಣವ ಕ್ಷೇತ್ರವೂ ಹೌದು ಕೈಲಾಸನಾಥ ದೇವಾಲಯ, ವೈಕುಂಠಪೆರುಮಾಳ್ ದೇವಾಲಯಗಳು ತುಂಬ ಹಳೆಯ ಕಟ್ಟಡಗಳು ಈಗ ಕಂಚಿಯಲ್ಲಿ ಏಕಾಮ್ರನಾಥ ಮತ್ತು ಕಾಮಾಕ್ಷಿ ಅಮ್ಮನ ಗುಡಿಗಳು ಹೆಸರಾಗಿವೆ ಶಿವಕಂಚಿಯಿಂದ ಮೂರು ಮೈಲಿ ದೂರದಲ್ಲಿ ವಿಷ್ಣುಕಂಚಿ ಇಲ್ಲಿ ಗುಡ್ಡವೊಂದರ ಮೇಲೆ ವರದರಾಜಸ್ವಾಮಿ ದೇವಾಲಯವಿದೆ ಗುಡ್ಡವು ಕರಿಗಿರಿ (ಹಸ್ತಿಗಿರಿ) ಯೆಂದೂ ಅಲ್ಲಿರುವ ಮೂರ್ತಿ ಕರಿವರದನೆಂದೂ ಗಜೇಂದ್ರಮೋಕ್ಷಣ ನಡೆದದ್ದು ಇಲ್ಲೇ ಎಂದೂ ಪುರಾಣಪ್ರಸಿದ್ಧಿ ವರದರಾಜನನ್ನು ಅರುಳಾಳಪ್ಪೆರುಮಾಳ್ ಎಂದೂ ಕರೆಯುತ್ತಾರೆ ಶ್ರೀವೈಷ್ಣವರ ನೂರೆಂಟು ತಿರುಪತಿಗಳಲ್ಲಿ ಇದೊಂದು ವೇಗವತೀ ನದಿಯ ದಂಡೆಯ ಮೇಲಿರುವ ಈ ಕ್ಷೇತ್ರದಲ್ಲಿ ಗಜೇಂದ್ರನಲ್ಲದೆ ಬ್ರಹ್ಮನಿಗೂ ನಾರದನಿಗೂ ನಾರಾಯಣನು ತೋರಿಕೊಂಡನೆಂದು ನಂಬಿಕೆ ಪುರಂದರದಾಸರ ಈ ಪದದಲ್ಲಿ ಕರಿರಾಜವರದನೆಂದು ದೇವರನ್ನು ಬಣ್ಣಿಸಿದ್ದಾರೆ, 'ಪುಣ್ಯಕೋಟಿ'ಯೆನ್ನುವುದು ದೇವಾಲಯದ ವಿಮಾನದ ಹೆಸರು

ಆನಂದಭೈರವಿ ಅಟ್ಟ

ಕಣ್ಣಾರೆ ಕಂಡೆನಚ್ಯುತನ, ಕಂಚಿ
ಪುಣ್ಯಕೋಟಿ ಕರಿರಾಜ ವರದನ ಪ

ವರಮಣಿ ಮಕುಟ ಮಸ್ತಕನ ಸಾರ
ವರ ಸನಕಾದಿ ವಂದಿತ ಪಾದಯುಗನ
ತರುಣಿ ಲಕ್ಷ್ಮೀ ಮನೋಹರನ ಪೀತಾಂ
ಬರದುಡಿಗೆಯಲಿ ರಂಜಿಸುವ ವಿಗ್ರಹನ ೧

ಕಸ್ತೂರಿ ತಿಲಕ ನೊಸಲನ ತೋರ
ಮುತ್ತಿನಹಾರ ಪದಕ ಧರಿಸುವನ
ಎತ್ತಿದಾಭಯ ಹಸ್ತದವನ ತನ್ನ
ಭಕ್ತರ ಸ್ತುತಿಗೆ ಹಾರೈಸಿ ಹಿಗ್ಗುವನ ೨

ನೀಲಮೇಘ ಶ್ಯಾಮನ ದೇವ
ಲೋಲ ಮಕರಕುಂಡಲ ಧರಿಸುವನ
ಭೂಲೋಕದೊಳು ಚೆನ್ನಿಗನ ಶ್ರೀ ಕಮ
ಲಾಲಯಾಪತಿ ವೈಕುಂಠವಲ್ಲಭನ ೩

ಭಾನುಕೋಟಿ ತೇಜದವನ ಭವ
ಕಾನನಕೆ ದೀಪ್ತ ಹವ್ಯವಾಹನನ
ದಾನವರೆದೆದಲ್ಲಣನ, ಮುನಿ
ಮಾನಸಹಂಸಯೆಂದೆನಿಸಿ ಮೆರೆವನ ೪

ತುಂಗ ಚತುರ್ಭುಜದವನ, ಶುದ್ಧ
ಮಂಗಳರೇಖೆಯಂಗದಲಿ ಒಪ್ಪುವನ
ಶೃಂಗಾರ ಕಂಬು ಕಂಧರನ, ದೇವ
ಗಂಗೆಯ ಪಿತ ಪುರಂದರವಿಠ್ಠಲನ ೫

ಪುಣ್ಯಕೋಟಿ—ವರದರಾಜನ ಗುಡಿಯ ವಿಮಾನದ ಹೆಸರು

ಕಸ್ತೂರಿ ತಿಲಕ ನೊಸಲನ—ಹಣೆಯ ಮೇಲೆ ಕಸ್ತೂರಿ ತಿಲಕವನ್ನು ಧರಿಸಿದವನ

ತೋರ—ದಪ್ಪನಾದ

ಎತ್ತಿದಾಭಯ ಹಸ್ತ—ಬಲಗೈಯಲ್ಲಿ ಅಭಯ ಮುದ್ರೆಯನ್ನು ಧರಿಸಿರುವ

ಮಕರಕುಂಡಲ—ಕಿವಿಗಳಲ್ಲಿ ಧರಿಸುವ ಆಭರಣ ವಿಶೇಷ , ಮೊಸಳೆಯಾಕಾರದಲ್ಲಿರುವ ಓಲೆ

ಭವ ಕಾನನಕೆ —ಸಂಸಾರವೆಂಬ ಕಾಡನ್ನು ಸುಡುವಂಥ ಬೆಂಕಿ (ಹವ್ಯವಾಹನ) ಯಂತೆ ಇರುವ

ದಾನವರೆದೆದಲ್ಲಣ—ರಾಕ್ಷಸರ ಎದೆಯನ್ನು ತಲ್ಲಣಗೊಳಿಸುವವ

ಮುನಿಮಾನಸಹಂಸ—ಮುನಿಗಳ ಅಂತರಂಗದಲ್ಲಿ ವಿಹರಿಸುವ ರಾಜಹಂಸ



ಮೋಹನ ಆದಿ

ಬಾರೊ ನೀನೆನ್ನ ಮನಮಂದಿರಕೆ
ತಡಮಾಡುವುದೇಕೆ
ಮಾರಜನಕ ಹರಿ ನಿನ್ನಗ್ಗಳಿಕೆ
ಸ್ಮರಿಸುವೆ ಕ್ಷಣಕ್ಷಣಕೆ ಪ

ಬಾರೊ ಬಾರೊ ಮಧುರಾಪುರಿ ಬಿಟ್ಟು
ಸೇರಿಕೊಳ್ಳದಿರೊ ವರ ಕರಿಪುರವ ಅ

ಕುಂತೀಮಕ್ಕಳ ಮನೆಗೆ ಹೋದೇನೆಂದೆ
ಅವರೈದು ಮಂದಿ
ಸಂತೋಷಪಡಿಸುವರೆಂದು ತಿಳಿದೆ
ಎಂಜಲ ಬಳಿದೆ
ಕಂತುಪಿತ ಕೇಳೊ ಮುಂದೆ ನೀ ಮುದದಿ
ಬಂಡಿಯು ಹೊಡೆದೆ
ಇಂತು ಪರಿಯು ನಾನೆಂತು ಪೇಳಲೋ
ಕಾಂತ ಎನ್ನ ಮನದಂತರ್ಯಾಮಿ ೧

ಗೋಕುಲದಲ್ಲಿರೆ ನಂದಗೋಪ
ನಿನ್ನ ಕೈಯಿಂದ
ಆಕಳ ಕಾಯಿಸುವನು ಅವ ಪಾಪ
ಅದು ಅಲ್ಲದಲೆ
ನೀ ಕೇಳೊ ಗೋಪಿಯರ ಅಪಲಾಪ
ಲಾಲಿಸು ನೀ ಭೂಪ
ಈ ಕರೆಕರೆಯೊಳು ನೀ ಕೂಡಿರುವುದು
ಯಾಕೆಲೊ ಕಾಂತನೆ ಮಮಹೃತ್ಕಮಲಕೆ ೨

ದುಷ್ಟಮಾವನ ಮನೆಗೆ ಹೋಗಲು ಬೇಡ
ಪಟ್ಟದಾನೆಗಳಿಂದ
ಗಟ್ಟಿಯಾಗಿ ಮೇಲ್ ತುಳಿಸುವನವ ಮೂಢ
ಮಲ್ಲರ ಕೈಯಿಂದ

ಕುಟ್ಟಿ ಕೆಡಹಿಸುವನವನು ಪ್ರಚಂಡ
ತಿಳುಹಿದೆನುದ್ದಂಡ
ಇಷ್ಟು ಪರಿಯ ಬಹು ಕಷ್ಟವೇಕೆಲೊ
ದಿಟ್ಟಪುರಂದರವಿಠ್ಠಲ ಕೃಷ್ಣ ೩

ವರಕರಿಪುರವ—ಕಂಚಿಯಲ್ಲಿ ಹಸ್ತಗಿರಿ , ವರದರಾಜಸ್ವಾಮಿಯ ಗುಡಿಯಿರುವ ಸ್ಥಳ



# ಕನಕಾಚಲ (ಕನಕಗಿರಿ)

ಸ್ಕಾಂದಪುರಾಣದ ಪ್ರಕಾರ ಹಂಪಿಯಿಂದ ಉತ್ತರಕ್ಕೆ ಸುಮಾರು ಇಪ್ಪತ್ತು ಮೈಲಿಗಳ ದೂರದಲ್ಲಿ ಸುವರ್ಣಗಿರಿಯೆಂಬ ಕ್ಷೇತ್ರವಿದ್ದಿತು ಪುಷ್ಪಾ ಮತ್ತು ಜಯಂತಿಗಳೆಂಬ ನದಿಗಳ ನಡುವೆ ಇದ್ದಿತು ಇದೇ ಈಗ ರಾಯಚೂರು ಜಿಲ್ಲೆಯಲ್ಲಿ ಗಂಗಾವತಿ ತಾಲೂಕಿಗೆ ಸೇರಿದ ಕನಕಗಿರಿ ಅಥವಾ ಕನಕಾಚಲ ವಿಜಯನಗರದ ಅರಸನಾಗಿದ್ದ ಇಮ್ಮಡಿ ದೇವರಾಯನ ಸಾಮಂತನಾಗಿದ್ದ ಪರಸಪ್ಪ ಉಡಿಚನಾಯಕನು ಇಲ್ಲಿ ಲಕ್ಷ್ಮೀನರಸಿಂಹ ಸ್ವಾಮಿಯ ದೇವಾಲಯವನ್ನು ಕಟ್ಟಿಸಿದನಂತೆ ಕ್ರಿಸ್ತಾಬ್ದ 1436–37ರಲ್ಲಿ ವಿಜಯನಗರದ ಅರಸರು ಈ ದೇವಾಲಯದ ಅಭಿವೃದ್ಧಿಗೆ ಕಾರಣರಾದರು ಪರಸಪ್ಪನ ಮಗ ನವಾಬ ಉಡಿಚನಾಯಕನು ಕೃಷ್ಣದೇವರಾಯ ಮಹಾರಾಯನ ಕಾಲದಲ್ಲಿ ಅವನ ಮಾಂಡಲಿಕನಾಗಿದ್ದವನು ಕೃಷ್ಣದೇವರಾಯನ 'ಆಮುಕ್ತಮಾಲ್ಯದಾ' ಎಂಬ ಕಾವ್ಯದಲ್ಲಿ ಕನಕಗಿರಿಯ ಉಲ್ಲೇಖವಿದೆ ಇಲ್ಲಿನ ಮುಖ್ಯ ದೇವಾಲಯದ ದೇವರಿಗೆ (ನರಸಿಂಹನಿಗೆ) ಮೊದಲು ಕನಕಗಿರಿನಾಥಸ್ವಾಮಿಯೆಂದೇ ಹೆಸರಿದ್ದಿತು ಇದಲ್ಲದೆ ನೂರಾರು ಇತರ ದೇವಾಲಯಗಳೂ ಅಲ್ಲಿದ್ದುವಂತೆ ಪುರಂದರದಾಸರು 'ಕನಕಾಚಲ ಕೃಷ್ಣನ' ಮೇಲೆ ಪದವನ್ನು ರಚಿಸಿದ್ದರೂ ಎರಡನೆಯ ನುಡಿಯಲ್ಲೇ ಲಕ್ಷ್ಮೀನರಸಿಂಹನ ವರ್ಣನೆಯಿರುವುದನ್ನು ಗಮನಿಸಬಹುದು

ಮಧ್ಯಮಾವತಿ ಆದಿ

ಕಾವ ದೇವ ನೀನಲ್ಲದೆ ಜಗಕಿನ್ನಾವ ದೇವರುಂಟೈ ಪ

ದೇವರ ದೇವ ನೀನೆಂದು ನಂಬಿದೆ ಎನ್ನ
ಕಾಯೊ ಕನಕಾಚಲ ಕೃಷ್ಣ ಕರುಣದಿ ಅ

ತಂದೆಯ ತೊಡೆಯಮೇಲೆ ಕಾದು ಕುಳಿತಿದ್ದ
ಕಂದನ ಬಲತಾಯಿಯು ನೂಕಲು
ಅಂದು ಶಿಶುವು ಅಡವಿಗೆ ನಡೆತರಲು
ಬಂದು ಪೊರೆದೆಯೋ ನೀ ಕರುಣದಲಿ ೧

ನಖಮುಖದಲಿ ಹಿರಣ್ಯಕನೊಡಲನು ಸೀಳಿ
ರಕುತವ ದೆಸೆದಸೆಗೆ ಚೆಲ್ಲಲು
ಸಕಲ ಸುರರು ಕೊಂಡಾಡಲು ಜಯವೆಂದು
ಭಕುತ ಪ್ರಹ್ಲಾದನ ಪೊರೆದೆ ಕರುಣದಿ ೨

ಶಕಟ ಪೂತನಿ ಧೇನುಕ ವತ್ಸಾಸುರ
ಮಿಕ್ಕಮುಖ್ಯರನೆಲ್ಲ ಸವರಿದೆಯೊ
ಪ್ರಕಟತನದಿ ಕಂಸನ ನೆಲಕೊತ್ತಿ ದೇ
ವಕಿ ವಸುದೇವರ ಪೊರೆದೆ ಕರುಣದಿ ೩

ಅತಿ ಚಪಲದಿ ದುಶ್ಶಾಸನ ಸಭೆಯಲಿ
ಪತಿಗಳೈವರು ಎದುರಿನೊಳಿರಲು
ಖತಿಯಿಂದಲಿ ಸೆಳೆಯೆ ಸೀರೆಯ ತರಳೆ ದ್ರೌ
ಪದಿಯಭಿಮಾನವ ಪೊರೆದೆ ಕರುಣದಿ ೪

ಮರಣ ಕಾಲದಲಿ ಅಜಮಿಳ ಮರುಕದಿ
ತರಳ ನಾರಣಾನೆಂದು ಕರೆಯಲು
ನೆರೆದು ಪೊರೆದು ಕರುಣಾಳುಗಳರಸನೆ
ಗುರುಪುರಂದರವಿಠ್ಠಲ ಕರುಣದಲಿ ೫

ತಂದೆಯ ತೊಡೆಯ ಮೇಲೆ—ಸ್ವಾಯಂಭುವಮನುವಿನ ಮೊಮ್ಮಗ ಉತ್ತಾನಪಾದ ರಾಜ, ಅವನ ಹಿರಿಯ ಹೆಂಡತಿ ಸುನೀತಿಯಲ್ಲಿ ಹುಟ್ಟಿದವನು ಧ್ರುವ ಅವನ ಚಿಕ್ಕತಾಯಿ (ಸುನೀತಿಯ ಸವತಿ) ಸುರುಚಿ, ಅವಳ ಮಗ ಉತ್ತಮ ಇಲ್ಲಿ ಧ್ರುವನು ತಪಸ್ಸಿಗೆಂದು ಕಾಡಿಗೆ ಹೋದ ಪ್ರಸಂಗದ ಹಿನ್ನೆಲೆ ಹೇಳಿದೆ

ಅಜಾಮಿಳ—ದುರಾಚಾರಿಯಾಗಿದ್ದ ಬ್ರಾಹ್ಮಣ, ಮರಣೋನ್ಮುಖನಾಗಿದ್ದಾಗ ತನ್ನ ಮಗನನ್ನು ಅವನ ಹೆಸರಾದ ನಾರಾಯಣ ಎಂದು ಕರೆದನು ಹೆಸರಿನ ಮಹಿಮೆಯಿಂದ ಅಜಾಮಿಳನಿಗೆ ಸದ್ಗತಿ ಒದಗಿತು



# ಕಾಶಿ

ಭಾರತದ ಪುಣ್ಯಸ್ಥಳಗಳಲ್ಲಿ ಕಾಶಿಗಿಂತ ಹೆಚ್ಚು ಪ್ರಸಿದ್ಧವಾದುದು ಯಾವುದು ? ಉತ್ತರಪ್ರದೇಶದಲ್ಲಿ ವಾರಣಾಸಿಯೆನಿಸಿಕೊಳ್ಳುವ ಈ ಕ್ಷೇತ್ರ ಹಿಂದೂ ಧರ್ಮದ ಎಲ್ಲ ಮತದವರಿಗೂ ಪವಿತ್ರವಾದ ಕ್ಷೇತ್ರವು ಇಲ್ಲಿರುವ ವಿಶ್ವನಾಥಮಂದಿರವಂತೂ ಜಗತ್ಪ್ರಸಿದ್ಧವಾದುದು ಕಾಶಿಯ ಮಹಿಮೆಯಲ್ಲಿ ಶೈವ ವೈಷ್ಣವ ಎಂಬ ಭೇದವಿಲ್ಲವಾದರೂ ವೈಷ್ಣವರಿಗೆ ಪ್ರಿಯವಾದುದು ಬಿಂದುಮಾಧವಸ್ಥಾನವೆಂದು ಕಾಶಿಯಲ್ಲಿರುವ ವಿಷ್ಣುವಿನ ರೂಪ ಬಿಂದುಮಾಧವ ಗಂಗಾನದಿಯ ಹರಿಶ್ಚಂದ್ರಘಾಟಿನ ಹತ್ತಿರ ಪಂಚಗಂಗಾ ಎಂಬ ತೀರ್ಥವಿದೆ , ಅದರ ಒಳಯಿರುವುದು ಬಿಂದು ಸರೋವರವೆಂದು ಹೆಸರಾಗಿದೆ ಬಿಂದುವೆಂಬ ಮುನಿಗೆ ನಾರಾಯಣನು ಪ್ರಸನ್ನನಾದುದು ಇಲ್ಲೇ ಎಂದು ಒಂದು ಒಕ್ಕಣೆ ಶಿವನು ಬ್ರಹ್ಮನ ಐದು ತಲೆಗಳಲ್ಲಿ ಒಂದನ್ನು ಕೈಯಿಂದಲೇ ಚಿವುಟಿ ತೆಗೆದಾಗ, ಬ್ರಹ್ಮಹತ್ಯಾ ದೋಷ ತಗುಲಿ ಅವನ ಕೈಗೆ ಬ್ರಹ್ಮನ ಕಪಾಲ ಅಂಟಿಕೊಂಡುಬಿಟ್ಟಿತಂತೆ , ಏನು ಮಾಡಿದರೂ ಅದು ಬಿಡದಿರಲು ಶಿವನು ಹದಿನಾಲ್ಕು ವರ್ಷಕಾಲ ಜಗವೆಲ್ಲ ಅಲೆದಾಡಿ ಬೇಸತ್ತು ಕಾಶಿಗೆ ಬಂದು ಗಂಗೆಯಲ್ಲಿ ಸ್ನಾನಮಾಡಲು ಆ ಕಪಾಲವು ಶಿವನ ಕೈಯಿಂದ ಕಳಚಿಕೊಂಡು ಬಿದ್ದಿತಂತೆ ಕಪಾಲಮೋಚನ ತೀರ್ಥ ವೆಂದು ಈಗ ಹೆಸರಾಗಿರುವುದು ಈ ಪ್ರಸಂಗದಿಂದ ಶಿವನಿಗೆ ತುಂಬ ಸಮಾಧಾನವಾಗಿ ಇಲ್ಲಿನ ಮಾಧವನನ್ನು ಸ್ತುತಿಸಿದನಂತೆ ಆನಂದಾಶ್ರುಗಳು ಶಿವನ ಕಣ್ಣಿಂದ ಬಿದ್ದು ಸರೋವರವಾದಾಗ ಅದೇ ಬಿಂದು ಸರೋವರವಾಯಿತಂತೆ ಇದೊಂದು ಒಕ್ಕಣೆ ಪುರಂದರದಾಸರು ಇಲ್ಲಿನ ಬಿಂದು ಮಾಧವನನ್ನು ಪದದಲ್ಲಿ ಉಲ್ಲೇಖಿಸಿದ್ದಾರೆ

ಕಾಂಬೋದಿ ಅಟ್ಟ

ಗಂಗಾತೀರದ ಮನೆ ನಮ್ಮದು ಕಾಶಿ
ಬಿಂದುಮಾಧವನಲ್ಲಿ ಇರುವುದು ಮನೆ ಪಂಚ– ಪ

ಆವಾವ ಕಾಲದ ಆನಂದ ಅರಮನೆ
ತಾವರೆ ತಳಿತದ ನದಿಯ ಮನೆ
ಆವಾಗ ಕಮಲಜ ಅವತರಿಸಿದ ಮನೆ
ಆ ವೇದಂಗಳಿಗೆಲ್ಲ ತವರುಮನೆ ಪಂಚ– ೧

ಚಿತ್ರವಳಿದಲ್ಲಿಯು ಮನೆ ಚಿನ್ಮಯರೂಪದ ಮನೆ
ನಿತ್ಯ ಲೋಕಗಳ ರಕ್ಷಿಸುವ ಮನೆ
ಭಕ್ತಜನರನೆಲ್ಲ ಉದ್ಧರಿಸಿದ ಮನೆ
ಮುಕ್ತಿಸಾಯುಜ್ಯಕೆ ಕಡೆಯಿಲ್ಲದ ಮನೆ ಪಂಚ– ೨

ಹಂಗಿಲ್ಲದ ಮನೆ ಹದಿಯು ಬಿಡದೆ ಹಾಲು
ಗಂಗಿಯುವಧು ರಕ್ಷಿಸುವ ಮನೆ ಮೂ
ರಂಗನೆಯರುಳ್ಳ ಮುಕ್ತಿಸಾಧನಕಿನ್ನು ಇಂಥ
ಕಂಗಳ ಪುಣ್ಯಕಿನ್ನು ಕಡೆಯಿಲ್ಲದ ಮನೆ ಪಂಚ– ೩

ಧ್ವಜವಜ್ರಾಂಕಿತರೇಖಾ ಶಂಖಚಕ್ರದ ಮನೆ
ನಿಜಸುವರ್ಣರೇಖೆಯ ತೋರುವ ಮನೆ
ಗಜರಾಜಗೊಲಿದಂಥ ಗರುಡವಾಹನನಾದ ಇಂಥ
ಮೂಜಗ ತ್ರೈಲೋಕ್ಯ ಮಾಡಿದ ಮನೆ ಪಂಚ– ೪

ಪರಮಪವಿತ್ರ ಚರಿತ್ರತೀರ್ಥರ ಮನೆ
ಪರಬ್ರಹ್ಮರಥಕೆ ಸಾಧನದ ಮನೆ
ಪರಮಾತ್ಮನಾಗಿ ಇಷ್ಟಾರ್ಥವನೀವ ಶ್ರೀ
ವರದನಾದ ಪುರಂದರವಿಠಲನ ಮನೆ ಪಂಚ– ೫

ಪಂಚಗಂಗೆ—ಕಾಶಿಯಲ್ಲಿ ಒಂದು ಕ್ಷೇತ್ರ ; ನಂದಿನೀ, ನಲಿನೀ, ಸೀತಾ, ಮಾಲತೀ, ವಿಷ್ಣುಪದಾ ಎಂಬುವರು ಪಂಚಗಂಗೆಯರೆಂದು ಪ್ರತೀತಿ. ಯಮುನಾ, ಸರಸ್ವತಿ, ಕಿರಣಾ, ಧೂತಪಾಪಾ ಎಂಬ ನದಿಗಳು ಗುಪ್ತವಾಗಿ ಗಂಗೆಯನ್ನು ಸೇರುವುವೆಂದೂ ಪಂಚಗಂಗೆ

ಮಧ್ಯಮಾವತಿ ಆದಿ

ಸಾಧುಸಜ್ಜನರೊಳಗಿರುವೋದೆ ಹಬ್ಬ
ವೇದಾಂತದರ್ಥವ ತಿಳಿವೋದೆ ಹಬ್ಬ ಪ

ಭೇದಬುದ್ಧಿಗಳೆಲ್ಲ ಬಿಡುವೋದೆ ಹಬ್ಬ
ಭಾಗೀರಥಿಲಿ ಓಲಾಡುವುದೆ ಹಬ್ಬ ೧

ಸಂಕಲ್ಪಸಿದ್ಧಿ ಮನಕೆ ದೊಡ್ಡ ಹಬ್ಬ
ನಿಶ್ಚಿಂತ ಯೋಗಿಗೆ ಅನುದಿನ ಹಬ್ಬ ೨

ಸಾಲವಿಲ್ಲದವನ ಸಂಸಾರವೆ ಹಬ್ಬ
ಶರೀರಕ್ಕೆ ವ್ಯಾಧಿ ಬಾರದಿರೆ ಹಬ್ಬ ೩

ಕಂಗಳು ಕಾಶಿಯು ಕಾಂಬೋದ ಹಬ್ಬ
ಪಂಕಜನಾಭನ ಭಜಿಸುವುದೆ ಹಬ್ಬ ೪

ಭೂಲೋಕದೊಳು ಕಾಶಿವಾಸವೆ ಹಬ್ಬ
ಪುರಂದರವಿಠಲನ್ನ ಭಜಿಸುವುದೆ ಹಬ್ಬ ೫

ಪಂಕಜನಾಭನ—ವಿಷ್ಣು, ಕಾಶಿಯಲ್ಲಿ ಬಿಂಧುಮಾಧವ



ಕಾಂಬೋದಿ — ಝಂಪೆ

ರಾಮ ಎಂಬೊ ಎರಡಕ್ಷರದ ಮಹಿಮೆಯನು
ಪಾಮರರು ತಾವೇನು ಬಲ್ಲರಯ್ಯ ಪ

ರಾ ಎಂದ ಮಾತ್ರದೊಳು ರಕ್ತಮಾಂಸದೊಳಿದ್ದ
ಆಯಸ್ತವಾದ ಅತಿ ಪಾಪವನ್ನು
ಮಾಯವನು ಮಾಡಿ ಮಹರಾಯ ಮುಕ್ತಿಯ ಕೊಡುವ
ದಾಯವನು ವಾಲ್ಮೀಕಿ ಮುನಿರಾಯ ಬಲ್ಲ ೧

ಮತ್ತೆ ಮ ಎಂದೆನಲು ಹೊರಬಿದ್ದ ಪಾಪಗಳು
ಒತ್ತಿ ಒಳಪೊಗದಂತೆ ಕವಾಟವಾಗಿ
ಚಿತ್ತಕಾಯಗಳ ಪವಿತ್ರಮಾಡುವ ಪರಿಯ
ಭಕ್ತವರ ಹನುಮಂತನೊಬ್ಬ ತಾ ಬಲ್ಲ ೨

ಧರೆಯೊಳೀ ನಾಮಕ್ಕೆ ಸರಿಮಿಗಿಲು ಇಲ್ಲೆಂದು
ಪರಮ ವೇದಗಳೆಲ್ಲ ಪೊಗಳುತಿಹವು
ಸಿರಿಯರಸ ಪುರಂದರವಿಟ್ಠಲನ ನಾಮವನು
ಸಿರಿ ಕಾಶಿಯೊಳಗಿಪ್ಪ ಶಿವನು ತಾ ಬಲ್ಲ ೩

[ಉಮಾಸಂಹಿತೆಯಲ್ಲಿ (3,8) ಶಿವನು ಪಾರ್ವತಿಗೆ ಹೇಳಿದನೆಂದು ಬಂದಿರುವ ಶ್ಲೋಕಗಳ ಛಾಯೆ ಇಲ್ಲಿದೆ—'ಶ್ರೀರಾಮ ರಾಮೇತಿ ರಾಮೇ ರಾಮೇ ಮನೋರಮೇ। ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ॥' ಎಂಬ ಶ್ಲೋಕವೂ "ರಾಮೇತಿ ರಾಮಚಂದ್ರೇತಿ ರಾಮಭದ್ರೇತಿ ವಾ ಮನುಂ। ಯಾವಜ್ಜೀವಂ ಜಪನ್ ಮರ್ತ್ಯಃ ಜೀವನ್ಮುಕ್ತೋ ನ ಸಂಶಯಃ॥" ಎಂಬ ಶ್ಲೋಕವೂ ಇಲ್ಲಿ ಪ್ರಸಕ್ತವಾಗಿವೆ ಅದೇ ಗ್ರಂಥದಲ್ಲಿ ಬ್ರಹ್ಮನು ಯಮಧರ್ಮರಾಜನಿಗೆ ಹೇಳಿದ 'ರಾ ಶಬ್ದೋಚ್ಚಾರಣಾದೇವ ಪಾತಕಾ ದೇಹಪಂಜರಾತ್ । ನಿರ್ಯಾತ್ಯಾಯಾಂತಿ ಪಾಪಾನಿ ಮವರ್ಣಾದರ್ಶನಾತ್ ಪುನಃ' ಎಂಬ ಶ್ಲೋಕದ ಛಾಯೆಯೇ ಎರಡನೆಯ ನುಡಿ 'ಶ್ರೀಮದ್ರಾಮಾಯಣ ರಹಸ್ಯರತ್ನಾಕರ' ನೋಡಿ ]

ಆಯಸ್ತ—ಯಾತನಾಮಯ

## ೮೪

ಸಾವೇರಿ ಚಾಪು

ಕಂದನ ಕಾಣಿರೇನೆ ಗೋಪಿಯ ಕಂದ ಪ

ಕಂದನಲ್ಲವೆ ಎನ್ನ ಕುಂದಣದರಗಿಣಿಯು ಅ

ಉಂಗುರನಿಟ್ಟಿದ್ದೆ ಉಡಿದಾರ ಕಟ್ಟಿದ್ದೆ
ಬಂಗಾರದ ಟೊಪ್ಪಿಗೆ ತಲೆಯ ಮೇಲಿಟ್ಟೆ ೧

ರೊಟ್ಟಿಯ ಸುಟ್ಟಿದ್ದೆ ತುಪ್ಪವ ಕಾಸಿದ್ದೆ
ಇಷ್ಟು ಹೊತ್ತು ಹೋಯಿತು ಉಣಲಿಲ್ಲ ೨

ಕಾಶಿಗೆ ಹೋಗಿ ನಾ ಕೂಸಿನ ಪಡೆದೆ ಪುರಂದರವಿಠಲನ
ದಾಸರಿಗೆ ತಕ್ಕ ಮಗುವೇ ನಮ್ಮಮ್ಮ ೩

[ಇದು ವಿಷ್ಣುಪರವಾದ ಪದ ಬಹುಶಃ ಕಾಶಿಯಲ್ಲಿ ಬಿಂಧುಮಾಧವನ ದರ್ಶನವಾದಾಗ ರಚಿಸಿದ್ದು ಜನರ ಸಂದಣಿಯಲ್ಲಿ ಅವರ ಮಗುವೇ ಒಂದು ದಿಟವಾಗಿ ಕಾಣೆಯಾಗಿದ್ದಿತೋ ಏನೋ ಅದು ಮತ್ತೆ ದೊರೆತಾಗ ಹೊರಬಂದ ಪದವೂ ಇದ್ದೀತು ]



೮೫

ಸೌರಾಷ್ಟ್ರ ಚಾಪು

ತಾರಕ್ಕ ಬಿಂದಿಗೆ ನೀರಿಗೆ ಹೋಗುವೆ ತಾರೇ ಬಿಂದಿಗೆಯ ಪ

ಬಿಂದಿಗೆ ಒಡೆದರೆ ಒಂದೇ ಕಾಸು ತಾರೇ ಬಿಂದಿಗೆಯ ಅ

ರಾಮನಾಮವೆಂಬ ರಸವುಳ್ಳ ನೀರಿಗೆ ತಾರೇ ಬಿಂದಿಗೆಯ
ಕಾಮಿನಿಯರ ಕೂಡೆ ಏಕಾಂತವಾಡೇನು ತಾರೇ ಬಿಂದಿಗೆಯ ೧

ಗೋವಿಂದಯೆಂಬುವ ಗುಣವುಳ್ಳ ನೀರಿಗೆ ತಾರೇ ಬಿಂದಿಗೆಯ
ಆವಾವ ಪರಿಯಲ್ಲಿ ಅಮೃತದ ನೀರಿಗೆ ತಾರೇ ಬಿಂದಿಗೆಯ ೨

ಬಿಂದುಮಾಧವನ ಘಟ್ಟಕ್ಕೆ ಹೋಗುವೆ ತಾರೇ ಬಿಂದಿಗೆಯ ಪು
ರಂದರವಿಠಲಗೆ ಅಭಿಷೇಕ ಮಾಡುವೆ ತಾರೇ ಬಿಂದಿಗೆಯ ೩

[ಈ ಪದವನ್ನು ರಚಿಸಿದ ಸಂದರ್ಭ ತಿಳಿಯುವುದಿಲ್ಲ ಆದರೆ ಇಲ್ಲಿ ಬಿಂದಿಗೆಯೆಂದರೆ ಸಾಧಕಪ್ರಯೋಜಕವಾದ ಶರೀರ ನೀರಿಗೆ ಹೋಗುವುದು ಬಿಂಬಾಪರೋಕ್ಷ ಬಿಂದಿಗೆ ಒಡೆಯುವುದು ಶರೀರಪಾತ, ಮರಣ ಕಾಮಿನಿಯರ ಕೂಡೆ ಏಕಾಂತವಾಡುವುದೆಂದರೆ ತತ್ತ್ವಾಭಿಮಾನಿಗಳ ಸಾಕ್ಷಾತ್ಕಾರ ವಿವರಣೆಗೆ ಮುಂದಿನ ಸಂಪುಟ ನೋಡಿ ]



# ಕುಂಭಘೋಣ

ತಮಿಳುನಾಡಿನಲ್ಲಿ ತಂಜಾವೂರು ಜಿಲ್ಲೆಗೆ ಸೇರಿದಂತೆ ಕಾವೇರಿತೀರದಲ್ಲಿರುವ ಪ್ರಸಿದ್ಧಕ್ಷೇತ್ರ ಮೊದಲು ಇದನ್ನು ತಿರುಕುಡಂದೈ ಎಂದೂ ಕುಡಮುಕ್ಕು ಎಂದೂ ಕರೆಯುತ್ತಿದ್ದರು ಕಾವೇರಿ ಮತ್ತು ಕಾವೇರಿಯ ಕವಲಾದ ಅರಸಲಾರು ಎಂಬೆರಡು ನದಿಗಳ ನಡುವೆ ಇರುವ ಈ ಕ್ಷೇತ್ರದಲ್ಲಿ ಮುಖ್ಯ ದೇವತೆ ಕುಂಭೇಶ್ವರ ಬ್ರಹ್ಮನು ಸೃಷ್ಟಿಗೆಂದು ಮೂಲಪ್ರಕೃತಿಯನ್ನು ಇರಿಸಿಕೊಳ್ಳಲು ಬಳಸಿದ ಮಡಕೆಯ ಚೂರುಗಳಿಂದಲೇ ಈ ಲಿಂಗವನ್ನು ಮಾಡಿದುದರಿಂದ 'ಆದಿ ಕುಂಭೇಶ್ವರ' (ಕುಡಮುಕ್ಕು) ಎನಿಸಿಕೊಂಡಿತು , ಸ್ಥಳ ಕುಂಭಪುರ ಅಥವಾ ಕುಂಭಘೋಣ (ಆಡು ಮಾತಿನಲ್ಲಿ ಕುಂಭಕೋಣ)ವಾಯಿತು ಹನ್ನೆರಡು ವರ್ಷಗಳಿಗೊಮ್ಮೆ ಇಲ್ಲಿ ನಡೆಯುವ ಮಹಾಮಾಘಸ್ನಾನ ಹೆಸರಾದುದು , ಲಕ್ಷಾಂತರ ಜನ ನೆರೆಯುತ್ತಾರೆ ಶಿವದೇವಾಲಯವಲ್ಲದೆ ಶಾರ್ಙ್ಗಪಾಣಿಯ (ವಿಷ್ಣುವಿನ) ಗುಡಿಯೂ ಇಲ್ಲಿದೆ ಇಲ್ಲಿನ ನಾಗೇಶ್ವರ ದೇವಾಲಯವೂ ಪ್ರಸಿದ್ಧವಾದುದು ಶ್ರೀವೈಷ್ಣವರ ನೂರೆಂಟು ತಿರುಪತಿಗಳಲ್ಲಿ ಕುಂಭಘೋಣವೂ ಒಂದು ಪುರಂದರದಾಸರು ಇಲ್ಲಿನ ಶಿವನನ್ನೇ ತಮ್ಮ ಪದದಲ್ಲಿ ಸ್ತುತಿಸಿದ್ದಾರೆ

ಧನ್ಯಾಸಿ ಆದಿ

ಚಂದ್ರಚೂಡ ಶಿವಶಂಕರ ಪಾರ್ವತಿ ರಮಣನೆ ನಿನಗೆ ನಮೋನಮೋ ಪ
ಸುಂದರ ಮೃಗಧರ ಪಿನಾಕಧನುಕರ ಗಂಗಾಶಿರ ಗಜಚರ್ಮಾಂಬರಧರ ಅ

ನಂದಿವಾಹನಾನಂದದಿಂದ ಮೂರ್ಜಗದಿ ಮೆರೆವ ನೀನೆ
ಅಂದು ಅಮೃತ ಘಟದಿಂದುದಿಸಿದ ವಿಷ ತಂದು ಭುಂಜಿಸಿದವ ನೀನೆ
ಕಂದರ್ಪನ ಕ್ರೋಧದಿಂದ ಕಣ್ತೆರೆದು ಕೊಂದ ಉಗ್ರ ನೀನೆ
ಇಂದಿರೇಶ ಶ್ರೀರಾಮನ ಪಾದವ ಚಂದದಿ ಪೊಗಳುವ ನೀನೆ ೧

ಬಾಲಮೃಕಂಡಜನ ಕಾಲನು ಎಳೆವಾಗ ಪಾಲಿಸಿದವ ನೀನೆ
ಪಾಲಯದಿ ಕಪಾಲ ಪಿಡಿದು ಭಿಕ್ಷ ಬೇಡೋ ದಿಗಂಬರ ನೀನೆ
ಕಾಲಕೂಟವನು ಪಾನಮಾಡಿದ ನೀಲಕಂಠನು ನೀನೆ
ಜಾಲಮಾಡಿದ ಗೋಪಾಲನೆಂಬ ಪೆಣ್ಣಿಗೆ ಮರುಳಾದವ ನೀನೆ ೨

ಧರೆಗೆ ದಕ್ಷಿಣ ಕಾವೇರಿತೀರ ಕುಂಭಪುರವಾಸನು ನೀನೆ
ಕೊರಳೊಳು ರುದ್ರಾಕ್ಷಿ ಭಸ್ಮವ ಧರಿಸಿದ ಪರಮ ವೈಷ್ಣವ ನೀನೆ
ಕರದಲಿ ವೀಣೆಯ ನುಡಿಸುವ ನಮ್ಮ ಉರಗಭೂಷಣನು ನೀನೆ
ಗರುಡಗಮನ ಶ್ರೀ ಪುರಂದರವಿಠಲಗೆ ಪ್ರಾಣಪ್ರಿಯನು ನೀನೆ ೩

ಸುಂದರ ಮೃಗಧರ-ಪಿನಾಕಧನುಕರ—ಶಿವನ ಎರಡು ಕೈಗಳಲ್ಲಿ ಜಿಂಕೆಯೂ ಪಿನಾಕವೆಂಬ ಬಿಲ್ಲೂ ಇವೆ

ಗಂಗಾಶಿರ—ಗಂಗೆಯನ್ನು ಜಟೆಯಲ್ಲಿ ಕಟ್ಟಿದ್ದಾನೆ

ಮೂರ್ಜಗದಿ—ಮೂಜಗದಿ, ಮೂರುಲೋಕಗಳಲ್ಲಿ (ಭೂಲೋಕ, ಭುವರ್ಲೋಕ, ಸ್ವರ್ಲೋಕ)

ಅಂದು —ದೇವತೆಗಳೂ ದಾನವರೂ ಸಮುದ್ರಮಥನ ಮಾಡಿದಂದು

ಕಂದರ್ಪನ —ತನ್ನ ತಪಸ್ಸನ್ನು ಕೆಡಿಸಲು ಬಂದ ಕಾಮನನ್ನು ಹಣೆಗಣ್ಣಿಂದ ಸುಟ್ಟು ಬೂದಿ ಮಾಡಿದನು

ಇಂದಿರೇಶ ಶ್ರೀರಾಮನ —ಶಿವನು ಪಾರ್ವತಿಗೆ ಮಾಡಿದ ಉಪದೇಶ, ರಾಮ ನಾಮಕ್ಕೆ ಸರಿಯಾದುದು ಯಾವುದೂ ಇಲ್ಲವೆಂದು ('ಶ್ರೀರಾಮ ರಾಮೇತಿ ರಾಮೇ ರಮೇ ಮನೋರಮೇ। ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ')

ಬಾಲಮೃಕಂಡಜನ —ಅಲ್ಪಾಯುವಾದ ಮಾರ್ಕಂಡೇಯನನ್ನು ಯಮನು ಕೊಂಡೊಯ್ಯಲು ಬಂದಾಗ

ವಾಲಯದಿ . —ವಲಯದಲ್ಲಿ, ಬ್ರಹ್ಮಾಂಡವಲಯದಲ್ಲಿ

ಜಾಲಮಾಡಿದ —ಮೋಹಿನಿಯಾಗಿ ವಿಷ್ಣು ಮೈದಳೆದಾಗ ಶಿವನು ಮೋಹಿಸಿದ ನೆಂದು ಕಥೆ , ಹರಿಹರಪುತ್ರನಾದ ಶಾಸ್ತಾರನ (ಅಯ್ಯಪ್ಪನ) ಜನ್ಮ ಈ ಸಂದರ್ಭ ದಲ್ಲೇ ಆದುದೆಂದು ಒಕ್ಕಣೆ



# ಕೂಡಲಿಪುರ

ಶಿವಮೊಗ್ಗ ಜಿಲ್ಲೆಯಲ್ಲಿ ಶಿವಮೊಗ್ಗೆಗೆ ಒಂಬತ್ತು ಮೈಲು ದೂರವಿರುವ ಈ ಊರು ತುಂಗಾ ಮತ್ತು ಭದ್ರಾ ಎಂಬೆರಡು ನದಿಗಳು ಕೂಡುವ ಸ್ಥಳ, ಹಾಗೆಂದೇ ಅದು ಕೂಡಲಿಯೆಂದು ಹೆಸರಾಯಿತು ಈ ಎರಡೂ ನದಿಗಳೂ ಪಶ್ಚಿಮಘಟ್ಟ ಸಾಲಿನಲ್ಲಿ ವರಾಹ ಪರ್ವತದ ಗಂಗಾಮೂಲ ಎಂಬೆಡೆ ಹುಟ್ಟಿ ಬೇರೆಬೇರೆಯಾಗಿ ಹರಿದು, ಕೂಡಲಿಯಲ್ಲಿ ಕೂಡಿಕೊಂಡು ಮುಂದೆ ತುಂಗಭದ್ರಾ ಎಂಬ ಹೆಸರಿನಿಂದ ಹರಿದು, ಮುಂದೆ ಐನೂರು ಮೈಲಿಗಳಷ್ಟು ದೂರದಲ್ಲಿ ಆಂಧ್ರಪ್ರದೇಶದ ಕರ್ನೂಲಿನ ಹತ್ತಿರ ಕೃಷ್ಣಾ ನದಿಯನ್ನು ಸೇರುತ್ತದೆ ವರಾಹಪರ್ವತವೇ ವರಾಹಾಕಾರದಲ್ಲಿದೆಯೆಂದೂ ಅದರ ಎರಡೂ ಕೋರೆದಾಡೆಗಳಿಂದ ತುಂಗ ಮತ್ತು ಭದ್ರಾ ನದಿಗಳೂ ಕಣ್ಣಿನಿಂದ ನೇತ್ರಾವತಿಯೆಂಬ ನದಿಯೂ ಹುಟ್ಟುವುವೆಂದು ನಂಬಿಕೆ ಈ ಊರಿನಲ್ಲಿ ನರಸಿಂಹನ ದೇವಾಲಯವಿದೆ, ರಾಮೇಶ್ವರ ದೇವಾಲಯವೂ ಇದೆ ಇಲ್ಲಿನ ಮಾಧ್ವಮಠವು ಆರ್ಯ ಅಕ್ಷೋಭ್ಯ ತೀರ್ಥರ ಪರಂಪರೆಯದು ವಿಜಯನಗರದ ಅರಸನಾಗಿದ್ದ ಕೃಷ್ಣದೇವರಾಯನು ಇಲ್ಲಿನ ನಾರಾಯಣಯತಿಗಳಿಗೆ (ರಘುಪತಿತೀರ್ಥರ ಶಿಷ್ಯರು) ಆರಗ ಸೀಮೆಯ ಐದು ಗ್ರಾಮಗಳನ್ನು ದಾನವಾಗಿ ಕೊಟ್ಟ ಶಾಸನವಿದೆ. ಇದರ ಕಾಲ 1527, ಪುರಂದರದಾಸರ ಕಾಲದಲ್ಲೇ ಇಲ್ಲಿ ಶೃಂಗೇರಿಯ ಶಾಖಾ ಮಠವೂ ಒಂದಿದೆ

ಘಂಪಾಳಿ ಝಂಪೆ

ತುಂಗೆ ಮಂಗಳೆ ತರಂಗೆ ಪ

ಹರಿಸರ್ವಾಂಗೆ ಜಯ ಜಯತು ಜಯ ಜಯ ತುಂಗಭದ್ರೆ ಅ

ಆದಿಯಲ್ಲೊಬ್ಬ ದೈತ್ಯ ಮೇದಿನಿಯ ಕದ್ದೊಯ್ದು
ಸಾಧಿಸುತ್ತಿರಲವನ ಬೆನ್ನಟ್ಟಿ ಬಿಡದೆ
ಛೇದಿಸುತಲವನ ಭೂಮಿಯನೆತ್ತಿ ಕಾಯ್ದಂಥ
ಆದಿವರಾಹನ ದಾಡೆಗಳಿಂದ ಬಂದೆ ೧

ಜಲವೆಲ್ಲ ಹರಿಮಯ ಶಿಲೆಯಲ್ಲ ಶಿವಮಯ
ಮಳಲು ಮಿಟ್ಟೆಗಳೆಲ್ಲ ಮಣಿಯ ಮಯವು
ಬೆಳೆದಿಪ್ಪ ದರ್ಭೆಗಳು ಸಾಕ್ಷಾತ್ತು ಬ್ರಹ್ಮಮಯ
ನಳಿನನಾಳವು ಸರ್ವವಿಷ್ಣುಮಯವು ೨

ಇದೆ ವೃಂದಾವನ ಇದೆ ಕ್ಷೀರಾಂಬುಧಿ
ಇದೆ ವೈಕುಂಠಕೆ ಸರಿಯೆಂದೆನಿಸಿದೆ
ಇದೆ ಬದರಿಕಾಶ್ರಮ ಇದೆ ವಾರಣಾಸಿಗೆ
ಅಧಿಕ ಫಲವನ್ನೀವ ದೇವಿ ೩

ಧರೆಗೆ ದಕ್ಷಿಣ ವಾರಣಾಸಿ ಎಂದೆನಿಸಿದೆ
ಪರಮ ಪವಿತ್ರ ಪಾವನ ಚರಿತೆ ನಿನ್ನ
ಸ್ಮರಣೆ ಮಾತ್ರದಿ ಕೋಟಿಜನ್ಮದಘವನು ಕಳೆವ
ಸರಿದು ಸಾಯುಜ್ಯ ಫಲವೀವ ದೇವಿ ೪

ಪರಮ ಭಕ್ತ ಪ್ರಹ್ಲಾದಗೊಲಿದು ಬಂದು
ನರಸಿಂಹ ಕ್ಷೇತ್ರವೆಂದೆನಿಸಿ ಮೆರೆದೆ
ಧರೆಯೊಳಧಿಕ ವರ ಕೂಡಲಿಪುರದಲ್ಲಿ
ವರದ ಪುರಂದರವಿಠಲನಿರಲು ಬಂದೆ ೫

# ಗದಗು

ಧಾರವಾಡದಿಂದ ಪೂರ್ವಕ್ಕೆ ಐವತ್ತು ಮೈಲಿಗಳಷ್ಟು ದೂರದಲ್ಲಿರುವ ಈ ಊರು ಬೆಟಗೇರಿಯ ನೆರೆಯಲ್ಲಿದೆ ಮಹಾಭಾರತದ ಭೀಷ್ಮರು ತಪಸ್ಸು ಮಾಡಿದುದೂ ದ್ವಾಪರಯುಗದಲ್ಲಿ ಜನಮೇಜಯ ರಾಜನು ಸರ್ಪಯಾಗ ಮಾಡಿದುದು ಇಲ್ಲೆ ಎಂಬ ಪುರಾಣ ಪ್ರಸಿದ್ಧಿಯಿದೆ ಹಿಂದೆ ಈ ಊರನ್ನು 'ಕ್ರತುಪುರ' (ಯಾಗ ಮಾಡಿದ ಊರು) ಎಂದೇ ಕರೆಯುತ್ತಿದ್ದರು ಇಲ್ಲಿನ ದೇವಾಲಯಗಳಲ್ಲಿ ತ್ರಿಕೂಟೇಶ್ವರ ಮತ್ತು ವೀರನಾರಾಯಣ ಇವರ ಗುಡಿಗಳು ಹೆಸರಾದವು ಕುಮಾರವ್ಯಾಸನೆಂದು ಪ್ರಸಿದ್ಧನಾದ ಕೋಳಿವಾಡದ ನಾರಣಪ್ಪನು ಇಲ್ಲಿನ ವೀರನಾರಾಯಣನ ಗುಡಿಯಲ್ಲಿಯೇ ಕುಳಿತು ತನ್ನ ಭಾರತ ಕಥಾಮಂಜರಿ ಎಂಬ ಕನ್ನಡ ಕಾವ್ಯವನ್ನು ರಚಿಸಿದನೆಂದು ಪ್ರತೀತಿ ಈ ಗುಡಿಯನ್ನು ಹೊಯ್ಸಳ ಅರಸ ವೀರಬಲ್ಲಾಳನು ಕಟ್ಟಿಸಿದನಂತೆ ವಿಜಯನಗರದ ಅರಸ ಇಮ್ಮಡಿ ಹರಿಹರನು 1379ರಲ್ಲಿ ಈ ದೇವಾಲಯಕ್ಕೆ ಇಪ್ಪತ್ತೆರಡು ಹಳ್ಳಿಗಳನ್ನು ದಾನಮಾಡಿದ ಶಾಸನವಿದೆ ವಿಜಯನಗರದ ಅರಸರು ಈ ದೇವಾಲಯಕ್ಕೆ ಶ್ರದ್ಧೆಯಿಂದ ನಡೆದುಕೊಳ್ಳುತ್ತಿದ್ದರು ಪುರಂದರದಾಸರ ಎರಡು ಕೃತಿಗಳು ಇಲ್ಲಿನ ವೀರನಾರಾಯಣನ ಸ್ತುತಿಗಳಾಗಿವೆ ಮೇಲೆ ಹೇಳಿದ ನಾರಣಪ್ಪನು (ಕುಮಾರವ್ಯಾಸ) ಪುರಂದರದಾಸರ ಸಮಕಾಲಿಕನೂ, ಸ್ನೇಹಿತನೂ ಆಗಿದ್ದನೆಂದು ಹೇಳುವುದುಂಟು ಪುರಂದರ ದಾಸರ 'ಆರೋಗಣೆಯ ಮಾಡೇಳಯ್ಯ' ಎಂಬ ಪದವು ನಾರಣಪ್ಪನು ಪುರಂದರದಾಸರ ಮನೆಗೆ ಅತಿಥಿಯಾಗಿ ಬಂದಾಗ ರಚಿಸಿದ್ದು ಎಂದೂ, ಇದೇ ಸಂದರ್ಭದಲ್ಲಿಯೇ ಅವರ 'ವೀರನಾರಾಯಣ ಸುಳಾದಿ'ಯೂ ರಚಿತವಾಯಿತೆಂದೂ ಹೇಳುತ್ತಾರೆ ಸುಳಾದಿಯ ಮಟ್ಟತಾಳದ ನುಡಿಯಲ್ಲೇನೋ 'ನೀ ಕವಿಯೆನಿಸಿಕೊಂಡೆ ಶಿಕಾರಿಪುರದ ವ್ಯಾಸನೆನಿಸಿದೆ ಎಂಬ ಮಾತಿದೆ ವಿಜಯನಗರದ ಅರಸ ಅಚ್ಯುತರಾಯನ ಶಿಲಾಶಾಸನವೊಂದು (1539ರದ್ದು) ವೀರನಾರಾಯಣನು ಕುಮಾರವ್ಯಾಸನಿಗೆ ವರವನ್ನು ನೀಡಿದುದನ್ನು ಹೇಳುತ್ತದೆ ಶಿಕಾರಿಪುರವೆಂದು ದಾಸರ ಪದದಲ್ಲಿರುವುದು ಗದಗವು ಬಂಕಾಪುರಶಿಕಾರದ ಒಂದು ಅಂಗವಾಗಿದ್ದುದನ್ನು ಸೂಚಿಸುತ್ತದೆಂದು ಹೇಳುತ್ತಾರೆ ಪುರಂದರದಾಸರ ಮತ್ತು ನಾರಣಪ್ಪನ ಸಖ್ಯದ ಅಥವಾ ಸಮಾಗಮದ ವಿಚಾರವಾಗಿ ಏನನ್ನೂ ಖಚಿತವಾಗಿ ಹೇಳಲಾಗುವುದಿಲ್ಲ.

ಧ್ರುವ

ಹರಿಶರಣರೆನ್ನ ಮನೆಯ ಮೆಟ್ಟಲು ಮನೆ ಪಾವನ್ನವಾಯಿತು
ಹರಿ ಶರಣರೆನ್ನ ಕೂಡೆ ಮಾತಾಡಲು ತನು ಪಾವನವಾಯಿತು
ಹರಿಶರಣರೆನ್ನ ಮನೆಗೆ ಬಂದರೆ ಯೆನ್ನ ಇಪ್ಪತ್ತೊಂದು ಕುಲ ಪಾವನ್ನವಾಯಿತು
ಹರಿಶರಣರೆನಗೆ ಗತಿ ಹರಿಶರಣರೆನಗೆ ಬಲೆ
ಪುರಂದರ ವಿಠಲ ಗದುಗಿನ ವೀರನಾರಾಯಣ ೧

ಮಟ್ಟೆ

ಭಾರತ ಆಗಾಮಿಯಗೋಚರನೆಂದು
ವಿಚಾರಿಸೆ ಮನುಜರಿಗೆ ಗೋಚರನಪ್ಪಂತೆ ವೀರನಾರಾಯಣ
ನೀ ಕವಿಯೆಂದೆನಿಸಿಕೊಂಡೆ ಶಿಕಾರವುರವ್ಯಾಸನೆನಿಸಿದೆ
ಶಕ್ರ ತನ್ನ ಸಿರಿ ಪುರಂದರವಿಠಲ ಗದುಗಿನ ವೀರನಾರಾಯಣ
ನಿನಗೇನು ಪಿರಿಯವ್ರೋ ? ೨

ರೂಪಕ

ಬದರಿಕಾಶ್ರಮದೊಳಿದ್ದು ಬಾದರಾಯಣನೆಂದನಿಸಿಕೊಂಬಂತೆ
ಗದುಗೆಂಬ ಪುರದೊಳಿದ್ದು ವೀರನಾರಾಯಣಸ್ವಾಮಿ
ತ್ರಿಭುವನೇಶ ಪುರಂದರವಿಠಲ ೩

ಝಂಪೆ

ಯದುಕುಲದಲುದಿಸಿ ಗೋಪಾಲರ ಕೂಡ್ಯಾಡಿ
ಗದುಗನಾಡಿ ಆಡಿಯಾಡಿದಂದಿಂದಾ
ಸದುಭಕುತ ಪ್ರಿಯ ಪುರಂದರವಿಠಲ
ಗದುಗಿನ ವೀರನಾರಾಯಣಸ್ವಾಮಿ ೪

ತ್ರಿವಿಡೆ

ತ್ರಿಭುವನವ ಸಂಹರಿಸಿ ನಿನಗೆ ಹೊದ್ದಿಕ್ಕಿಲ್ಲದ ಕಾರಣ
ವಿಭೂತಿಯೊಳಗಣ ಗದುಗನಾದೆ
ಗದುಗಿನ ವೀರನಾರಾಯಣ ಸ್ವಾಮಿ ಪುರಂದರವಿಠಲ ೫

ಅಟ್ಟ

ಭಾರತಮಲ್ಲ ಭೀಷ್ಮನೆಂದೆಂಬರು
ಭಾರತಮಲ್ಲ ಅರ್ಜುನನೆಂದೆಂಬರು
ಭಾರತಮಲ್ಲ ಕರ್ಣನೆಂದೆಂಬರು
ಭಾರತಮಲ್ಲರಿವರ್ಯಾರಲ್ಲ
ಭಾರತಮಲ್ಲ ಪುರಂದರವಿಠಲ ಗದುಗಿನ ವೀರನಾರಾಯಣಸ್ವಾಮಿ ೬

ಏಕ

ಭೂಭಾರವನಿಳುಹಿ ಅಜ ಭವ ಇಂದ್ರಾದಿಗಳಿಗೆ ಶೋಭನವನಿತ್ತೆ
ಈ ಬುಧ ಜನರಿಗೆ
ಶ್ರೀ ಭೂಸುರರಿಗೆ ಶೋಭನವನಿತ್ತೆ ಶ್ರೀ ಪುರಂದರವಿಠಲ
ಗದುಗಿನ ವೀರನಾರಾಯಣ
ನಿನಗೇನು ಓರಿಯವ್ವೋ ಶೋಭನವನಿತ್ತೆ ೭

ಜೊತೆ

ಪದುಮನಾಭ ಸಿರಿ ಪುರಂದರವಿಠಲ
ಗದುಗಿನ ವೀರನಾರಾಯಣಸ್ವಾಮಿ ೮

[ಇದು ವೀರನಾರಾಯಣ ಸುಳಾದಿಯೆಂದು ಹೆಸರಾಗಿದೆ ]

ಗತಿ—ದಾರಿ.
ದೆಶೆ—ದಿಕ್ಕು

## ೮೯

ಮುಖಾರಿ — ಝಂಪೆ

ಆರೋಗಣೆಯ ಮಾಡೇಳಯ್ಯ

ಸರಸಿಜ ಭವಾಂಡದೊಳ್ ಮೇರು ಮಂಟಪದಿ
ಸುರದಿನ ಕರಾದೀಪ್ತ ಜ್ಯೋತಿಶ್ಚಕ್ರ
ತರಣಿಮಂಡಲವ ಪೋಲುವ ರತುನದ ಹೊನ್ನ
ಹರಿವಾಣದಲಿ ದೇವಿ ಬಡಿಸಿಹಳಯ್ಯ ೧

ಅಲ್ಲ ಹೇರಳೆ ನಿಂಬೆ ಮೆಣಸು ಏಲಕ್ಕಿಕಾಯ್
ನೆಲ್ಲಿಯಂಬಟೆಕಾಯಿ ಚೆಲುವ ಮಾಗಾಯಿ
ಬಿಲ್ತ್ರ ಮುಂಗ್ರುಳಿ ಸೊಂಡೆ ಚೆಲುವ ಪಾಪಟೆಕಾಯಿ
ಎಲ್ಲ ಧರಾದೇವಿ ತಾ ಬಡಿಸಿಹಳೆಯ್ಯ ೨

ಹಪ್ಪಳ ಸಂಡಿಗೆ ವಿವಿಧ ಶಾಖಂಗಳ
ತುಪ್ಪ, ಸಕ್ಕರೆ ಹಣ್ಣು ವಿವಿಧ ಫಲಗಳು
ಕರ್ಪೂರ ಕಸ್ತೂರಿ ಬೆರೆಸಿದ ರಸಾಯನವ
ಒಪ್ಪಿಸಿ ಶ್ರೀದೇವಿ ಒಡಿಸಿಹಳಯ್ಯ ೩

ಎಣ್ಣೋರಿಗತಿರಸ ಬೆಲ್ಲ ಮಂಡಿಗೆಯ
ಅನ್ನ ಪಾಯಸ ಪರಮಾನ್ನಗಳ
ಸಣ್ಣ ಶಾವಿಗೆಯ ಶ್ಯಾಲ್ಯಾನ್ನವನು ನಿಮಿಷದೊಳ್
ಬಣ್ಣಿಸಿ ದುರ್ಗಾದೇವಿ ಬಡಿಸಿಹಳಯ್ಯ ೪

ನೀ ನಿತ್ಯತೃಪ್ತನಹುದು ನಿನ್ನುದರದೊಳ್
ನಾನಾ ಜನರು ಬಂದು ಉಣ್ಣಬೇಕು
ಶ್ರೀನಾಥ ಗದುಗಿನ ವೀರನಾರಾಯಣ
ಅನಾಥ ಬಂಧುವೆ ಪುರಂದರವಿಠಲಾ ೫

[ಹರಿಗೆ ಶ್ರೀದೇವಿ ಭೂದೇವಿ, ದುರ್ಗಾದೇವಿಯರು ಉಣಬಡಿಸುವ ಬಗೆಯನ್ನು ಬಣ್ಣಿಸಿದ್ದಾರೆ ]

ಆರೋಗಣೆಯ ಮಾಡು—ಊಟಮಾಡು

ಸರಸಿಜಭವಾಂಡದೊಳ್ —ಬ್ರಹ್ಮಾಂಡದಲ್ಲಿ, ಭೂಮಂಡಲದ ಮಧ್ಯದಲ್ಲಿರುವ ಮೇರು ಪರ್ವತವೇ ಮಂಡಪವಾಗಿ, ಸೂರ್ಯನೇ ಬೆಳಕಾಗಿ, ಸೂರ್ಯಮಂಡಲ ದಂತೆ ಹೊಳೆಯುವ ರತ್ನಖಚಿತವಾದ ಬಂಗಾರದ ಹರಿವಾಣದಲ್ಲಿ ಲಕ್ಷ್ಮಿಯು ನಿನಗೆ ಉಣಬಡಿಸಿದ್ದಾಳೆ

ಅಲ್ಲ—ಹಸಿಶುಂಠಿ

ಮಾಗಾಯಿ—ಮಾವಿನಕಾಯಿ

ಎಣ್ಣೋರಿಗೆ—(ಎಣ್ಣೂರಿಗೆ) ಎಣ್ಣೆಯಲ್ಲಿ ಕರಿದ ತಿನಿಸು

[ಶ್ರೀದೇವಿ, ಭೂದೇವಿ, ದುರ್ಗಾದೇವಿಯರು ಲಕ್ಷ್ಮಿಯ ಮೂರು ರೂಪಗಳು ಲಕ್ಷ್ಮಿಯು ಬ್ರಹ್ಮಾಂಡ ವ್ಯಾಪಾರವನ್ನು ನಡೆಸುವುದು ಈ ಮೂರು ರೂಪಗಳಿಂದ ಇವು ಅಪ್ರಾಕೃತ ಸತ್ತ್ವ, ರಜಸ್ಸು, ತಮಸ್ಸುಗಳ ಅಭಿವ್ಯಕ್ತಿ ]



# ಘಟಿಕಾಚಲ

ಆಂಧ್ರಪ್ರದೇಶಕ್ಕೆ ಸೇರಿದಂತೆ ಶೋಲಿಂಗೂರಿನಿಂದ ಆರುಮೈಲಿ ದೂರದಲ್ಲಿ ಘಟಿಕಾಚಲ ಕ್ಷೇತ್ರವಿದೆ ಶ್ರೀವೈಷ್ಣವರ ನೂರೆಂಟು ತಿರುಪತಿ ಗಳಲ್ಲಿ ಇದೊಂದು (ತಿರುಕ್ಕೈಡಿಗ್ಗೈ) ಇಲ್ಲಿ ನರಸಿಂಹನ ಗುಡಿಯಿರುವ ವೆಟ್ಟ ಪ್ರಸಿದ್ಧವಾದುದು ಲಕ್ಷ್ಮಿಯು ನಾರಾಯಣನನ್ನು ಕುರಿತು ತಪಸ್ಸು ಮಾಡಿದ ಸ್ಥಳ ಇದೆಂದು ಪ್ರತೀತಿ ಇದರ ಎದುರಿಗೇ ಮತ್ತೊಂದು ಬೆಟ್ಟವಿದ್ದು ಅದರ ಮೇಲೆ ಹನುಮಂತನ ಗುಡಿಯೊಂದಿದೆ ಇದು ಬಹಳ ಕಾರಣಿಕವುಳ್ಳದೆಂದು ಹೆಸರಾಗಿದೆ ಪುರಂದರದಾಸರು ಈ ಹನುಮಂತನನ್ನು ತಮ್ಮ ಪದದಲ್ಲಿ ಕೊಂಡಾಡಿದ್ದಾರೆ ಇಲ್ಲಿ ಹನುಮಂತನು ಯೋಗ ಪಟ್ಟವಲ್ಲಿ ಕುಳಿತಿರುವುದೂ ಶಂಖಚಕ್ರಧಾರಿಯಾಗಿರುವುದೂ ವಿಶೇಷ ಹನುಮಂತನಿಗೆ ಭಾವಿ ಬ್ರಹ್ಮಪಟ್ಟವೆಂದೂ ಸಾಂಪ್ರದಾಯಿಕವಾದ ಕಲ್ಪನೆಯಿರುವುದನ್ನು ಪದದಲ್ಲಿ ಪ್ರಸ್ತಾಪಿಸಿದ್ದಾರೆ

ನಾದನಾಮಕ್ರಿಯ (ಕೇದಾರಗೌಳ) ಆದಿ

ಘಟಿಕಾಚಲದಿ ನಿಂತ ಶ್ರೀ ಹನುಮಂತ ಪ

ಘಟಿಕಾಚಲದಿ ನಿಂತ ಪಟು ಹನುಮಂತನ
ಪರನೆಯ ಮಾಡಲುತ್ಕಟದಿ ಪ್ರೇರೆಪೆನೆಂದು ಅ

ಚತುರ ಯುಗದಿ ತಾನು ಮುಖ್ಯಪ್ರಾಣನು
ಚತುರಮುಖನಯ್ಯನ
ಚತುರ ಮೂರುತಿಗಳನು ಚತುರತನದಿ ಭಜಿಸಿ
ಚತುರ್ಮುಖನಾಗಿ ಜಗಕೆ ಚತುರ್ವಿಧ ಫಲ ಕೊಡುತೆ ೧

ಸರಸಿಜ ಭವಗೋಸ್ಕರ ಕಲ್ಮಷದೂರ
ವರ ಚಕ್ರತೀರ್ಥ ಸರ
ಮೆರೆವಾಚಲದಿ ನಿತ್ಯ ನರಹರಿಗೆದುರಾಗಿ
ಸ್ಥಿರಯೋಗಾಸನದಿ ಕರೆದು ವರಗಳ ಕೊಡುತೆ ೨

ಶಂಖ ಚಕ್ರವ ಧರಿಸಿ ಭಕ್ತರ ಮನಃ
ಪಂಕವ ಪರಿಹರಿಸಿ
ಪಂಕಜನಾಭ ಶ್ರೀ ಪುರಂದರವಿಠಲನ
ಬಿಂಕದ ಸೇವಕ ಸಂಕಟ ಕಳೆಯುತ ೩

ಪರನೆಯ—ನಾಮಜಪವನ್ನು
ಚತುರ ಯುಗದಿ—ನಾಲ್ಕು ಯುಗಗಳಲ್ಲಿ (ಕೃತ, ತ್ರೇತಾ, ದ್ವಾಪರ, ಕಲಿ)
ಚತುರಮುಖನಯ್ಯನ ಚತುರ ಮೂರುತಿಗಳನು—ಚತುರ್ಮುಖ ಬ್ರಹ್ಮನ ತಂದೆಯಾದ ನಾರಾಯಣನ ನಾಲ್ಕು ವ್ಯೂಹಮೂರ್ತಿಗಳು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ
ಚತುರ್ಮುಖನಾಗಿ—ಮುಂಬರುವ ಕಲ್ಪದಲ್ಲಿ ಬ್ರಹ್ಮನಾಗಿ
ಚತುರ್ವಿಧ ಫಲ—ಧರ್ಮ, ಅರ್ಥ, ಕಾಮ, ಮೋಕ್ಷ
ಭಕ್ತರ ಮನಃಪಂಕವ—ಮೊರೆಹೊಕ್ಕವರ ಮನಸ್ಸಿನ ಕೊಳೆಗಳನ್ನು

# ತಿರುಪತಿ

ಈಗ ಆಂಧ್ರಪ್ರದೇಶಕ್ಕೆ ಸೇರಿದಂತೆ ಚಿತ್ತೂರು ಜಿಲ್ಲೆಯಲ್ಲಿ ಪೂರ್ವ ಘಟ್ಟಗಳ ಸಾಲಿನಲ್ಲಿರುವ ತಿರುಮಲೆ ಜಗತ್ಪ್ರಸಿದ್ಧವಾದ ತಾಣ ಕೃತಯುಗದಲ್ಲಿ ವೃಷಭಾದ್ರಿಯೆಂದೂ, ತ್ರೇತಾಯುಗದಲ್ಲಿ ಅಂಜನಾದ್ರಿಯೆಂದೂ, ದ್ವಾಪರಯುಗದಲ್ಲಿ ಶೇಷಾಚಲವೆಂದೂ, ಕಲಿಯುಗದಲ್ಲಿ ವೇಂಕಟಾಚಲವೆಂದೂ ಈ ಕ್ಷೇತ್ರಕ್ಕೆ ಪುರಾಣಪ್ರಸಿದ್ಧಿಯಿದೆ ಇಲ್ಲಿ ಏಳು ಬೆಟ್ಟಗಳ ಸಾಲಿದ್ದು ಇದನ್ನು ಸಪ್ತಗಿರಿಯೆಂದೂ ಕರೆಯುತ್ತಾರೆ ಈ ಬೆಟ್ಟಸಾಲು ಏಳುಹೆಡೆಗಳ ಆದಿಶೇಷನೆಂದೇ ನಂಬಿಕೆ ಅದರ ತಲೆಯ ಭಾಗವೇ ತಿರುಮಲೆಯ ವೇಂಕಟೇಶ್ವರ ಸ್ಥಾನವೆಂದೂ ನಡುವಣಸ್ಥಾನ ಅಹೋಬಲ ನರಸಿಂಹನ ಎಡೆಯೆಂದೂ, ಬಾಲದ ಭಾಗ ಶ್ರೀಶೈಲ ಮಲ್ಲಿಕಾರ್ಜುನಕ್ಷೇತ್ರವೆಂದೂ ಕಲ್ಪನೆ ಬೆಟ್ಟದ ಕೆಳಗಿನ ಊರು ತಿರುಪತಿಯೆನಿಸಿಕೊಳ್ಳುತ್ತದೆ ಬೆಟ್ಟದ ಹೆಸರು ವೇಂಗಡ (ವೇಂಕಟ) ಅದೇ ತಿರು–ಮಲೆ (ಶ್ರೀಪರ್ವತ) ಎರಡನ್ನೂ ಕೂಡಿಸಿ ತಿರುಮಲೆ–ತಿರುಪತಿಯೆಂದು ಕರೆಯುವುದು ವಾಡಿಕೆ ಅದರ ಒಡೆಯನೇ ಕ್ಷೇತ್ರದ ಅಧಿದೈವ , ವೇಂಕಟೇಶ್ವರನನ್ನು ಶ್ರೀನಿವಾಸನೆಂದೂ, ಮಹಾರಾಷ್ಟ್ರದ ಕಡೆ ಬಾಲಾಜಿಯೆಂದೂ ಕರೆಯುತ್ತಾರೆ ತುಂಬ ಪ್ರಾಚೀನವಾದ ಬೆಟ್ಟದ ಗುಡಿಯನ್ನು ಕ್ರಿಸ್ತಾಬ್ದದ ಮೊದಲ ಶತಕಗಳಲ್ಲಿದ್ದ ಆಳ್ವಾರರು ಸಂದರ್ಶಿಸಿ ತಮ್ಮ ಪಾಶುರಗಳಲ್ಲಿ ಹಾಡಿ ಹೊಗಳಿದ್ದಾರೆ ನೂರೆಂಟು ತಿರುಪತಿಗಳಲ್ಲಿ ಇದೇ ಪ್ರಧಾನವಾದುದು ರಾಮಾನುಜಾಚಾರ್ಯರು ಇಲ್ಲಿಗೆ ಬಂದಿದ್ದು ದೇವಾಲಯದ ನಡಾವಳಿಯನ್ನು ವ್ಯವಸ್ಥೆಗೊಳಿಸಿದರು ಪುರಂದರದಾಸರ ಗುರುಗಳಾದ ವ್ಯಾಸತೀರ್ಥರು ಬೆಟ್ಟದ ಮೇಲೆ ಹನ್ನೆರಡು ವರ್ಷಗಳಿದ್ದುಕೊಂಡು ದೇವರ ನಿತ್ಯಾರ್ಚನೆಯನ್ನು ತಾವೇ ನಡೆಸುತ್ತಿದ್ದರೆಂದು ಮಾಧ್ವರಲ್ಲಿ ಪ್ರತೀತಿಯಿದೆ ವಿಜಯನಗರದ ಅರಸರಿಗೆ ತುಂಬ ಆದರದ ಗುಡಿ , ಕೃಷ್ಣದೇವರಾಯನಂತೂ ಇಲ್ಲಿಗೆ ಆಗಾಗ ಒರುತ್ತಿದ್ದು ದೇವರಿಗೆ ಹಲವಾರು ಸೇವೆ ಸಲ್ಲಿಸಿದ ಶಾಸನಗಳಿವೆ ಹರಿದಾಸರಿಗೂ ಇದಕ್ಕಿಂತ ಮಿಗಿಲಾದ ಪುಣ್ಯಸ್ಥಳವಿಲ್ಲ 'ತಿರುಪತಿಯ ತಿಮ್ಮಪ್ಪ ನೆಂದರೆ ಅವರ ಅಭಿಮಾನದ ದೈವ ಎಲ್ಲ ಹರಿದಾಸರೂ ತಿರುಪತಿಯ ಹೆಗ್ಗಳಿಕೆಯನ್ನೂ, ಇಲ್ಲಿನ ದೇವರ ಸೊಬಗನ್ನೂ ತಮ್ಮ ಕೃತಿಗಳಲ್ಲಿ ಮನಸಾರೆ ಕೊಂಡಾಡಿದ್ದಾರೆ ಪುರಂದರದಾಸರೂ ಇಲ್ಲಿಗೆ ಅಡಿಗಡಿಗೆ ಒರುತ್ತಿದ್ದಂತೆ ಪ್ರತೀತಿಯಿದೆ , ಅವರ ಅನೇಕ ಪದಗಳು ಈ ಕ್ಷೇತ್ರದಲ್ಲೇ ರಚಿತವಾದುವು 'ಕಲೌ ವೇಂಕಟನಾಯಕಃ' (ಕಲಿಯುಗದಲ್ಲಿ ವೇಂಗಡದೊಡೆಯನೇ ದೇವರು) ಎಂಬುದು ಅವರ ನಿಲುವು

ಉದಯರಾಗ ಝಂಪೆ

ಈ ಜೀವವಿದ್ದು ಫಲವೇನು, ಚೆಲುವ ಪ

ರಾಜೀವಲೋಚನನ ನೆನೆಯದ ಪಾಪಿ ತನುವಿನಲಿ ಅ

ಅರುಣ ಉದಯದಲೆದ್ದು ಹರಿಯ ಸ್ಮರಣೆಯ ಮಾಡಿ
ಗುರುಹಿರಿಯರನು ಮನದಿ ನೆನೆದು ನೆನೆದು
ಪರಮ ಸುಖಿಯಾಗಿ ನದಿಯೊಳು ಮಿಂದು ರವಿಗರ್ಘ್ಯ
ವೆರೆಯದ ಕಡು ಪಾಪಿಯಾದ ಈ ತನುವಿನಲಿ ೧

ಹೊನ್ನ ಕಲಶದಲಿ ಅಗ್ರೋದಕವ ಶ್ರೀ ಹರಿಗೆ
ಚೆನ್ನಾಗಿ ಅಭಿಷೇಕವನ್ನು ಮಾಡಿ
ರನ್ನದುಡಿಗೆಗಳುಡಿಸಿ ರತ್ನಗಳನಳವಡಿಸಿ
ಕಣ್ಣಿನಲಿ ನೋಡಲರಿಯದ ಕಪಟಿ ತನುವಿನಲಿ ೨

ತುಲಸಿ ದಳಗಳು ಪುಷ್ಪಮಾಲಿಕೆಯು ನವರತ್ನ
ಹೊಳೆವ ಕೌಸ್ತುಭವು ಕೊರಳಲ್ಲಿ ಪದಕ
ನಳಿನಾಕ್ಷಗಿಟ್ಟು ಕರ್ಪೂರದಾರತಿಯೆತ್ತಿ
ಕಣ್ಣಿನಲಿ ನೋಡಲರಿಯದ ಕಪಟ ತನುವಿನಲಿ ೩

ಪರಿಪರಿಯ ಭಕ್ಷ್ಯ ಪಾಯಸ ಶಾಕ ಶಾಲ್ಯಾನ್ನ
ಹರುಷದಿಂ ದಧಿಖಂಡ ಕ್ಷೀರ ಘೃತವು
ಪರಮಪುರುಷಗೆ ತಂದು ನೈವೇದ್ಯವನೆ ಮಾಡಿ
ಹರುಷದಲಿ ಕೈಮುಗಿಯಲರಿಯದ ಕಪಟ ತನುವಿನಲಿ ೪

ಉರಗಾದ್ರಿಯಲಿ ಚಂದ್ರ ಪುಷ್ಕರಣಿ ಮೊದಲಾದ
ಪರಿಪರಿ ತೀರ್ಥದಲಿ ಮುಣುಗಿ ಮುಣುಗಿ
ತಿರುವೆಂಗಳಪ್ಪ ಶ್ರೀ ಪುರಂದರವಿಠ್ಠಲನ
ಕಣ್ಣಿನಲಿ ನೋಡಲರಿಯದ ಕಪಟ ತನುವಿನಲಿ ೫

ರಾಜೀವಲೋಚನ—ತಾವರೆಗಣ್ಣಿನವ
ಅರ್ಘ್ಯ—ಪೂಜೆಯ ಸಲುವಾಗಿ ನೀಡುವ ಬೊಗಸೆ ನೀರು
ಅಗ್ರೋದಕ—ದೇವರ ಪೂಜೆಗೆಂದೇ ಮೀಸಲಾಗಿರಿಸಿದ ನೀರು
ಕೌಸ್ತುಭ—ವಿಷ್ಣುವಿನ ಎದೆಯಲ್ಲಿರುವ ಆಭರಣ ವಿಶೇಷ
ಭಕ್ಷ್ಯ—ತಿನಿಸು
ಶಾಕ—ಕಾಯಿಪಲ್ಲೆ
ದಧಿಖಂಡ—ಹೆಪ್ಪುಗಟ್ಟಿದ ಮೊಸರು, ಕ್ಷೀರ–ಹಾಲು, ಘೃತ–ತುಪ್ಪ
ಉರಗಾದ್ರಿ—ಶೇಷಾಚಲ, ತಿರುಮಲೆಯ ಏಳು ಬೆಟ್ಟಗಳಲ್ಲಿ ಒಂದು
ಮುಣುಗಿ ಮುಣುಗಿ—ಮುಳುಗಿ ಮುಳುಗಿ, ಮತ್ತೆ ಮತ್ತೆ ಸ್ನಾನಮಾಡಿ
ತಿರುವಂಗಳಪ್ಪ—ತಿರುವೇಂಗಡದ ಒಡೆಯ, ವೆಂಕಟಾಚಲಪತಿ



ಗರ್ಭಗುಡಿಯ ಮೇಲಿನ ಒಂಗಾರವಿಮಾನ, ತಿರುಪತಿ

## ೯೨

ಮುಖಾರಿ ಅಟ್ಟ

ಕಂಡೆ ಕಂಡೆ ಸ್ವಾಮಿಯ ಬೇಡಿಕೊಂಡೆ ಪ

ಕಂಡೆ ತಿರುಪತಿ ವೆಂಕಟೇಶನ
ಕಾರಣಾತ್ಮಕ ಸಾರ್ವಭೌಮನ
ಕಾಮಿತಾರ್ಥಗಳೀವ ದೇವನ
ಕರುಣಾನಿಧಿ ಎಂದೆನಿಸಿ ಮೆರೆವನ ಅ

ಕೋಟಿ ಸೂರ್ಯಪ್ರಕಾಶವೆನಿಪ ಕಿ
ರೀಟವನು ಮಸ್ತಕದಿ ಕಂಡೆನು
ನೋಟಕಾಶ್ಚರ್ಯವಾದ ನಗೆ ಮುಖ
ನೊಸಲಿನಲಿ ತಿರುಮಣಿಯ ಕಂಡೆನು
ಸಾಟಿಯಿಲ್ಲದೆ ಚತುರ ಹಸ್ತದಿ
ಶಂಖ ಚಕ್ರ ಗದಾಬ್ಜ ಕಂಡೆನು
ಬೂಟಕದ ಮಾತಲ್ಲ ಕಾಣಿರೊ
ಭೂರಿ ದೈವರ ಗಂಡನಂಘ್ರಿಯ ೧

ತಪ್ಪುಗಾಣಿಕೆ ಕಪ್ಪಗಳನು
ಸಪ್ತದ್ವೀಪಗಳಿಂದ ತರಿಸುವ
ಉಪ್ಪು ಓಗರಗಳನೆ ಮಾರಿಸಿ
ಉಚಿತದಿಂದಲಿ ಹಣವ ಗಳಿಸುವ
ಇಪ್ಪತ್ತು ದುಡ್ಡಿಗೆ ಸೇರು ತೀರ್ಥವ
ಒಪ್ಪದಲಿ ಕ್ರಯ ಮಾಡಿಕೊಡಿಸುವ
ಸರ್ಪಶಯನನ ಸಾರ್ವಭೌಮನ
ಅಪ್ಪ ವೆಂಕಟರಮಣನಂಘ್ರಿಯ ೨

ಉರದಿ ಸಿರಿದೇವಿಯಿರಲು ಕಂಡೆನು
ಉನ್ನತದಿ ಕೌಸ್ತುಭವ ಕಂಡೆನು
ಗರುಡ ಕಿನ್ನರ ನಾರದಾದಿ ಗಂ
ಧರ್ವರೆಡ ಬಲದಲ್ಲಿ ಕಂಡೆನು
ತೆರತೆರದಿ ಭಕ್ತರಿಗೆ ವರಗಳ
ಕರೆದು ಕೊಡುವುದ ನಾನು ಕಂಡೆನು
ಶರಧಿಶಯನನ ಸಾರ್ವಭೌಮನ
ವರದ ಪುರಂದರವಿಠಲನಂಘ್ರಿಯ ೩

ತಿರುಮಣಿ—ತಿರುಮಣ್ಣು, ಹಣೆಯ ಮೇಲೆ ದರಿಸುವ ಬಿಳಿಯ ನಾಮ

ಚತುರಹಸ್ತದಿ—ಇಲ್ಲಿಯ ದೇವರಿಗೆ ನಾಲ್ಕು ಕೈಗಳಿದ್ದರೂ ಶಂಖ-ಚಕ್ರಗಳಷ್ಟೇ ಕೈಲಿರುವ ಆಯುಧಗಳು, ದಾಸರು ಹೇಳಿರುವ ಗದೆ-ಪದ್ಮಗಳು ಇಲ್ಲ ಸಾಂಪ್ರದಾಯಿಕವಾದ ಒಂದು ಒಕ್ಕಣೆಯನ್ನು ದಾಸರು ಇಲ್ಲಿ ಕಾಣಿಸಿದ್ದಾರಷ್ಟೆ

ಭೂರಿದೈವರ ಗಂಡ—ಹಲವು ಕ್ಷುದ್ರದೇವತೆಗಳಿಗೆ ಒಡೆಯ

ತಪ್ಪುಗಾಣಿಕೆ—ತಪ್ಪು ಕಾಣಿಕೆ, ಹರಕೆ ಹೊತ್ತು ಅದನ್ನು ನಡೆಸದಿರುವುದು ತಪ್ಪು, ಅದಕ್ಕಾಗಿ ಸಲ್ಲಿಸುವ ದಂಡ

ಸಪ್ತದ್ವೀಪಗಳಿಂದ—ಎಲ್ಲೆಲ್ಲಿಂದಲೋ

ಓಗರ—ಅನ್ನ

ಉರದಿ ಸಿರಿದೇವಿ—ಇಲ್ಲಿ ದೇವರ ಎದೆಯ ಮೇಲೆ ಲಕ್ಷ್ಮಿಯ ಮೂರ್ತಿಯಿರುವ ಆಭರಣವನ್ನು ತೊಡಿಸುತ್ತಾರೆ, ಇದು ವಕ್ಷಃಸ್ಥಲ ಲಕ್ಷ್ಮಿಯೆಂದು ಹೆಸರಾಗಿದೆ

ಉನ್ನತದಿ ಕೌಸ್ತುಭವ—ಎದೆಯ ಮೇಲ್ಭಾಗದಲ್ಲಿ ಕೌಸ್ತುಭವೆಂಬ ಒಡವೆಯನ್ನು



ನವರೋಜು ಆದಿ

ನಂಬಿದೆ ನಿನ್ನ ಪಾದವ
ವೆಂಕಟರಮಣ ನಂಬಿದೆ ನಿನ್ನ ಪಾದವ ಪ

ನಂಬಿದೆ ನಿನ್ನ ಪಾದಾಂಬುಜಯುಗಳವ
ಚಂದದಿ ಸಲಹೋ ಮಂದರಧರನೆ ಅ

ತಂದೆಯು ನೀನೆ, ತಾಯಿಯು ನೀನೆ
ಬಂಧುವು ಬಳಗವು ನೀನೆ
ಬಂದ ದುರಿತವೆಲ್ಲ ಪೊಂದಿಕೊಳ್ಳದಂತೆ
ಬಂದೆನ್ನ ಸಲಹೊ ಮುಕುಂದ ಮುರಾರಿ ೧

ಚಿಕ್ಕಂದು ಮೊದಲು ನಾನು ನಿನ್ನಯ ಪಾದ
ಹೊಕ್ಕು ಜೀವಿಸುತಿಹೆನು
ಫಕ್ಕನೆ ಜ್ಞಾನವಕ್ಕರದಿಂದಲಿ ಕೊಡು
ಮಕ್ಕಳ ಮಾಣಿಕ್ಯ ರುಕ್ಮಿಣಿಯರಸ ೨

ಮರೆತು ನಾ ಮಾಯದೊಳು, ಮುಳುಗಿದೆ ಮಾಯ
ವರಿತು ಅರಿಯದಾದೆ
ಮರೆಯದೆ ಎನ್ನನು ಸಲಹೊ ಕೃಪಾನಿಧಿ
ವರದ ಶ್ರೀ ವೇಂಕಟ ಪುರಂದರವಿಠ್ಠಲ ೩

ಹೊಂದಿಕೊಳ್ಳದಂತೆ—ಬಂದೊದಗದಂತೆ
ಅಕ್ಕರದಿಂದಲಿ—ಅಕ್ಕರೆಯಿಂದಲಿ

ಖರಹರಪ್ರಿಯ ಏಕ

ತಿರುಪತಿ ವೆಂಕಟರಮಣ, ನಿನಗೇತಕೆ ಬಾರದು ಕರುಣ ಪ
ನಂಬಿದೆ ನಿನ್ನಯ ಚರಣ, ಪರಿಪಾಲಿಸಬೇಕೊ ಕರುಣ ಅ

ಅಳಗಿರಿಯಿಂದಲಿ ಬಂದಾ ಸ್ವಾಮಿ
ಅಂಜನಗಿರಿಯಲಿ ನಿಂದ
ಕೊಳಲೂದೊ ಧ್ವನಿ ಚಂದಾ ನಮ್ಮ
ಕುಂಡಲರಾಯ ಮುಕುಂದ ೧

ಬೇಟೆಯಾಡುತ ಬಂದಾ ಸ್ವಾಮಿ
ಬೆಟ್ಟದ ಮೇಲೆ ನಿಂದಾ
ನೀಟುಗಾರ ಗೋವಿಂದಾ ಅಲ್ಲಿ
ಜೇನು ಸಕ್ಕರೆಯನು ತಿಂದಾ ೨

ಮೂಡಲಗಿರಿಯಲಿ ನಿಂತ ಮುದ್ದು
ವೆಂಕಟಪತಿ ಬಲವಂತ
ಈಡಿಲ್ಲ ನಿನಗೆ ಶ್ರೀಕಾಂತಾ ಈ
ರೇಳು ಲೋಕಕನಂತ ೩

ಆಡಿದರೆ ಸ್ಥಿರವಪ್ಪ ಆ
ಬದ್ಧಗಳಾಡಲು ಒಪ್ಪ
ಬೇಡಿದ ವರಗಳನಿಪ್ಪ ನಮ್ಮ
ಮೂಡಲಗಿರಿ ತಿಮ್ಮಪ್ಪ ೪

ಅಪ್ಪವು ಅತಿರಸ ಮೆದ್ದ ಸ್ವಾಮಿ
ಅಸುರರ ಕಾಲಲಿ ಒದ್ದ
ಸತಿಯರ ಕೂಡಾಡುತಲಿದ್ದ ಸ್ವಾಮಿ
ಸಕಲ ದುರ್ಜನರನು ಗೆದ್ದ ೫

ಬಗೆಬಗೆ ಭಕ್ಷ್ಯ ಪರಮಾನ್ನ ನಾನಾ
ಬಗೆಯ ಸಕಲ ಶಾಲ್ಯಾನ್ನ
ಬಗೆಬಗೆ ಸೊಬಗು ಮೋಹನ್ನ ನಮ್ಮ
ನಗೆಮುಖದ ಪ್ರಸನ್ನ ೬

ಕಾಶೀ ರಾಮೇಶ್ವರದಿಂದ ಅಲ್ಲಿ
ಕಾಣಿಕೆ ಬರುವುದೆ ಚಂದ
ದಾಸರ ಕೂಡೆ ಗೋವಿಂದ ಅಲ್ಲಿ
ದಾರಿ ನಡೆವುದೇ ಚೆಂದ ೭

ಎಲ್ಲ ದೇವರ ಗಂಡ ಅವ
ಚಿಲ್ಲರೆ ದೈವರ ಮಿಂಡ
ಒಲ್ಲಿದರಿಗೆ ಉದ್ದಂಡ ಶಿವನ
ಬಿಲ್ಲ ಮುರಿದ ಪ್ರಚಂಡ ೮

ಕಾಸು ತಪ್ಪಿದರೆ ಪಟ್ಟಿ ಬಡ್ಡಿ
ಕಾಸುಬಿಡದೆ ಗಂಟು ಕಟ್ಟಿ
ದಾಸನೆಂದರೆ ಬಿಡ ಗಟ್ಟಿ ನಮ್ಮ
ಕೇಸಕ್ಕ ತಿಮ್ಮಪ್ಪಸೆಟ್ಟಿ ೯

ದಾಸರ ಕಂಡರೆ ಪ್ರಾಣ ತಾ
ಧರೆಯೊಳಗಧಿಕ ಪ್ರವೀಣ
ದ್ವೇಷಿಯ ಗಂಟಲ ಗಾಣ ನಮ್ಮ
ದೇವಗೆ ನಿತ್ಯಕಲ್ಯಾಣ ೧೦

ಮೋಸ ಹೋಗುವನಲ್ಲಯ್ಯ ಒಂದು
ಕಾಸಿಗೆ ಒಡ್ಡುವ ಕೈಯ
ಏಸು ಮಹಿಮೆಗಾರನಯ್ಯ ನಮ್ಮ
ವಾಸುದೇವ ತಿಮ್ಮಯ್ಯ ೧೧

ಚಿತ್ತವಧಾನ ಪರಾಕು ನಿನ್ನ
ಚಿತ್ತದ ದಯವೊಂದೆ ಸಾಕು
ಸತ್ಯವಾಹಿನಿ ನಿನ್ನ ವಾಕು
ನೀನು ಸಕಲ ಜನರಿಗೆ ಬೇಕು ೧೨

ಅಲ್ಲಲ್ಲಿ ಪರಿಷೆಯ ಗುಂಪು ಮ
ತ್ತಲ್ಲಲ್ಲಿ ತೋಪಿನ ತಂಪು
ಅಲ್ಲಲ್ಲಿ ಸೊಗಸಿನ ಸೊಂಪು ಮ
ತ್ತಲ್ಲಲ್ಲಿ ಪರಿಮಳದಿಂಪು ೧೩

ಅಲ್ಲಲ್ಲಿ ಜನಗಳ ಕೂಟ ಮ
ತ್ತಲ್ಲಲ್ಲಿ ಬ್ರಾಹ್ಮಣರೂಟ
ಅಲ್ಲಲ್ಲಿ ಪಿಡಿದ ಕೋಲಾಟ ಮ
ತ್ತಲ್ಲಿಂದ ಊರಿಗೆ ಓಟ ೧೪

ಪಾಪ ವಿನಾಶಿನಿ ಸ್ನಾನ ಹರಿ
ಪಾದೋದಕವೇ ಪಾನ
ಕೋಪತಾಪಗಳ ನಿಧಾನ ನಮ್ಮ
ಪುರಂದರವಿಠಲನ ಧ್ಯಾನ ೧೫

[ಈ ಪದದಲ್ಲಿ ತಿರುಮಲೆ–ತಿರುಪತಿಯ ವರ್ಣನೆಯಿದೆ , ಯಾತ್ರೆಯ ವಿವರಗಳೂ ಬಂದಿವೆ ಅಳಗಿರಿ, ಅಂಜನಗಿರಿ, ಮೂಡಲಗಿರಿ ಇವೆಲ್ಲ ತಿರುಮಲೆಯ ಹೆಸರುಗಳು ಅಳಗಿರಿಯು ಕಡಪಾ ಬಳಿಯಿರುವ ಪುಷ್ಪಗಿರಿಯೆಂದೂ ಹೇಳುತ್ತಾರೆ ]

ಕುಂಡಲರಾಯ—ಕೊಂಡವೆಂದರೆ ಬೆಟ್ಟ , ತೆಲುಗು 'ಕೊಂಡಲವಾಡ' ಎನ್ನುವುದರ ಕನ್ನಡ ರೂಪ ಇದು

ನೀಟುಗಾರ—ನೇರಾಗಿ ನಡೆಯುವವನು (ನೇಟು)

ಈಡಿಲ್ಲ—ಸಮರಿಲ್ಲ

ತಿಮ್ಮಪ್ಪ—ತಿರುಮಲೆಯಪ್ಪ ಎನ್ನುವುದರ ಮೋಟಕುರೂಪ

ಅಪ್ಪ–ಅತಿರಸ—ಭಕ್ಷ್ಯ ವಿಶೇಷ

ದಾಸರೆ ಕೂಡೆ —ಅಲ್ಲಿ ಯಾತ್ರಿಕರು ಬೆಟ್ಟವೇರುವಾಗ 'ಗೋವಿಂದ' 'ಗೋವಿಂದ' ಎಂದು ಗಟ್ಟಿಯಾಗಿ ಹೇಳುತ್ತಿರುವುದು ವಾಡಿಕೆ

ಬಲ್ಲಿದರಿಗೆ ಉದ್ದಂಡ—ಅವನ ಹಿರಿಮೆಯನ್ನು ಬಲ್ಲವರಿಗೆ ಹಿರಿಯ , ಉತ್ ದಂಡ ಎಂದರೆ ಎತ್ತಿರುವ ಕೋಲು ಎಂದು ಅಕ್ಷರಾರ್ಥ , ಅಧಿಕಾರಿಗಳ ದಂಡವು ಶಿಕ್ಷೆ–ರಕ್ಷಣೆಗಳೆರಡಕ್ಕೂ ಸರಿ ತಪ್ಪನ್ನು ಬಿಡಿಸಿ ಒಪ್ಪನ್ನು ಮಾನ್ಯಮಾಡಿ ಕಾಪಾಡುವವನು

ಪಟ್ಟಿಬಡ್ಡಿ—ಲೆಕ್ಕವಿಟ್ಟ ಬಡ್ಡಿ ಹಣ

ದೇವರಿಗೆ ನಿತ್ಯಕಲ್ಯಾಣ—ಇಲ್ಲಿ ಗುಡಿಯಲ್ಲಿ ಪ್ರತಿ ದಿನವೂ ದೇವರಿಗೆ ಕಲ್ಯಾಣೋತ್ಸವ ಸೇವೆ ನಡೆಯುತ್ತದೆ

ನಿಧಾನ—ನಿಧನ ; ಕೋಪತಾಪಗಳು ಅಡಗುವುವು

ಮಧ್ಯಮಾವತಿ　　　　　　　　　　　　　　　　　　ಆದಿ

ಇಂದು ನಾನೇನು ಸುಕೃತವ ಮಾಡಿದೆನೋ　　ಪ
ಮಂಗಳ ಮಹಿಮ ವೇಂಕಟ ಬಂದ ಮನೆಗೆ　　ಅ

ಹಾರ ಕೇಯೂರ ಹೊನ್ನುಂಗುರ ಬೆರಳು
ಹಾರದ ನಡುವೆ ಹಾಕಿದವೇಳು ಪದಕ
ತೋರಮುತ್ತಿನ ಕಂಠಮಾಲೆ ಸರಿಗೆಯು ಕೋ
ನೇರಿವಾಸ ವೇಂಕಟ ಬಂದ ಮನೆಗೆ　　೧

ಕಾಲಪೆಂಡಿಗೆಯು ರಕ್ಕಸರ ಹಾವಿಗೆಯು
ಮೇಲಾದ ವಜ್ರನವರತ್ನದ ಮಕುಟ
ವೀಳ್ಯದ ಬಾಯಿ ಕರ್ಪೂರದ ಕರಡಿಗೆಯು
ಮೇಲುಗಿರಿವಾಸ ವೇಂಕಟ ಬಂದ ಮನೆಗೆ　　೨

ಬಿಗಿದು ಸುತ್ತಿದ ವಲ್ಲಿ ಬಿಡಿಮುತ್ತಿನ ಕಂಠಿ
ಬಿಗಿ ಮುಗುಳುನಗೆ ದಂತ ಎಸೆವಂಥ ಪಙ್ತಿ
ತೆಗೆದುಟ್ಟ ಪೀತಾಂಬರ ಉಡುಗೆ ಕರಾರಿ
ಯದುಗಿರಿವಾಸ ವೇಂಕಟ ಬಂದ ಮನೆಗೆ　　೩

ನೊಸಲ ಸುತ್ತಿದ ಪಟ್ಟೆ ಎಸೆವೊ ಕಸ್ತೂರಿಯು
ವಶವಾದ ಅಮೃತದ ರಸ ಸವಿಮಾತು
ಎಸಳುಕಂಗಳ ನೋಟ ಹೊಸ ಪಂಚಬಾಣ
ಸುಕುಮಾರ ಸೊಬಗು ವೇಂಕಟ ಬಂದ ಮನೆಗೆ　　೪

ಕಲಿಯುಗದಲಿ ಶಂಖಚಕ್ರವ ಧರಿಸಿ
ಹದಿನಾಲ್ಕು ಲೋಕ ತನ್ನುದರದಲ್ಲಿಟ್ಟು
ಗರುಡನ ಏರಿ ಮೂರ್ಜಗವ ಮೋಹಿಸುವ
ಪುರಂದರವಿಠಲ ವೇಂಕಟ ಬಂದ ಮನೆಗೆ　　೫

ಕೇಯೂರ—ಮೇಲು ತೋಳಿನ ಮೇಲೆ ತೊಡುವ ಬಳೆ

ತೋರಮುತ್ತಿನ—ದಪ್ಪನಾದ ಮುತ್ತುಗಳ

ಕೋನೇರಿ—ಕೋಣ ಏರಿ , ಕೋನೇರು ಎಂಬುದು ಮೂಲೆಗಳನ್ನು ಚೆನ್ನಾಗಿ ಓರಣ ಮಾಡಿ ಕಲ್ಲುಹಾಸಿದ ಕೆರೆ ಅಥವಾ ಕೊಳ , ಇದನ್ನೇ ಮರಾಠಿಯಲ್ಲಿ ಕೋನೇರಿ ಎಂದು ಹೆಸರಾಗಿ ಬಳಸುವ ವಾಡಿಕೆಯಿದೆ ಬೆಟ್ಟದ ಮೇಲೆ ಕೋನೇರಿ ಯೆಂದರೆ ಸ್ವಾಮಿಪುಷ್ಕರಿಣಿ ಎಂಬ ಕೊಳ

ಪೆಂಡಿಗೆ—ಕಾಲಿಗೆ ತೊಡುವ ಗೆಜ್ಜೆಯಂಥ ಒಡವೆ , ಪೆಂಡೆ

ಮೇಲುಗಿರಿ—ಏಳು ಬೆಟ್ಟಗಳಲ್ಲಿ ಎತ್ತರವಾಗಿರುವ ಬೆಟ್ಟ , ವೇಂಕಟಾಚಲ , ದೇವರ ಗುಡಿಯಿರುವುದು

ವಲ್ಲಿ—ಉತ್ತರೀಯ, ಮೇಲುಹೊದಿಕೆ

ಯದುಗಿರಿವಾಸ—ಯದುಗಿರಿ ಎನ್ನುವುದು ಮೇಲುಕೋಟೆಯಲ್ಲಿರುವ ಬೆಟ್ಟದ ಹೆಸರು , ಇಲ್ಲಿ ಅದನ್ನು ಹೆಸರಿಸಿರುವುದರ ಸ್ವಾರಸ್ಯ ತಿಳಿಯದು

ನೊಸಲ ಸುತ್ತಿದ —ಇಲ್ಲಿಯ ದೇವರಿಗೆ ಹಣೆಯ ಮೇಲೆಲ್ಲ ಪಚ್ಚಕರ್ಪೂರವನ್ನು ಚೆನ್ನಾಗಿ ಬಳಿದು, ನಡುವೆ ತಿಲಕದಂತೆ ಕಸ್ತೂರಿಯನ್ನು ಮೂಡಿಸುತ್ತಾರೆ

ಪಂಚಬಾಣ—ಮನ್ಮಥ , ಅವನಂತೆ ಮೋಹಕವಾದ

ಮೂರ್ಜಗವ—ಮೂಜಗವನ್ನು, ಮೂರು ಜಗತ್ತುಗಳನ್ನು



ಸೌರಾಷ್ಟ್ರ ಅಟ್ಟ

ಸಕಲ ದುರಿತಗಳ ಪರಿಹಾರ ಮಾಡಿದ್ಯೋ ವೇಂಕಟೇಶ ಪ

ಭಕುತಿಗೊಲಿದು ಬಂದು ಭಕ್ತರ ಕಾಯ್ದಿಯೋ ವೇಂಕಟೇಶ ಅ

ಮತ್ಸ್ಯಾವತಾರದಿ ನಾಲ್ಕು ವೇದವ ತಂದ್ಯೋ ವೇಂಕಟೇಶ
ಪೃಥ್ವೀಧರವ ಪೊತ್ತು ಭೃತ್ಯರ ನೀ ಕಾಯ್ದ್ಯೋ ವೇಂಕಟೇಶ ೧

ಧರೆಯನೊಯ್ದನ ಕೋರೆದಾಡೆಯಿಂದಲಿ ಕೊಂದ್ಯೋ ವೇಂಕಟೇಶ
ತರಳಗೊಲಿದು ನೀ ಕಂಭದಿಂದಲಿ ಬಂದ್ಯೋ ವೇಂಕಟೇಶ ೨

ಭೂಮಿದಾನವ ನೀಡಿದವನ ಬಾಗಿಲ ಕಾಯ್ದ್ಯೋ ವೇಂಕಟೇಶ
ಭೂಮಿಪಾಲರನಳಿದು ಭಾರ್ಗವನೆನಿಸಿದ್ಯೋ ವೇಂಕಟೇಶ ೩

ದಶಶಿರನನು ಕುಟ್ಟಿ ಶಶಿಮುಖಿಯಳ ತಂದ್ಯೋ ವೇಂಕಟೇಶ
ಅಸುರೆಯ ಸಂಹರಿಸಿ ಕಂಸನ ಮಡುಹಿದ್ಯೋ ವೇಂಕಟೇಶ ೪

ಅಥವಜನರಿಗೆ ಬೋಧಿಸಿ ಬತ್ತಲೆ ನಿಂದ್ಯೋ ವೇಂಕಟೇಶ
ಕುದುರೆಯೇರಿ ಕಲ್ಕಿರೂಪವ ತಾಳಿದ್ಯೋ ವೇಂಕಟೇಶ ೫

ಹರಿದಾಸರ ಮೇಲೆ ಒಲಿದು ಬೇಗನೆ ಬಂದ್ಯೋ ವೇಂಕಟೇಶ
ವರದ ಪುರಂದರವಿಠಲ ನಮೋ ನಮೋ ವೇಂಕಟೇಶ ೬

[ಇಲ್ಲಿ ದಶಾವತಾರದ ಒಕ್ಕಣೆಯಿದೆ ]

ಪೃಥ್ವೀಧರವ—ಬೆಟ್ಟವನ್ನು, ಮಂದರಪರ್ವತವನ್ನು (ಕೂರ್ಮಾವತಾರದಲ್ಲಿ)
ಧರೆಯನೊಯ್ದನ —(ವರಾಹಾವತಾರದಲ್ಲಿ),
ತರಳಗೊಲಿದು —(ನರಸಿಂಹಾವತಾರದಲ್ಲಿ)
ಭೂಮಿದಾನವ .—(ವಾಮನಾವತಾರದಲ್ಲಿ)
ಭೂಮಿಪಾಲರೆ .—(ಪರಶುರಾಮಾವತಾರದಲ್ಲಿ)

ದಶಶಿರಸನು —(ರಾಮಾವತಾರದಲ್ಲಿ)
ಅಸುರೆಯು —ಪೂತನಿಯನ್ನು (ಕೃಷ್ಣಾವತಾರದಲ್ಲಿ)
ಅಧಮಜನರಿಗೆ —(ಬೌದ್ಧಾವತಾರದಲ್ಲಿ)



ದ್ವಾರಗೋಪುರ, ತಿರುಪತಿ

## ೬೭

ಮಧ್ಯಮಾವತಿ — ಆದಿ

ಶರಣು ಶರಣು ನಿನಗೆಂಬೆನೊ ವಿಠಲ — ಪ

ಕರುಣಾನಿಧಿಯೆಂಬೆ ಕಾಯಯ್ಯ ವಿಠಲ — ಅ

ಶಿಶುವಾಗಿ ಜನಿಸಿದ್ಯೊ ಶ್ರೀರಾಮವಿಠಲ
ಶಶಿಧರನುತ ಗೋಪಿಕಂದನೆ ವಿಠಲ
ಅಸುರೆ ಪೂತನಿ ಕೊಂದ ಶ್ರೀಕೃಷ್ಣವಿಠಲ
ಕುಸುಮನಾಭ ಸಿರಿವರ ಮುದ್ದುವಿಠಲ — ೧

ಅರಸಿ ರುಕ್ಮಿಣಿಗೆ ನೀ ಅರಸನೊ ವಿಠಲ
ಸರಸಿಜ ಸಂಭವ ಸನ್ನುತ ವಿಠಲ
ನಿರುತ ಇಟ್ಟಿಗೆಮೇಲೆ ನಿಂತ್ಯೊ ನೀ ವಿಠಲ
ಚರಣ ಸೇವೆಯನಿತ್ತು ಕಾಯಯ್ಯ ವಿಠಲ — ೨

ಕಂಡೆ ಗೋಪುರ ವೆಂಕಟ ಪ್ರಭು ವಿಠಲ
ಅಂಡಜವಾಹನ ಹೌದೊ ನೀ ವಿಠಲ
ಪಾಂಡುನಂದನ ಪರಿಪಾಲನೆ ವಿಠಲ
ಪುಂಡರೀಕಾಕ್ಷ ಶ್ರೀ ಪುರಂದರ ವಿಠಲ — ೩

[ಈ ಪದದಲ್ಲಿ ತಿರುಮಲೆಯ ವೆಂಕಟೇಶ್ವರನನ್ನೂ ಪಂಢರಪುರದ ಪಾಂಡುರಂಗ ವಿಟ್ಠಲನನ್ನೂ ಒಂದೇ ದೈವವೆಂದು ಬಗೆದು ಸ್ತುತಿಸಿದೆ ]

ಇಟ್ಟಿಗೆ ಮೇಲೆ ನಿಂತ್ಯೊ—ಭಕ್ತನಾದ ಪುಂಡಲೀಕನು ತಾಯಿತಂದೆಯರ ಸೇವೆಯಲ್ಲಿದ್ದಾಗ ಪಾಂಡುರಂಗನು ಬರಲು ಅವನಿಗಾಗಿ ಹತ್ತಿರವಿದ್ದ ಒಂದು ಇಟ್ಟಿಗೆಯನ್ನೇ ಅವನೆಡೆ ಸರಿಸಿದನೆಂದೂ, ಪಾಂಡುರಂಗನು ಆ ಇಟ್ಟಿಗೆಯ ಮೇಲೆ ನಿಂತನೆಂದೂ ಸ್ಥಳಪುರಾಣ , ಈಗಲೂ ವಿಟ್ಠಲನು ಇಟ್ಟಿಗೆಯ ಮೇಲೆ ನಿಂತಿರುವಂತೆಯೇ ಮೂರ್ತಿಲಕ್ಷಣ

ಸೌರಾಷ್ಟ್ರ ಅಟ್ಟ

ವೆಂಕಟರಮಣ ವೇದಾಂತ ನಿನ್ನಯ ಪಾದ
ಪಂಕಜ ಕಂಡಮೇಲೆ ಮಂಕು ಮಾನವರ ಬೇಡಿಸುವುದು
ಉಚಿತವೆ, ಶಂಖ ಚಕ್ರಾಂಕಿತನೆ ಪ

ಕ್ಷೀರಸಾಗರವ ಪೊಂದಿರ್ದವ ಮಥಿಸಿದ
ನೀರಮಜ್ಜಿಗೆ ಕಾಣನೆ ಚಾರುಕಲ್ಪವೃಕ್ಷದಡಿಯೊಳು ಕುಳಿತಿರ್ದು
ತೋರತಿಂತ್ರಿಣಿ ಒಯುಕೆಯೋ ೧

ಸಾರೆ ಭೂಪಾಲನ ಸೂನುವೆನಿಸಿಕೊಂಡು
ಸೂರೆಗೊಳಿಪ ತಿರುಕೇ ನಾರಿ ಲಕ್ಷ್ಮೀಕಾಂತ ನಿನ್ನ ಪೊಂದಿರ್ದಗೆ
ದಾರಿದ್ರ್ಯದಟ್ಟುಳಿಯೇ ೨

ಸುರನದಿಯೊಳು ಮಿಂದು ಸುಖಿಯಾದ ಬಳಿಕಿನ್ನು
ದುರಿತಗಳಟ್ಟುಳಿಯೋ ಪರಮಪುರುಷ ನಿನ್ನ ಪೊಂದಿದ್ದ ದಾಸರ್ಗೆ
ಅರಿಗಳ ಭೀತಿಯುಂಟೇ ೩

ಗರುಡನ ಮಂತ್ರವ ಕಲಿತು ಜಪಿಸುವಗೆ
ಉರಗನ ಹಾವಳಿಯೋ ಹದಿಯಿಕ್ಕೆ ಪಕ್ಕದಿ ಮನೆ ಕಟ್ಟಿದಾತಗೆ
ಕರಿಗಳ ಭೀತಿಯುಂಟೇ ೪

ಪರಮಪುರುಷ ಸುಗುಣಾತ್ಮಕನೆ ನಿನ್ನ
ಮೊರೆಹೊಕ್ಕೆನಯ್ಯ ಕಾಯೊ ಉರಗಾದ್ರಿ ವಾಸ ಶ್ರೀಪುರಂದರವಿಠ್ಠಲ
ಪರಬ್ರಹ್ಮ ನಾರಾಯಣ ೫

[ಹಿರಿದಾದ ದೈವವನ್ನು ನಂಬಿದಮೇಲೆ ಹುಲುಮಾನವರ ಆಸರೆಯನ್ನು ಅರಸ ಬೇಕಾದುದಿದೆಯೆ ? ಪಾಲ್ಗಡಲನ್ನೇ ಪಡೆದವನಿಗೆ ನಿರುಮಜ್ಜಿಗೆಯ ಹಂಬಲವೇಕೆ ? ಕಲ್ಪವೃಕ್ಷದಡಿ ಕುಳಿತಾಗ ಒಣ ಹುಣಸೇಹಣ್ಣಿನ ಒಲುಕೆಯೆ ? ಚಕ್ರವರ್ತಿಯ ಮಗ ನಾದವನಿಗೆ ಭಿಕ್ಷೆಯ ಊಟವೆ ? ಲಕ್ಷ್ಮಿಯು ಗಂಡನನ್ನೇ ಮೊರೆಹೊಕ್ಕಮೇಲೆ ಒಡತನ ವೆಲ್ಲಿಯದು ? ಗಂಗೆಯಲ್ಲಿ ಸ್ನಾನಮಾಡಿದಮೇಲೆ ಪಾಪಗಳು ಉಳಿಯುವುವೇ ? ದೇವರನ್ನು ನಂಬಿದವರಿಗೆ ಹಗೆಗಳ ಹೆದರಿಕೆಯೇ ? ಗರುಡಮಂತ್ರ ಬಲ್ಲವರಿಗೆ ಹಾವಿನ ಅಂಜಿಕೆಯೇ ? ಸುತ್ತಲೂ ಕಂದಕವನ್ನು ತೋಡಿ ನಡುವೆ ಮನೆ ಕಟ್ಟಿಕೊಂಡ ಮೇಲೆ ಆನೆಗಳ ಹೆದರಿಕೆಯೆ ?

ಹರಿದಾಸರಲ್ಲಿ ನರಸೇವೆ ಮಾಡಬಾರದೆಂಬ ವಿಧಿಯಿದೆ ಪುರಂದರದಾಸರ ಗುರುಗ ಳಾದ ವ್ಯಾಸರಾಯಸ್ವಾಮಿಗಳೂ ಒಂದು ಪದದಲ್ಲಿ

ಪರಮಪದವೀವ
ಸಿರಿಕೃಷ್ಣನಿರಲಾಗಿ
ನರರ ಸೇವಿಸಬೇಡಪ್ಪೊ
ಎಂದೇದಿಗು

ಎಂದು ಉಪದೇಶಿಸಿದ್ದಾರೆ ]



ಧನ್ಯಾಸಿ — ಆದಿ

ಪಂಕಜಮುಖಿಯರೆಲ್ಲರು ಒಂದು ಲಕ್ಷ್ಮೀ
ವೇಂಕಟರಮಣಗಾರುತಿ ಎತ್ತಿರೆ ॥ ಪ ॥

ಮತ್ಸ್ಯಾವತಾರಗೆ ಮಂದರೋದ್ಧಾರಗೆ
ಅಚ್ಚರಿಯಿಂದ ಭೂಮಿ ತಂದವಗೆ
ಹೆಚ್ಚಾದ ಉಕ್ಕಿನ ಕಂಭದಿಂದಲಿ ಬಂದ
ಲಕ್ಷ್ಮೀನರಸಿಂಹಗಾರುತಿಯೆತ್ತಿರೆ ॥ ೧ ॥

ವಾಮನ ರೂಪಿಲಿ ದಾನ ಬೇಡಿದವಗೆ
ಪ್ರೇಮದಿ ಕೊಡಲಿಯ ಪಿಡಿದವಗೆ
ರಾಮಚಂದ್ರನಾಗಿ ದಶಶಿರಸು ಕೊಂದ
ಸ್ವಾಮಿ ಶ್ರೀ ಕೃಷ್ಣಗಾರುತಿಯೆತ್ತಿರೆ ॥ ೨ ॥

ಬತ್ತಲೆ ನಿಂತವಗೆ ಬೌದ್ಧಾವತಾರಗೆ
ಉತ್ತಮ ಅಶ್ವವನೇರಿದಗೆ
ಭಕ್ತರ ಸಲಹುವ ಪುರಂದರವಿಠಲಗೆ
ಮುತ್ತೈದೆಯರಾರುತಿಯೆತ್ತಿರೆ ॥ ೩ ॥

[ಇಲ್ಲಿ ದಶಾವತಾರದ ಉಲ್ಲೇಖವಿದೆ ]

ಮಧ್ಯಮಾವತಿ ಅಟ್ಟ

ಬಂದು ನಿಂದಿಹ ನೋಡಿ, ಭೂತಳದಿ ವೇಂಕಟ
ಇಂದಿರೆಯ ಒಡಗೂಡಿ, ಒಪ್ಪುವ ನಿರಂತರ
ಪೊಂದಿ ಭಜನೆಯ ಮಾಡಿ, ಆನಂದಗೂಡಿ ಪ

ವಂದಿಸುತ ಮನದೊಳಗೆ ಇವನಡಿ
ದ್ವಂದ್ವ ಭಜಿಸಲು ಬಂದ ಭಯಹರ
ಇಂದುದರ ಸುರವೃಂದನುತ ಗೋ
ವಿಂದ ಘನ ದಯಾಸಿಂಧು ಶ್ರೀಹರಿ ಅ

ದ್ವಾರದೆಡಬಲದಲ್ಲಿ ಜಯವಿಜಯರಿಬ್ಬರು
ಸೇರಿ ಸೇವಿಪರಲ್ಲಿ ಸನಕಾದಿನುತ ಶೃಂ
ಗಾರ ನಿಧಿ ಅಂಗದಲ್ಲಿ ಮುತ್ತಿನಲಿ ಶೋಭಿಪ
ಹಾರ ಪೊಂದಿಹುದಲ್ಲಿ ವಿಸ್ತಾರದಲ್ಲಿ
ವಾರವಾರಕೆ ಪೂಜೆಗೊಂಬುವ
ಹಾರ ಮಕುಟಾಭರಣ ಕುಂಡಲಧಾರ ಭುಜ ಕೇ
ಯೂರಭೂಷಿತ ಮಾರಪಿತ ಗುಣ ಮೋಹನಾಂಗ
ಚಾರು ಪೀತಾಂಬರ ಕಟಿ ಕರವೀರ ಕ
ಲ್ಹಾರಾದಿ ಪೂವಿನ ಹಾರ ಕೊರಳೊಳು ಎಸೆವು
ತಿರೆ ವದನಾರವಿಂದನ ನಗುತ ನಲಿಯುತ ೧

ಎಲ್ಲ ಭಕುತರಭೀಷ್ಟ ಕೊಡುವುದಕೆ ತಾ ಕೈ
ವಲ್ಯಸ್ಥಾನವ ಬಿಟ್ಟ ಶೇಷಾದ್ರಿ ಮಂದಿರ
ದಲ್ಲಿ ಲೋಲುಪ ದಿಟ್ಟ ಸೌಭಾಗ್ಯನಿಧಿಗೆದುರಿಲ್ಲ
ಭುಜಬಲ ಪುಷ್ಟ ಕಸ್ತೂರಿಯಿಟ್ಟ
ಚೆಲ್ವ ಫಣೆಯಲಿ ಶೋಭಿಸುವ ಸಿರಿ
ವಲ್ಲಭನ ಗುಣ ಪೊಗಳದಿಹ ಜಗ ಖುಲ್ಲರೆದೆದಲ್ಲಣ ಪರಾಕ್ರಮ
ಮಲ್ಲಮರ್ದನ ಮಾತುಳಾರಿ ಫಲ್ಗುಣನ ಸಖ ಪ್ರಕಟನಾಗಿಹ
ದುರ್ಲಭನು ಅಘದೂರ ಬಹುಮಾಂಗಲ್ಯ ಹೃದಯನು ಸೃಷ್ಟಿಗೆ
ಉಲ್ಲಾಸ ಕೊಡುತಲಿ ಚಂದದಿಂದಲಿ ೨

ಪದಕ ಕೌಸ್ತುಭಧಾರ ಸರಿಗೆಯು ಕಂದರೆ
ಸುದರುಶನದರಧಾರ ಸುಂದರ ಮನೋಹರ
ಪದಯುಗದಿ ನೂಪುರ ಇಟ್ಟಿಹನು
ಸನ್ಮುನಿ ಹೃದಯಸ್ಥಿತ ಗಂಭೀರ ಬಹು ದಾನಶೂರ
ವಿಧಿ ಭವಾದ್ಯರ ಪೊರೆವ ದಾತನು
ತುದಿ ಮೊದಲು ಮಧ್ಯಮ ವಿರಹಿತನು ಉದುಭವಾದಿಗಳೀವ ಕರ್ತನು
ತ್ರಿದಶಪೂಜಿತ ತ್ರಿಭುವನೇಶ ಸಮವಿಲಾಸದಿ ಸ್ವಾಮಿತೀರ್ಥದಿ
ಉದಿಸುತಿರೆ ಸಿರಿ ಮಹಿಳೆ ಸಹಿತದಿ ಪದುಮನಾಭ ಪುರಂದರವಿಠ್ಠಲ
ಪ್ರತಿ ವರುಷ ಬ್ರಹ್ಮೋತ್ಸವದಿ ಮೆರೆಯುತ ೩

ಅಡಿದ್ವಂದ್ವ—ಎರಡು ಕಾಲಡಿಗಳು ಪದದ್ವಂದ್ವ

ಇಂದುಧರಸುರವೃಂದ—ಚಂದ್ರನನ್ನು ಜಟೆಯಲ್ಲಿ ಧರಿಸಿದ ಶಿವನೇ ಮೊದಲಾದ ದೇವತೆಗಳ ಗುಂಪು

ವಾರವಾರಕೆ—ಮೊದಲಿಗೆ ಪ್ರತಿ ಶುಕ್ರವಾರವೂ ದೇವರಿಗೆ ತಿರುಮಂಜನ ಮೊದಲಾದ ವಿಶೇಷಪೂಜೆಗಳು ನಡೆಯುವ ವಾಡಿಕೆಯಿದ್ದಿತು , ಈಗಲೂ ವಾರದಲ್ಲಿ ಒಂದು ದಿನ ಮಾತ್ರ (ಶುಕ್ರವಾರ) ತಿರುಮಂಜನ, ಆದರೆ ಉಳಿದಂತೆ ಎಲ್ಲ ಪೂಜೆಗಳೂ ಪ್ರತಿದಿನವೂ ನಡೆಯುತ್ತವೆ

ಕೈವಲ್ಯಸ್ಥಾನವ ಬಿಟ್ಟು—' ತ್ಯಕ್ತ್ವಾವೈಕುಂಠಮುತ್ತಮಂ । ಸ್ವಾಮಿಪುಷ್ಕರಿಣೀ ತೀರೇ ರಮಯಾ ಸಹ ಮೋದತೇ ॥' ಎಂಬ ಶ್ಲೋಕದ ಛಾಯೆ

ಖುಲ್ಲರೆದೆ ದಲ್ಲಣ—ಕ್ಷುದ್ರಜನರ ಎದೆಯನ್ನು ತಲ್ಲಣಗೊಳಿಸುವವ

ಮಾತುಳಾರಿ—ಕೃಷ್ಣಾವತಾರದಲ್ಲಿ ಕಂಸನನ್ನು ಕೊಂದವನು, ಚಾಣೂರಾದಿ ಮಲ್ಲರನ್ನು ನಿಗ್ರಹಿಸಿದವನು

ಫಲ್ಗುಣನ ಸಖ—ಅರ್ಜುನನ ಸ್ನೇಹಿತ

ಅಘದೂರ—ಪಾಪಗಳಿಂದ ದೂರವಾಗಿರುವವನು

ಸುದರುಶನದರಧಾರ—ಸುದರ್ಶನವೆಂಬ ಹೆಸರಿನ ಚಕ್ರವನ್ನು (ಸುದರುಶನದ ಅರ) ಹೊತ್ತವನು.

ವಿಧಿಭವಾದ್ಯರ—ಬ್ರಹ್ಮ, ಶಿವ ಮೊದಲಾದವರನ್ನು

ಉದುಭವಾದಿಗಳಿಲವ—ಉದ್ಭವ ಎಂದರೆ ಸೃಷ್ಟಿ, ಅಭ್ಯುದಯ, ಇವಕ್ಕೆ ಕಾರಣ ನಾದವನು

ತ್ರಿದಶ ಪೂಜಿತ—ದೇವತೆಗಳಿಂದ ಪೂಜಿಸಲ್ಪಡುವವನು

ತ್ರಿಭುವನೇಶ—ಮೂರು ಲೋಕಗಳಿಗೂ ಒಡೆಯನಾದವನು

ಸದುವಿಲಾಸದಿ—ಸದ್ವಿಲಾಸದಿಂದ, ಸಾತ್ವಿಕಗುಣದ ಉತ್ಕರ್ಷೆಯಿರುವ ಲೀಲೆ ಗಳಿಂದ ಕೂಡಿದ

ಸ್ವಾಮಿತೀರ್ಥದಿ —ಸ್ವಾಮಿಪುಷ್ಕರಿಣಿಯಲ್ಲಿ ಲಕ್ಷ್ಮಿ ಕಾಣಿಸಿಕೊಂಡಳೆಂದು ಇಲ್ಲಿನ ಒಕ್ಕಣೆ ಆದರೆ ಸ್ಥಳಪುರಾಣದ ಪ್ರಕಾರ ಲಕ್ಷ್ಮಿ ಕಾಣಿಸಿಕೊಂಡುದು ಕೆಳ ತಿರುಪತಿಯ ಪದ್ಮಸರೋವರದಲ್ಲಿ, ಅಲರ್‌ಮೇಲ್‌ಮಂಗೈಯಾಗಿ

ಸಿರಿಮಹಿಳೆ—ಶ್ರೀದೇವಿ, ಲಕ್ಷ್ಮಿ



ಸಾವೇರಿ ಅಟ್ಟ

ದಣಿಯ ನೋಡಿದೆನೋ ವೆಂಕಟನ, ಮನ ಪ

ದಣಿಯ ನೋಡಿದೆ ಶಿಖಾಮಣಿಯ ನಿರ್ಮಲನ ಅ

ಕೇಸಕ್ಕಿ ಅನ್ನ ತಿಂಬುವನ, ಬಡ್ಡಿ
ಕಾಸು ಬಿಡದೆ ಹೊನ್ನು ಬಳಸಿಕೊಂಬುವನ
ದೋಸೆ ಅನ್ನವ ಮಾರಿಸುವನ, ತನ್ನ
ದಾಸರ ಮೇಳದಿ ಕುಣಿದಾಡುತಿಹನ ೧

ಗಂಟಿನೊಲ್ಲಿಯ ಪೊದ್ದಿಹನ, ಹೊರ
ಹೋಟು ಹೋಗಿ ಬೇಟೆಯಾಡುತಲಿಹನ
ಘಂಟೆ ನಾದಕೆ ಒಲಿಯುವನ ಭೂ ವೈ
ಕುಂರವಿದೆಂದು ಹಸ್ತವ ತೋರಿದವನ ೨

ಬೆಟ್ಟದೊಳಗೆ ಇರುತಿಪನ, ಮನ
ಮುಟ್ಟಿ ಭಜಿಪ ಭಕುತರಿಗೊಲಿದವನ
ಕೊಟ್ಟ ವರವ ತಪ್ಪದವನ, ಈ
ಸೃಷ್ಟಿಗಧಿಕ ಪುರಂದರವಿಠಲನ ೩

ದಣಿಯ—ಒಡೆಯನಾದವನನ್ನು
ಮನದಣಿಯ—ಮನಸ್ಸು ತಣಿಸುವಂತೆ
ಕೇಸಕ್ಕಿ—ಕೆಂಪಕ್ಕಿ
ಗಂಟಿನೊಲ್ಲಿಯ—ಬಂಗಾರದ ಸಣ್ಣ ಗಂಟುಗಳನ್ನಳವಡಿಸಿ ಮಾಡಿದ ಮೇಲುಹೊದಿಕೆಯನ್ನು
ಭೂವೈಕುಂರವಿದೆಂದು—ದೇವರ ಬಲಗೈ ವರದಮುದ್ರೆಯಲ್ಲಿರುವುದನ್ನು ಹೀಗೆ ಅರ್ಥ ಮಾಡಿದ್ದಾರೆ

೧೦೨

ಆದಿ

ಶ್ರೀನಿವಾಸನು ಒಲಿಯನು ಕೇಳೊ
ಜ್ಞಾನೋಪಾರ್ಜನೆ ಮಾಡದಲೆ ಪ

ಏನೇನೋ ಸತ್ಕರ್ಮವ ಮಾಡಲು
ಪ್ರಾಣೇಶಾರ್ಪಣವೆನ್ನದಲ ಅ

ಸ್ನಾನವು ಸಂಧ್ಯಾವಂದನ ಜಪತಪ
ಜ್ಞಾನ ಸಾಧನವಿದೆನ್ನದಲೆ
ದಾನಧರ್ಮಗಳು ಈಶನ ಅನು ಸಂ
ಧಾನವ ಮಾಡಿ ಮಾಡದಲೆ ೧

ಕಾಮ ಕ್ರೋಧ ಲೋಭಾದಿ ದುರಾತ್ಮಕ
ಆ ಮಹಾ ರಿಪುಗಳ ಜಯಿಸದಲೆ
ಪ್ರೇಮದಿ ಶ್ರೀಹರಿ ಭಕುತರ ಚರಣದಿ
ಸೇವದಿ ನಿತ್ಯ ನಮಿಸದಲೆ ೨

ಬಾಲಕ ಸತಿ ಮೊದಲಾದ ಜನರು ಶ್ರೀ
ಲೋಲನ ಸೇವಕರೆನ್ನದಲೆ
ಕಾಲ ದೇಶ ಅಸು ಮೊದಲಾದುವು ಗೋ
ಪಾಲಗ ಅಧೀನವೆನ್ನದಲೆ ೩

ಸಾಧು ಸಂಗದಲಿ ತೀರ್ಥಯಾತ್ರೆಗಳ
ಪಾದದಿ ನಡೆದು ನೀ ಮಾಡದಲೆ
ಭೇದಪಂಚಕವು ಜಗದಿ ಅಭೇದವ
ಮಾಧವನಲಿ ನೀ ತಿಳಿಯದಲೆ ೪

ಒಂದು ಕ್ಷಣವು ಬಿಡದಿಂದಿರೇಶ ಗೋ
ವಿಂದನಂಘ್ರಿಯ ನೆನೆಯದಲೆ
ವಂದ್ಯನು ಶ್ರೀ ಪುರಂದರವಿಠಲ
ಬಂಧಕ ಮೋಚಕನೆನ್ನದಲೆ ೫

ಮಹಾರಿಪುಗಳ—ಅರಿಷಡ್ವರ್ಗಗಳೆನಿಸಿಕೊಳ್ಳುವ ಕಾಮ, ಕ್ರೋಧ, ಲೋಭ, ಮೋಹ, ಮದ ಮಾತ್ಸರ್ಯ

ಅಸು—ಪ್ರಾಣ

ಭೇದಪಂಚಕವು—ಜೀವಕ್ಕೂ ಜಡಕ್ಕೂ, ಜೀವಕ್ಕೂ ಜೀವಕ್ಕೂ, ಜೀವಕ್ಕೂ ಈಶನಿಗೂ, ಜಡಕ್ಕೂ ಈಶನಿಗೂ, ಜಡಕ್ಕೂ ಜಡಕ್ಕೂ ಇರುವ ಭೇದ, ಐದು ಬಗೆಯ ಈ ಭೇದಗಳು ಪಂಚಭೇದವೆಂಬುದು ದ್ವೈತವೇದಾಂತದ ಪ್ರಮೇಯ ವಿವರಣೆಗೆ ಮುಂದಿನ ಸಂಪುಟ ನೋಡಿ



ಗರ್ಭಗುಡಿಯ ಮೇಲಿನ ಗಾರೆಗಚ್ಚಿನ ವಿಮಾನ, ತಿರುಪತಿ

ತೋಡಿ ಆದಿ

ಬಣ್ಣಿಸಲಳವೆ ನಿನ್ನ ವೆಂಕಟರನ್ನ ಪ

ಬಣ್ಣಿಸಲಳವೆ ಭಕ್ತವತ್ಸಲ ನಿನ್ನ
ಪನ್ನಂಗಶಯನ ಪಾಲ್ಗಡಲೊಡೆಯನೆ ದೇವ ಅ

ಅಸಮ ಸಾಹಸಿ ಸೋಮಕನೆಂಬ ದನುಜನು
ಶಶಿದರನ ವರದಿ ಶಕ್ರಾದ್ಯರಿಗಳುಕದೆ
ಬಿಸಜಸಂಭವನ ರಕ್ಕಿಸಿ ನಿಗಮವ ಕದ್ದು
ವಿಷಧಿಯೊಳಡಗಿರಲಾಗ ಒಂದಮರರು
ವಸುಧೀಶ ಕಾಯಬೇಕೆಂದೆನಲವನ ಮ
ರ್ದಿಸಿ ವೇದಾವಳಿಯ ತಂದು ಮೆರೆದೆ ದಶ
ದಿಸೆಯೊಳು ಬ್ರಹ್ಮಗಂದು ವೇದವ ಕರು
ಣಿಸಿದೆ ಕಂಜಾಕ್ಷ ಕೇಶವ ದಯಾಸಿಂಧು ೧

ಇಂದ್ರಾದಿ ಸಕಲ ದೇವತೆಗಳು ದೈತ್ಯ
ವೃಂದವೊಂದಾಗಿ ಮತ್ಸರವ ಮರೆದು ಕೂಡಿ
ಬಂದು ನೆರೆದು ಮುರಹರ ನಿನ್ನ ಮತದಿಂದ
ಮಂದರಾದ್ರಿಯ ಕಡೆಗೋಲಗೈದತುಳ ಫ
ಣೀಂದ್ರನ ತನು ನೇಣೆನಂದದಿ ಬಂಧಿಸಿ
ಸಿಂಧು ಮಥಿಸುತಿರಲು ಘನಾಚಲ
ವಂದು ಮುಳುಗಿಪೋಗಲು ಬೆನ್ನಾಂತು ಮು
ಕುಂದನೆ ಸಲಹಿದೆ ಸುರರು ಪೊಗಳಲು ೨

ಖಳಶಿರೋಮಣಿ ಕನಕಾಕ್ಷನೆಂಬಸುರನು ನಿ
ಮ್ಮೊಳು ಸೆಣೆಸುವೆನೆಂದು ತವಕದಿಂದಲಿ ಬಂದು
ಬಲದ ಕಡುಹಿನಿಂದಲಿ ಚೋರತನದಿಂದ
ಇಳೆಯ ಕದ್ದು ರಸಾತಳದೊಳಗಿರೆ ನಿನ್ನ
ಪೊಳೆವ ಕೋರೆಗಳಿಂದ ತಿವಿದು ಕೊಂದವನ ಅ
ಪ್ಪಳಿಸಿ ದಿಂಡುಗೆಡಹಿ ಬೇಗದಿ ಅವನ
ಬಲವ ಕೆಡಿಸಿ ಮಡುಹಿ, ಈ ಮಹೀ
ಲಲನೆಯ ಕೈಕೊಂಡೆ ಸುರರನ್ನು ಸಲಹಿ

ಹಗಲಿರುಳಿತ್ತಿವಿಲ್ಲ ಕನಕಕಶಿಪುವು ತನ್ನ
ಮಗನ ಪರಿಯ ತೋರೆಂದವನ ಬಾಧಿಸುತಿರೆ
ಜಿಗಿದು ಕಂಭವನೊಡೆದಧಿಕ ರೋಷಾಗ್ನಿ ಕಾ
ರ್ಬೊಗೆ ಸೂಸಿ ಗಗನ ಮಂಡಲ ಧಗಧಗಧಗಧಗ
ಧಗಿಸೆ ಪ್ರಜ್ವಾಲೆಯುಗುಳಿ ಹಿರಣ್ಯಕನ ಕೂ
ರುಗುರಿಂದೊಡಲ ಸೀಳಿ ರಕ್ತವ ಚೆಲ್ಲಿ
ಒಗೆದು ಕರುಳಮಾಲೆ ಧರಿಸಲು ನರ
ಮೃಗರೂಪ ತ್ರಾಹಿಯೆಂದನು ಶಶಿಮೌಳಿ ೪

ಕುಲಿಶಧರನ ಗೆದ್ದ ಕುವಲಯದಲಿ ಭುಜ
ಬಲ ವಿಕ್ರಮನು ಸೌಭಾಗ್ಯಗಳುನ್ನತಿಯಿಂದ
ಬಲು ವಾಜಿಮೇಧ ಗೈಯಲು ವಟು ವೇಷವ
ತಳೆದು ತ್ರಿಪಾದ ಭೂಮಿಯ ದಾನವ ಬೇಡಿ
ಒಲಿಯ ಹಮ್ಮನು ಮುರಿಯಬೇಕೆಂದವನು ಕೊಟ್ಟ
ನೆಲನ ಈರಡಿ ಮಾಡಿದೆ ಚರಣವನೆತ್ತಿ
ಜಲಜಜಾಂಡವನೊಡೆದೆ ಉಂಗುಷ್ಟದಿ
ಸುಲಲಿತ ಸುಮನಸ ನದಿಯನ್ನು ಪಡೆದೆ ೫

ಪ್ರೌಢವಿಪರೊಳಗ್ಗಳೆಯ ಕಾರ್ತವೀರ್ಯ
ಕಡುಧೀರ ದೇವದೈತ್ಯರಿಗಂಜದವನ ಬೆಂ
ಬಿಡದೆ ಸಂಗ್ರಾಮದೊಳಧಿಕ ಸಮರ್ಥನ
ಹೊಡೆದು ತೋಳ್ಗಳ ಕುಟ್ಟಿ ಕೆಡಹಿದಾಗಸದಳ
ಮೃಡ ಮುಖ್ಯ ದೇವ ಸಂತತಿ ನೋಡೆ ಕ್ಷತ್ರೇಶ
ಪಡೆಯ ನೆಲಕೆ ಸವರಿ ಮಾತೆಯ ತಲೆ
ಕಡಿದು ತತ್ಪತಿಗೆ ತೋರಿ ಪಿಡಿದೆ ಗಂಡು
ಗೊಡಲಿಯ ಕರದಲಿ ಬಿರುದ ಘನಶೌರಿ ೬

ದಶರಥರಾಜ ಕೌಸಲ್ಯೆರ ಮಗನಾಗಿ
ಋಷಿ ವಿಶ್ವಾಮಿತ್ರನಧ್ವರವ ರಕ್ಷಿಸಿ ಘನ
ವಿಷಕಂಠ ಧನುವ ಖಂಡಿಸಿ ಜಾನಕಿಯ ತಂದು
ತ್ರಿಶಿರದೂಷಣ ಖರರಳಿದು ವಾಲಿಯನೊಂದು
ನಿಶಿತ ಶಸ್ತ್ರದಿ ಸಂಹರಿಸಿ ಸಾಗರವ ಬಂ
ಧಿಸಿ ಲಂಕೆಯ ದಹಿಸಿ ರಾವಣ ರ
ಕ್ಕಸನನ್ನು ಕತ್ತರಿಸಿ ವಿಭೀಷಣ
ಗೊಸೆದು ಪಟ್ಟವಗಟ್ಟಿ ಮೆರೆದೆಯೊ ಸಾಹಸಿ ೭

ದೇವಕಿ ವಸುದೇವರಲಿ ಜನಿಸಿ ಲೋಕ
ಪಾವನಗೈದು ಪನ್ನಗನ ಹೆಡೆಯ ಮೆಟ್ಟಿ
ಗೋವಳರ ಸಲಹಿ ಗೋವರ್ಧನ ಗಿರಿಯೆತ್ತಿ
ಮಾವ ಕಂಸನ ಕೊಂದು ಮಲ್ಲರ ಮರ್ದಿಸಿ ಸತ್ಯ
ಭಾಮೆಗೆ ಸುರತರುವನು ಕಿತ್ತು ತಂದಿತ್ತ
ತಾವರೆದಳ ಸುನೇತ್ರ ತ್ರಿಭುವನ
ಪಾವನ ಚರಿತ್ರ ಶ್ರೀ ರುಕ್ಮಿಣಿ
ದೇವಿ ಮನೋಹರ ಸುಲಲಿತಗಾತ್ರ ೭

ದುರುಳ ದಾನವರುಗಳಂದು ಖೇಚರದೊಳು
ಹರಿಹರ ಬ್ರಹ್ಮಾದಿಗಳಿಗಳವಡದ ಮು
ಪ್ಪುರವ ರಚಿಸಿ ಮೂರು ಜಗಕುಪಹತಿ ಮಾಡು
ತಿರೆ ಅನುಪಮ ರೂಪದಿ ನಿಂದು ದೈತ್ಯ ಸ್ತ್ರೀ
ಯರ ಪಾತಿವ್ರತ್ಯವ ಬಂಗಮಾಡಿ ಮು
ಪ್ಪುರವನಳಿದ ನಿಸ್ಸೀಮ ಅಖಿಳ ಶ್ರುತಿ
ಯರಸಿ ಕಾಣದ ಮಹಿಮ ಸಾಮಜರಾಜ
ವರದ ಸುಪರ್ಣವಾಹನ ಸಾರ್ವಭೌಮ ೯

ಮಣಿಮಯ ಖಚಿತಾಭರಣದಿಂದೆಸೆವ ಲ
ಕ್ಷಣವುಳ್ಳ ದಿವ್ಯ ವಾಜಿಯನೇರಿ ರಣದೊಳು
ಕುಣಿವ ಮೀಸೆ ಕೋರೆದಾಡೆ ಭೀಕರ ಘೋರ
ಬಣಗು ದೈತ್ಯರ ತಲ ಕಡಿದು ಎಸೆವ ಭೂತ
ಗಣಕಾಹುತಿಯಿತ್ತು ಭೂಭಾರವಿಳುಹಿದೆ
ರಣಭಯಂಕರ ಪ್ರಚಂಡ ಮೂರ್ಜಗದೊಳ
ಗೆಣೆಗಾಣೆ ನಿನಗುದ್ದಂಡ ಕಲ್ಕಿ ದಿನ
ಮಣಿ ಕೋಟಿ ತೇಜ ದುಷ್ಕೃತ ಕುಲ ಖಂಡ ೧೦

ಚಿತ್ತಜನ್ಯೆಯ್ಯನೆ ಚಿನುಮಯರೂಪ ದೇ
ವೋತ್ತಮ ವರಶಂಖಚಕ್ರ ಗದಾಂಬುಜ
ಉತ್ತಮಾಂಗದ ಮಣಿಮಕುಟ ಕುಂಡಲಪ್ರಭೆ
ವ್ಯಕ್ತಕೌಸ್ತುಭ ಪೀತಾಂಬರ ಕಟಿ ಸೂತ್ರ ಶ್ರೀ
ವತ್ಸಲಾಂಛನ ಕೇಯೂರ ಕಂಕಣ ಭೂಷ
ನಿತ್ಯ ವೈಕುಂಠವಾಸ ನಾಗಿಹ ಪುರು
ಷೋತ್ತಮ ಶ್ರೀನಿವಾಸ ಪುರಂದರ
ವಿಠಲ ತಿರುಮಲೇಶ ಪಾಹಿ ಸರ್ವೇಶಾ ೧೧

[ಇದರಲ್ಲಿ ದಶಾವತಾರದ ವಿಸ್ತಾರವಾದ ವರ್ಣನೆಯಿದೆ ]

ಕಡುಹು—ಸಾಹಸ
ಕುಲಿಶಧರ—ಇಂದ್ರ
ಕುವಲಯ—ಭೂಮಂಡಲ
ಸುಮನಸ ನದಿ—ಗಂಗೆ
ಸಾಮಜ—ಆನೆ



ತಿರುಮಾಮಣಿ ಮಂಡಪದಲ್ಲಿ ಶೇಷಶಯನ, ತಿರುಪತಿ

## ೧೦೪

ಆರಭಿ ಆದಿ

ವೆಂಕಟೇಶ ಬೇಡಿಕೊಂಬೆ ಕೃಪೆಯ ಪಾಲಿಸೊ, ಬ್ರಹ್ಮ ಪ
ಶಂಕರಾದಿ ವಂದ್ಯ ಎನಗೆ ಮುಕ್ತಿ ತೋರಿಸೊ ಅ

ನಷ್ಟ ಮೊದಲಾದಂಥ ಕಷ್ಟ ಬಿಡಿಸೋ, ನಿನ್ನ
ಪಟ್ಟದ ರಾಣಿಗ ಹೇಳಿ ಪದವಿ ಕೊಡಿಸೊ
ಇಷ್ಟ ಭಕ್ತ ಜನರೊಳು ಎನ್ನ ಸೇರಿಸೊ
ಈ ಸೃಷ್ಟಿಯೊಳು ನಿನ್ನ ದಾಸರ ದಾಸನೆನಿಸೊ ೧

ಉಟ್ಟು ಉಂಡು ಮಿಕ್ಕಿದ್ದೆಲ್ಲ ಎನಗೆ ಹಾಕಿಸೊ ಪೊಂ
ಬಟ್ಟಲೊಳಗಿನ ಹಾಲು ಉಚ್ಛಿಷ್ಟ ಹಾಕಿಸೊ
ಘಟ್ಯಾಗಿ ಸಕ್ಕರೆ ತುಪ್ಪ ರೊಟ್ಟಿ ಉಣಿಸೋ ಮುಂದೆ
ಹುಟ್ಟಿ ಬಹ ಜನ್ಮಂಗಳ ಎನಗೆ ಬಿಡಿಸೊ ೨

ಕಟ್ಟಿಗಟ್ಟಿದ ಕಬ್ಬಿಣಕ್ಕೆ ಪುಟವ ಹಾಕಿಸೊ ಉ
ತ್ಕೃಷ್ಟ ಬಂಗಾರದೊಳು ಎನ್ನ ಸೇರಿಸೊ
ಬೆಟ್ಟಿಗೆ ಉಂಗುರ ಮಾಡಿ ಎನ್ನ ಧರಿಸೊ, ಸ್ವಾಮಿ
ದಿಟ್ಟ ಪುರಂದರವಿಠಲನೆ ದಯದಿ ಪಾಲಿಸೊ ೩

ಪಟ್ಟದ ರಾಣಿಗೆ—ಲಕ್ಷ್ಮಿಗೆ
ಉಚ್ಛಿಷ್ಟ—ಎಂಜಲು, ದೇವರ ಪ್ರಸಾದ
ಪೊಂಬಟ್ಟಲು—ದೇವರಿಗೆ ಎಡೆ ಇಡಲು ಬಳಸುವ ಬಂಗಾರದ ಪಾತ್ರೆ
ಹುಟ್ಟಿ ಬಹ—ಹುಟ್ಟಿ ಬರುವ, ಮುಂದೆ ಬರಬಹುದಾದ
ಕಿಟ್ಟಗಟ್ಟಿದ—ಕಿಲುಬು ಕಟ್ಟಿದ

ಶಂಕರಾಭರಣ ರೂಪಕ

ನಿನ್ನ ನೋಡಿ ಧನ್ಯನಾದೆನೊ, ಹೇ ಶ್ರೀನಿವಾಸ ಪ
ನಿನ್ನ ನೋಡಿ ಧನ್ಯನಾದೆ ಎನ್ನ ಮನೋನಯನಕೀಗ
ಲಿನ್ನು ದಯಮಾಡು ಸುಪ್ರಸನ್ನ ಸ್ವಾಮಿ ಪಾಂಡುರಂಗ ಅ

ಪಕ್ಷಿವಾಹನ ಲಕ್ಷ್ಮೀರಮಣ
ಲಕ್ಷ್ಮಿ ನಿನ್ನ ವಕ್ಷದಲ್ಲಿ
ರಕ್ಷ ಶಿಕ್ಷಣದಕ್ಷ ಪಾಂಡವ
ಪಕ್ಷ ರಕ್ಷ ಕಮಲಾಕ್ಷ ೧

ದೇಶದೇಶ ತಿರುಗಿ ನಾನು
ಆಶಾಬದ್ಧನಾದೆ ಸ್ವಾಮಿ
ದಾಸನು ನಾನಲ್ಲವೆ ಜಗ
ದೀಶ ಶ್ರೀಶ ಶ್ರೀನಿವಾಸ ೨

ಕಂತುಜನಕ ಕೇಳೊ ನೀ ನಿ
ರಂತರದಿ ನಿನ್ನ ಸೇವೆ
ಅಂತರಂಗದಿ ಪಾಲಿಸಯ್ಯ
ಹೊಂತಕಾರಿ ಪುರಂದರವಿಠಲ ೩

ಎನ್ನ ಮನೋನಯನಕೀಗಲಿನ್ನು—ಇನ್ನು ಈಗ ನನ್ನ ಮನಸ್ಸಿನ ಕಣ್ಣುಗಳಿಗೆ, ಎಂದರೆ ಭಾವನೆಗಳಿಗೆ, ದಯಮಾಡಿಸು.
ಪಕ್ಷಿವಾಹನ—ಗರುಡನನ್ನೇರಿ ಹೋಗುವವನು
ವಕ್ಷದಲ್ಲಿ—ಎದೆಯಲ್ಲಿ, ವಕ್ಷಃಸ್ಥಳಲಕ್ಷ್ಮಿ
ರಕ್ಷ ಶಿಕ್ಷಣದಕ್ಷ—ಸಜ್ಜನರನ್ನು ಕಾಪಾಡುವುದರಲ್ಲೂ ದುರ್ಜನರನ್ನು ಕಾಡುವುದರಲ್ಲೂ ಗಟ್ಟಿಗ.
ಕಂತುಜನಕ—ಮನ್ಮಥನ ತಂದೆ
ನಿರಂತರದಿ—ಎಡೆಬಿಡದೆ
ಹೊಂತಕಾರಿ—ಹಲವು ಉಪಾಯಗಳನ್ನು ಬಲ್ಲವನು, ಚತುರ.

ಪೀಲು ಆದಿ

ನಾರಾಯಣ ತೇ ನಮೋ ನಮೋ ಭವ
ನಾರದ ಸನ್ನುತ ನಮೋ ನಮೋ ಪ

ಮುರಹರ ನಗಧರ ಮುಕುಂದ ಮಾಧವ
ಗರುಡಗಮನ ಪಂಕಜ ನಾಭ
ಪರಮಪುರುಷ ಭವ ಬಂಜನ ಕೇಶವ
ನರಹರಿ ಶರೀರ ನಮೋ ನಮೋ ೧

ಜಲಧಿ ಶಯನ ರವಿ ಚಂದ್ರ ವಿಲೋಚನ
ಜಲರುಹ ಭವನುತ ಚರಣ ಯುಗ
ಬಲಿಭಂಜನ ಗೋವರ್ಧನವಲ್ಲಭ
ನಳಿನೋದರ ತೇ ನಮೋ ನಮೋ ೨

ಆದಿದೇವ ಸಕಲಾಗಮ ಪೂಜಿತ
ಯಾದವಕುಲ ಮೋಹನರೂಪ
ವೇದೋದ್ಧಾರ ಶ್ರೀ ವೇಂಕಟನಾಯಕ ಪು
ರಂದರವಿಠಲ ತೇ ನಮೋ ನಮೋ ೩

[ಇದು ಸಂಸ್ಕೃತದ ರಚನೆ]

ತೇ ನಮೋ—ನಿನಗೆ ನಮಸ್ಕಾರವು

ಬ್ಯಾಗಡೆ (ನಾದನಾಮಕ್ರಿಯ) ಆದಿ

ತಪ್ಪುಗಳೆಲ್ಲ ನೀನೊಪ್ಪಿಕೊಳ್ಳೊ ನ
ಮ್ಮಪ್ಪ ಕಾಯಬೇಕು ತಿಮ್ಮಪ್ಪ ನೀನೆ ಪ

ಸತಿಸುತರಿಗೆ ಸಂಸಾರ ಬಲೆಗೆ ಅತಿ
ಮತಿಹೀನನಾಗಿ ಸಿಕ್ಕಿ ಆಸೆಗಳಿಗೆ
ಮಿತಿಗಾಣೆನಯ್ಯ ಎನ್ನ ಪಾಪಗಳಿಗೆ ಮುಂದೆ
ಗತಿ ಯಾವುದಯ್ಯ ಶ್ರೀಪತಿ ಎನಗೆ ೧

ಬಿಸಿಲು ಮಳೆ ಬಿರುಗಾಳಿಯೊಳು ಬಲು
ದೆಸೆಗೆಟ್ಟು ತಿರುಗಿ ದೇಶ ದೇಶಗಳು
ಹಸಿವು ತೃಷೆಗಳು ಬಹು ಬಾಧಿಸಲು ಬಹು
ಹುಸಿಯನಾಡಿದೆನಯ್ಯ ಹುಟ್ಟು ಮೊದಲು ೨

ಸ್ನಾನ ಸಂಧ್ಯಾನವನೊಂದನರಿಯೆ ಅನ್ನ
ಪಾನಗಳನು ನಾನೊಮ್ಮೆ ಮರೆಯೆ
ಹೀನರ ಸಂಗ ಎಂದೆಂದು ತೊರೆಯೆ ಸು
ಜ್ಞಾನಿಗಳನಿತ್ತ ಬಾ ಎಂದು ಕರೆಯೆ ೩

ಜಪತಪದಲ್ಲಿ ರೀತಿ ಭಾಷೆಯಿಲ್ಲ ಎ
ನ್ನಪರಾಧಗಳಿಗಿನ್ನು ಎಣಿಕೆಯಿಲ್ಲ
ಚಪಲತನದಿ ಕಾಲ ಕಳೆದೆನಲ್ಲ ಸ್ವಾಮಿ
ಕಪಟನಾಟಕ ನೀನೆ ಬಲ್ಲೆಯಲ್ಲ ೪

ಗಂಗೆ ಅಗ್ರೋದಕಗಳ ತಂದು ಸ್ನಾ
ನಂಗಳ ಮಾಡಿಸಲಿಲ್ಲ ಎಂದೂ
ಹೊಂಗ್ಯಾದಿಗೆ ಪುಷ್ಪವನೊಂದು ಶ್ರೀ
ರಂಗಗರ್ಪಿಸಲಿಲ್ಲ ಕಾಯೊ ಬಂದು ೫

ಗಂಧಾಕ್ಷತೆ ಪುಷ್ಪಗಳಿಂದ ದಿವ್ಯ
ಒಂದು ದಳ ಶ್ರೀ ತುಳಸಿಯಿಂದ
ಇಂದಿರೇಶನ ಅರ್ಚಿಸದನೇದೂ ಬಹು
ನೊಂದು ದೂರಾದೆ ಸದ್ಗತಿಯಿಂದ ೬

ಪೀತಾಂಬರಾದಿ ವಸ್ತ್ರಗಳಿಂದ ದಿವ್ಯ
ನೂತನವಾದ ಆಭರಣದಿಂದ
ಪ್ರೀತಿಪಡಿಸಲಿಲ್ಲಾದ್ದರಿಂದ ಹೇ
ಸೀತಾಪತೇ ಕೃಷ್ಣ ಹರಿ ಮುಕುಂದ ೭

ಧೂಪಾರತಿಯ ನಾ ಮಾಡಲಿಲ್ಲ ಒಂದು
ದೀಪವನಾದರು ಹಚ್ಚಲಿಲ್ಲ
ಈ ಪರಿ ಕಳೆಯಿತೀ ಜನ್ಮವೆಲ್ಲ ದೇವ
ಆಪದ್ಬಾಂಧವ ಕಾಯೊ ಲಕ್ಷ್ಮೀ ನಲ್ಲ ೮

ಸೋಪಸ್ಕರವನು ಒಂದು ಮಾಡದೆ ಎಲ್ಲ
ಗೋಪಾಲ ಕೃಷ್ಣಗೆ ಅರ್ಪಿಸದೆ
ಪಾಪಕಾರ್ಯಕ್ಕೆ ನಾ ಗುರಿಯಾದೆ ಸ್ವಾಮಿ
ಶ್ರೀಪತಿ ಕಾಯೊ ಎನ್ನ ಕೈಯ ಬಿಡದೆ ೯

ಪಾಯಸ ಪಂಚ ಭಕ್ಷ್ಯಗಳಿಂದ ಬಲು
ಆಯತವಾದ ಶಾಕಗಳಿಂದ
ತೋಯ ಶಾಲ್ಯಾನ್ನ ಗೋಘೃತದಿಂದ ಕೃಷ್ಣ
ರಾಯನನರ್ಚಿಸಲಿಲ್ಲ ಭಕ್ತಿಯಿಂದ ೧೦

ಮಂಗಳಾರತಿಯನು ಮಾಡಲಿಲ್ಲ ಜಯ
ಮಂಗಳವೆಂದು ನಾ ಪಾಡಲಿಲ್ಲ
ಕಂಗಳಿಂದಲಿ ನಿನ್ನ ನೋಡಲಿಲ್ಲ ಮುದ್ದು
ರಂಗನೆ ಬಾ ಎಂದು ಬೇಡಲಿಲ್ಲ ೧೧

ಹರಿಯ ಪ್ರದಕ್ಷಿಣೆ ಮಾಡಲಿಲ್ಲ ನರ
ಹರಿಯ ಪಾದಕೆ ನಾ ಬೀಳಲಿಲ್ಲ
ಹರಿದಿನದುಪವಾಸ ಮಾಡಲಿಲ್ಲ
ಶ್ರೀಹರಿದಾಸರೊಡನೆ ನಾ ಕೂಡಲಿಲ್ಲ ೧೨

ಅತಿಥಿಗಳೆಂದು ಬಂದರೆ ಮನೆಗೆ ನಾ
ಗತಿಯಿಲ್ಲ ಕೂಡದು ಎಂದೆ
ಯತಿಗಳ ಕೂಡ ನಿಂದಿಸಿದೆ ಕೊನೆಗೆ ಶ್ರೀ
ಪತಿ ದೃಷ್ಟಿಯಿಡು ಈ ಪಾಪಿ ಕಡೆಗೆ ೧೩

ಹೋಮಾರ್ಚನೆ ಉಪಾಸನೆಯಿಲ್ಲ ಎಂದೂ
ನೇಮದಿಂದಲಿ ನಾ ಮಾಡಲಿಲ್ಲ
ಕಾಮಾತುರದಿ ಕಂಡ ಕಂಡಲ್ಲೆಲ್ಲ ರಾಮ
ಭ್ರಾಮಕನಾಗಿ ತಿರುಗಿದೆನಲ್ಲ ೧೪

ಎಷ್ಟು ಹೇಳಲಿ ಅವಗುಣಗಳಿಲ್ಲ ಅಷ್ಟ
ಅಷ್ಟು ಇಷ್ಟು ಎಂದು ಎಣಿಕೆಯಿಲ್ಲ
ದೃಷ್ಟಿಯಿಂದಲಿ ನೋಡೋ ದೀನವತ್ಸಲ ಸರ್ವ
ಸೃಷ್ಟಿಗೊಡೆಯ ಪುರಂದರವಿಠಲ ೧೫

ತಿಮ್ಮಪ್ಪ—ತಿರುಮಲೆಯಪ್ಪ
ತೃಷೆ—ಬಾಯಾರಿಕೆ
ಹುಸಿ—ಸುಳ್ಳು
ಹೊಂಗ್ಯಾದಿಗೆ—ಹಳದಿ ಬಣ್ಣದ ಕೇದಿಗೆ ಹೂ
ಸೋಪಸ್ಕರ—ಆವಶ್ಯಕ ವಸ್ತು
ಪಂಚಭಕ್ಷ್ಯ—ಭಕ್ಷ್ಯ ಭೋಜ್ಯ, ಲೇಹ್ಯ ಚೋಷ್ಯ, ಪಾನೀಯ



ಸಾದನಾಮಕ್ರಿಯ ಆದಿ

ತಾರಮ್ಮಯ್ಯ, ಯದುಕುಲ ವಾರಿಧಿ ಚಂದ್ರಮನ ಪ
ಮಾರಜನಕನ ಮೋಹನಾಂಗನ ಸೇರಿ ಸುಖಿಸಲು ಹಾರೈಸಿ ಬಂದೆವು ಅ

ಬಿಲ್ಲ ಹಬ್ಬಗಳಂತೆ, ಅಲ್ಲಿ ಬೀದಿ ಶೃಂಗಾರವಂತೆ
ಮಲ್ಲರ ಕಾಳಗ ಮದ್ದಾನೆಯಂತೆ
ಫುಲ್ಲಾಕ್ಷನು ತಾನಲ್ಲಿಗೆ ತೆರಳಿದ ೧

ಮಥುರಾಪುರಿಯಂತೆ, ಅಲ್ಲಿ ಮಾವ ಕಂಸನಂತೆ
ಒದಗಿದ ಮದಗಜ ತುರಗ ಸಾಲಿನಲಿ
ಮದನಮೋಹನ ಕೃಷ್ಣ ಮಥುರೆಗೆ ತೆರಳಿದ ೨

ಅತ್ತೆ ಮಾವನ ಬಿಟ್ಟು, ಬಂದೆವು ಹಿತ್ತಲ ಬಾಗಿಲಿಂದ
ಭಕ್ತವತ್ಸಲನ ಬಹು ನಂಬಿದ್ದೆವು
ಉತ್ಸಾಹ ಭಂಗ ಮಾಡಿದನಮ್ಮ ೩

ರಂಗನ ನೆರೆ ನಂಬಿ ಬಂದೆವು ಸಂಗ ಸುಖವ ಬಯಸಿ
ಭಂಗಿಸಿ ನಮ್ಮನು ಹ್ಯಾಂಗೆ ಪೋದನಮ್ಮ
ಮಂಗಳಮೂರುತಿ ಮದನಗೋಪಾಲನು ೪

ಶೇಷಗಿರಿಯ ಮೇಲೆ, ಹರಿ ತಾ ವಾಸವಾಗಿಹ ಕಾಣೆ
ಸಾಸಿರನಾಮದ ಒಡೆಯನೆಂದೆನಿಸಿದ
ಶ್ರೀಶ ಪುರಂದರವಿಠ್ಠಲರಾಯನ ೫

[ಶ್ರೀ ಕೃಷ್ಣನು ಗೋಕುಲವನ್ನು ಬಿಟ್ಟು ಮಥುರೆಗೆ ಹೋದ ಸಂಗತಿ ತಿಳಿದು ಗೋಕುಲದ ಗೋಪಿಯರು ಕೃಷ್ಣನ ವಿರಹದಿಂದ ವ್ಯಾಕುಲಗೊಂಡ ಬಗೆ ಇಲ್ಲಿ ವರ್ಣಿತವಾಗಿದೆ ]

ಕಮಾಚ್ ಅಟ್ಟ

ನಾರಾಯಣ ಎನ್ನಿರೋ, ಶ್ರೀ ನರಹರಿ
ಪಾರಾಯಣ ಮಾಡಿರೊ ಪ

ನಾರಾಯಣನೆಂದು ಅಜಮಿಳನು ಕೈವಲ್ಯ
ಸೇರಿದನೆಂಬೊ ಸುದ್ದಿಯ ಕೇಳಿ ಅರಿಯಿರಾ ಅ

ಕಾಶಿಗೆ ಹೋಗಲೇಕೆ, ಕಾವಡಿ ಪೊತ್ತು
ಬೇಸತ್ತು ತಿರುಗಲೇಕೆ
ವಾಸುದೇವನ ನಾಮ ಬಾಯ್ತುಂಬ ನೆನೆದರೆ
ಕ್ಲೇಶಗಳೆಂಬುದು ಲೇಶ ಮಾತ್ರವಿಲ್ಲ ೧

ಚೋರರ ಭಯವಿಲ್ಲವೊ, ಹರಿನಾಮಕ್ಕೆ
ಯಾರ ಅಂಕೆಯಿಲ್ಲವೊ
ಊರನಾಳುವ ಧೊರೆ ನೀತಿ ಭೀತಿಗಳಿಲ್ಲ
ಘೋರಪಾತಕವೆಲ್ಲ ದೂರ ಮಾಡುವುದಕ್ಕೆ ೨

ಸ್ನಾನವ ಮಾಡಲೇಕೆ, ಮಾನವರಿಗೆ
ಮೌನ ಮಂತ್ರಗಳೇಕೆ
ದೀನಪಾಲಕ ನಮ್ಮ ಬೆಟ್ಟದೊಡೆಯನ
ಧ್ಯಾನಕೆ ಸರಿಯುಂಟೆ ಪುರಂದರವಿಠಲನ ೩

ಅಜಮಿಳ—ಅಜಾಮಿಳ, ಕಾನ್ಯಕುಬ್ಜದ ಬ್ರಾಹ್ಮಣ ದುರಾಚಾರಿಯಾಗಿದ್ದು ಸಾಯುವ ಗಳಿಗೆಯಲ್ಲಿ ತನ್ನ ಮಗನಾದ ನಾರಾಯಣನನ್ನು ಕರೆದ, ನಾರಾಯಣನೆಂಬ ಹೆಸರನ್ನು ಹೇಳಿದುದೇ ಅವನ ಸದ್ಗತಿಗೆ ಕಾರಣವಾಯಿತು

ಕಾವಡಿ—ಅಡ್ಡೆ

ಮೋಹನ ಅಟ್ಟ

ನಾನೇನು ಮಾಡಿದೆನೋ ವೆಂಕಟರಾಯ
ನೀನೆನ್ನ ಕಾಯಬೇಕೋ ಪ

ಮಾನಾಪಮಾನವು ನಿನ್ನದು ಎನಗೇನು
ದೀನರಕ್ಷಕ ತಿರುಪತಿಯ ವೆಂಕಟರಾಯ ಅ

ರಕ್ಕಸನಲ್ಲವೇನೋ ಪ್ರಹ್ಲಾದನು
ಚಿಕ್ಕವ ಧ್ರುವನಲ್ಲವೆ
ಉಕ್ಕಿ ಬರುವ ಕರ್ಮ ಮಾಡಿದಜಮಿಳ ನಿಮ್ಮ
ಅಕ್ಕನ ಮಗನೇನೋ ವೆಂಕಟರಾಯ ೧

ಕರಿರಾಜ ಕರೆಸಿದನೆ ದ್ರೌಪದಾದೇವಿ
ಬರೆದೋಲೆ ಕಳುಹಿದಳೆ
ವರಋಷಿ ಪತ್ನಿ ಕಲ್ಲಾಗಿ ಸ್ತ್ರೀಯಾದದ್ದು
ಧರೆಯೆಲ್ಲ ಅರಿಯದೇನೋ ವೆಂಕಟರಾಯ ೨

ಒಪ್ಪಿಡಿಯವಲಕ್ಕಿಯ ತಂದವನಿಗೆ
ಒಪ್ಪಿ ಕೊಟ್ಟೆಯೊ ಭಾಗ್ಯವ
ಸರ್ಪಶಯನ ಶ್ರೀ ಪುರಂದರವಿಠಲ
ಅಪ್ರಮೇಯನೆ ಸಲಹೋ ವೆಂಕಟರಾಯ ೩

ರಕ್ಕಸನಲ್ಲವೇನೋ—ಪ್ರಹ್ಲಾದನು ವಿಷ್ಣುಭಕ್ತನಾದರೂ ದೈತ್ಯನಾದ ಹಿರಣ್ಯಕಶಿಪು ವಿನ ಮಗ , ದೈತ್ಯನೇ ತಾನೆ ?

ಧ್ರುವ—ಉತ್ತಾನಪಾದರಾಯನ ಮಗ ಸಣ್ಣವನಲ್ಲವೆ ? ಆ ಹುಡುಗನಿಗಾಗಿ ನೀನು ಬರಬಹುದೋ ?

ಅಜಾಮಿಳ—ಕಾನ್ಯಕುಬ್ಜದ ಬ್ರಾಹ್ಮಣನಾದರೂ ದುರಾಚಾರಿಯಲ್ಲವೆ ? ಅವನಿಗೆ ನೀನು ಸದ್ಗತಿಯನ್ನಿತ್ತೆಯಲ್ಲ ?

ಕರಿರಾಜ—ಗಜೇಂದ್ರ, ಇಂದ್ರದ್ಯುಮ್ನನು ಪಾಂಡ್ಯದೇಶದ ಅರಸಾಗಿ ವಿಷ್ಣುಭಕ್ತನಾದರೂ ಅಗಸ್ತ್ಯರಿಂದ ಶಾಪ ಪಡೆದು ಆನೆಯಾದನಲ್ಲವೆ? ಅವನು ನಿನ್ನನ್ನೇನು ಕರೆಕಳುಹಿಸಿದನೆ ? ಬರಿದೆ ಕೂಗಿದರೂ ಒಂದೆಯಲ್ಲ ?

ದ್ರೌಪದಾದೇವಿ—ದುಃಶಾಸನನು ತನ್ನನ್ನು ಅಪಮಾನಗೊಳಿಸುತ್ತಿದ್ದಾಗ ದ್ರೌಪದಿಯು ನಿನ್ನನ್ನು ನೆನಸಿಕೊಂಡಳಷ್ಟೆ , ಅದಕ್ಕೇ ನೀನು ಒಲಿದೆಯಲ್ಲ !

ವರಋಷಿಪತ್ನಿ—ಅಹಲ್ಯೆ , ಗೌತಮನ ಹೆಂಡತಿಯಾದ ಅಹಲ್ಯೆ ಶಾಪದಿಂದ ಕಲ್ಲಾಗಿರುವಾಗ ರಾಮಾವತಾರದಲ್ಲಿ ಅವಳ ಶಾಪವನ್ನು ನೀಗಿಸಿದೆಯಲ್ಲವೆ ?

ಒಪ್ಪಿಡಿಯವಲಕ್ಕಿಯ ತಂದವನಿಗೆ—ಕುಚೇಲನಿಗೆ ಒಂದು ಹಿಡಿ ಅವಲಕ್ಕಿಗೆ ಬದಲಾಗಿ ಸಕಲಸಂಪತ್ತನ್ನೂ ನೀನು ನೀಡಲಿಲ್ಲವೆ ?



ಸಿಂದುಭೈರವಿ ಆದಿ

ವೇಂಕಟಾಚಲನಿಲಯಂ ವೈಕುಂಠಪುರವಾಸಂ
ಪಂಕಜನೇತ್ರಂ ಪರಮಪವಿತ್ರಂ
ಶಂಖಚಕ್ರಧರ ಚಿನ್ಮಯರೂಪಂ ಪ

ಅಂಬುಜೋದ್ಭವ ವಿನುತಂ
ಅಗಣಿತಗುಣನಾಮಂ
ತುಂಬುರುನಾರದ ಗಾನವಿಲೋಲಂ
ಅಂಬುಧಿಶಯನಂ ಆತ್ಮಾಭಿರಾಮಂ ೧

ನೌಮಿ ಪಾಂಡವ ಪಕ್ಷಂ
ಕೌರವಮದಹರಣಂ
ಬಾಹು ಪರಾಕ್ರಮಪೂರ್ಣಂ
ಅಹಲ್ಯಾಶಾಪ ಭಯನಿವಾರಣಂ ೨

ಸಕಲ ವೇದ ವಿಚಾರಂ ಸರ್ವಜೀವ ನಿಕರಂ
ಮಕರಕುಂಡಲಧರ ಮದನಗೋಪಾಲಂ
ಭಕ್ತ ಪೋಷಕ ಶ್ರೀಪುರಂದರವಿಠಲಂ ೩

[ಇದೊಂದು ಸಂಸ್ಕೃತ ಕೃತಿ ]

ಚಿನ್ಮಯರೂಪಂ—ಕೇವಲ ಚೈತನ್ಯವೇ ಸ್ವರೂಪವಾಗಿ ಉಳ್ಳವನು
ಆತ್ಮಾಭಿರಾಮಂ—ತನ್ನಲ್ಲೇ ತಾನು ಸುಖವನ್ನು ಹೊಂದಿದವನು, ಆಪ್ತಕಾಮ, ನಿತ್ಯ ತೃಪ್ತ, ಪರಿಪೂರ್ಣ
ಪಾಂಡವ ಪಕ್ಷಂ .—ಕೃಷ್ಣಾವತಾರದಲ್ಲಿ.
ಅಹಲ್ಯಾಶಾಪ —ರಾಮಾವತಾರದಲ್ಲಿ.
ಸಕಲವೇದ ವಿಚಾರಂ—ಎಲ್ಲ ಶ್ರುತಿಗಳೂ ಅವನನ್ನೇ ಕುರಿತವು.
ಸರ್ವಜೀವ ನಿಕರಂ—ಎಲ್ಲ ಜೀವರಿಗೂ ಆಶ್ರಯಭೂತನಾದವನು

ಆನಂದಭೈರವಿ ಅಟ್ಟ

ವೇಂಕಟೇಶ ದಯಮಾಡೋ ವೇದವೇದ್ಯನೆ
ಪಂಕಜಾಕ್ಷ ಅಭಯವಿತ್ತು ರಕ್ಷಿಸೆನ್ನ ಬೇಗನೆ ಪ

ಚಿತ್ತ ಚಂಚಲವ ಬಿಡಿಸೋ ಮತ್ತೆ ಕ್ರೋಧವ ಓಡಿಸೊ
ಭ್ರಾಂತಿ ವಿಷಯಂಗಳು ಬೇಡ ಕಂತುಪಿತ ನಾರಾಯಣ ೧

ಸೃಷ್ಟಿ ಮೂರರೊಳಗೆ ನೀನೆ ಕಷ್ಟಒಡಿಸುವರೇನೊ
ನಷ್ಟ ತನ್ನ ನೋಡಬೇಡೊ ದೃಷ್ಟಿಸಿ ನೋಡೊ ದಯಾಳೊ ೨

ಭಾಳ ಅಪರಾಧಿ ನಾನು ನಿನ್ನ ಬಳಿಗೆ ಬಂದೆ ನಾನು
ಒಲಿದು ಎನ್ನ ರಕ್ಷಿಸಯ್ಯ ಮೇಲುಗಿರಿ ಪುರಂದರವಿಠಲ ೩

ಸೃಷ್ಟಿ ಮೂರರೊಳಗೆ—ಮೂರು ಲೋಕಗಳಲ್ಲಿ
ದೃಷ್ಟಿಸಿ ನೋಡೋ—ನನ್ನ ಕಡೆ ಕಣ್ಣನ್ನು ಹರಿಸು
ಭಾಳ—ಬಹಳ
ಮೇಲುಗಿರಿ—ಏಳು ಬೆಟ್ಟಗಳಲ್ಲಿ ಮೇಲಿನದು, ವೆಂಕಟಾಚಲ



೧೧೩

ದ್ವಿಜಾವಂತಿ ಅಟ್ಟ

ಕನಸುಕಂಡೆನೆ ಮನದಲ್ಲಿ ಕಳವಳಗೊಂಡೆನೆ
ಏನು ಹೇಳಲಿ ತಂಗಿ ತಿಮ್ಮಯ್ಯನ ಪಾದವನು ಕಂಡೆ ಪ

ಪೊನ್ನದ ಕಡಗನಿಟ್ಟು ತಿಮ್ಮಯ್ಯ ತಾ
ಪೋಲ್ವ ನಾಮವ ಇಟ್ಟು ಅಂದುಗೆ ಘಲುಗೆನ್ನುತ
ಎನ ಮುಂದೆ ಬಂದು ನಿಂತಿದ್ದನಲ್ಲೆ ೧

ಮಕರಕುಂಡಲವನಿಟ್ಟು ತಿಮ್ಮಯ್ಯ ತಾ
ಕಸ್ತೂರಿ ತಿಲಕನಿಟ್ಟು ಗೆಜ್ಜೆ ಘುಲಗೆನುತ
ಸ್ವಾಮಿ ತಾ ಬಂದು ನಿಂತಿದ್ದನಲ್ಲೆ ೨

ಮುತ್ತಿನ ಪಲ್ಲಕ್ಕಿ ಯತಿಗಳು
ಹೊತ್ತು ನಿಂತಿದ್ದರಲ್ಲೆ ಛತ್ರ ಚಾಮರದಿಂದ
ರಂಗಯ್ಯನ ಉತ್ಸವ ಮೂರುತಿಯು ೩

ತಾಮರ ಕಮಲದಲಿ ಕೃಷ್ಣಯ್ಯ ತಾ
ಬಂದು ನಿಂತಿದ್ದನಲ್ಲೆ ವಾಯು ಬೊಮ್ಮಾದಿಗಳು
ರಂಗಯ್ಯನ ಸೇವೆಯ ಮಾಡುವರೆ ೪

ನವರತ್ನ ಕೆತ್ತಿಸಿದ ಸ್ವಾಮಿ ಎನ್ನ
ಹೃದಯಮಂಟಪದಲ್ಲಿ ಸರ್ವಾಭರಣದಿಂದ
ಪುರಂದರವಿಠಲನ ಕೂಡಿದೇನೆ ೫

ಪೊನ್ನದ—ಹೊನ್ನಿನ, ಬಂಗಾರದ
ಪೋಲ್ವ—ಪೊಳೆವ, ಹೊಳೆಯುವ
ಬೊಮ್ಮಾದಿಗಳು—ಬ್ರಹ್ಮನೇ ಮೊದಲಾದ ದೇವತೆಗಳು

೧೧೪

ತೋಡಿ | ಅಟ್ಟ

ಬಾರೋ ಬಾರಯ್ಯ ನಮ್ಮ ಬಾಲ ಗೋಪಾಲಕೃಷ್ಣ ಪ

ಜಾರತನವ ಬಿಡೊ ಜಾಸಂರಮಣನೆ
ನಾರಿಯರೆಲ್ಲರು ನವನೀತ ಚೋರನೆಂದು ದೂರು ಹೇಳಲಿ
ಸಾರಿ ಓಡಿದ ಶ್ರೀ ನೀಲಗಿರಿವಾಸ ಅ

ಅನಿರುದ್ಧ ಜನಾರ್ದನ ಆನಂದ ನಿಲಯ ಹರಿ
ಮುನಿ ಮೌನಿ ಸಹವಾಸ ಮುಚುಕುಂದ ವರದ
ಘನ ನೀಲಮೇಘಶ್ಯಾಮ ಕಾಮಿತಾರ್ಥ ಕಮಲನಾಭ
ಸನಕಾದಿವಂದ್ಯ ಸಾಗರಶಯನ ಸಾರಸನೇತ್ರ ಶಾಶ್ವತರೂಪ ೧

ಮುದ್ದುಕೊಟ್ಟೇನು ಬಾರೊ ಮುನಿಸದೇತಕೊ ತಂದೆ
ಬುದ್ಧಿಕೇಳಯ್ಯ ನಮ್ಮ ಭದ್ರಾದ್ರಿರಮಣ
ಹದ್ದನು ಏರಿಕೊಂಡು ಅಮರರ ಕೂಡಿ ಆಡಿ
ಬುದ್ಧನಾಥನೆ ಬೆಣ್ಣೆಕದ್ದ ಕಳ್ಳನೆ ಕಸ್ತೂರಿ ರಂಗನೆ ೨

ನರಹರಿ ಮಾಧವ ವಿಷ್ಣು ನಂದನಂದನನೆ
ಶರಧಿ ಬಂಧನ ನಿನಗೆ ಶರಣುವ ಹೊಂದಿದೆ
ಸೇರಿದಮೇಲೆ ನಿನ್ನ ಬೆರೆದ ಅಪ್ಪಯ್ಯ ರಂಗ
ಶರಣಮಂದಾರ ಶೇಷಗಿರೀಶ ವರದ ಪುರಂದರವಿಠಲ ೩

ಆನಂದನಿಲಯ—ಬೆಟ್ಟದ ಮೇಲಿನ ಗುಡಿಯಲ್ಲಿರುವ ವಿಮಾನದ ಹೆಸರು.
ಮುನಿಸದೇತಕೊ—ಮುನಿಸುವುದೇತಕೊ, ಸಿಟ್ಟುಗೊಳ್ಳುವುದು ಯಾತಕ್ಕೆ.
ಭದ್ರಾದ್ರಿರಮಣ—ಭದ್ರಾಚಲದಲ್ಲಿರುವ ದೇವರು
ಹದ್ದನು—ಗರುಡನನ್ನು
ಶರಧಿ ಬಂಧನ—ರಾಮಾವತಾರದಲ್ಲಿ

೧೧೫

ಕಾಪಿ ಚಾಪು

ನೀನಿರಲು ನಮಗೇತರ ಭಯವೋ
ಸನಕಾದಿಗಳ ಪ್ರಿಯ ತಿರುವೇಂಗಳಯ್ಯ ಪ

ಚರಣದಿಂದುದಿಸಿದವಳ ಸುತನ ಮೊಮ್ಮಗನ ಸತಿ
ಭರದಿಂದ ನಿಮ್ಮ ಸ್ತೋತ್ರವ ಮಾಡಲು
ಹರುಷದಿಂದ ಕೇಳಿ ನಲಿದೈವರ
ನಾರಿ ಲಜ್ಜೆಯ ಕಾಯಿದ ಕರುಣ ದಯಾಸಿಂಧು ೧

ಕ್ಷುಧೆಯಿಂದ ಬಂದ ಅಗಸ್ತ್ಯಮುನಿ ಶಾಪದಲಿ
ಮದಯುತನಾಗಿ ತಾನು ಗಜನಾಗಿರೆ
ಅಘಟವಾಗಿದ್ದ ನೆಗಳಿಗೆ ಸಿಲ್ಕಿ ಧೇನಿಸಲು
ನಿಜ ಚಕ್ರದಲಿ ಕಾಯಿದ ಗಜರಾಜವರದ ೨

ನೀರ ಬೊಬ್ಬುಳಿಯಂತೆ ನಿತ್ಯವಲ್ಲವೊ ದೇಹ
ಘೋರ ಸಂಸಾರದೊಳು ತೊಳಲಬೇಡ
ಶ್ರೀರಮಣ ಪುರಂದರವಿಠಲ ಪರದೈವವೆಂದು
ಸಾರುತಿರಲು ಮನವೆ ಸುಮ್ಮನಿರಲು ಬೇಡ ೩

ತಿರುವೇಂಗಳಯ್ಯ—ತಿರುವೇಂಗಡದ ಒಡೆಯ, ವೆಂಕಟಾಚಲಪತಿ

ಚರಣದಿಂದುದಿಸಿದವಳ ಸುತನ —ಗಂಗೆಯ ಮಗನಾದ ಭೀಷ್ಮನಿಗೆ ಮೊಮ್ಮಗನ ಮಾವೆಯಲ್ಲಿದ್ದ ಯುಧಿಷ್ಠಿರನ ಹೆಂಡತಿಯಾದ ದ್ರೌಪದಿಯು

ಭರದಿಂದ —ತುಂಬಿದ ಸಭೆಯಲ್ಲಿ ದುಃಶಾಸನನು ತನ್ನ ಸೀರೆ ಸೆಳೆಯುತ್ತಿರುವಾಗ

ಐವರ ನಾರಿ —ಪಾಂಡವರೈವರ ಹೆಂಡತಿ ದ್ರೌಪದಿ

ಕ್ಷುಧೆಯಿಂದ —ಗಜೇಂದ್ರಮೋಕ್ಷದ ಕಥೆ ಪಾಂಡ್ಯದೇಶದ ದೊರೆ ಇಂದ್ರದ್ಯುಮ್ನನು ತನ್ನ ಮನೆಗೆ ಬಂದ ಅಗಸ್ತ್ಯರನ್ನು ಅಸಡ್ಡೆಯಿಂದ ಕಂಡನಾಗಿ ಅಗಸ್ತ್ಯನು ಅವನನ್ನು ಆನೆಯಾಗೆಂದು ಶಪಿಸಿ ಹೋದನು

ಧೇನಿಸಲು—ಧ್ಯಾನಿಸಲು

ನೆಗಳು—ಮೊಸಳೆ

ನಿಜ ಚಕ್ರದಲಿ—ತನ್ನ ಚಕ್ರವನ್ನು ಮೊಸಳೆಯೆಡೆಗೆ ಹರಿಹಾಯಿಸಿ

ನೀರ ಬೊಬ್ಬುಳಿ—ನೀರ ಮೇಲಣ ಗುಳ್ಳೆ.



ಶಂಕರಾಭರಣ ಅಟ್ಟ

ವೇಂಕಟರಮಣನೆ ಬಾರೊ ಶೇಷಾಚಲವಾಸನೆ ಬಾರೊ
ಪಂಕಜನಾಭ ಪರಮ ಪವಿತ್ರ ಶಂಕರಮಿತ್ರನೆ ಬಾರೊ

ಮುದ್ದು ಮುಖದ ಮಗುವೆ ನಿನಗೆ ಮುದ್ದುಕೊಡುವೆನು ಬಾರೊ
ನಿರ್ದಯವೇಕೋ ನಿನ್ನೊಳಗೆ ನಾನು ಪೊಂದಿದ್ದೇನು ಬಾರೊ ೧

ಮಂದರಗಿರಿಯನೆತ್ತಿದಾನಂದ ಮೂರ್ತಿಯೆ ಬಾರೊ
ನಂದನ ಕಂದ ಗೋವಿಂದ ಮುಕುಂದ ಇಂದಿರೆಯರಸನೆ ಬಾರೊ ೨

ಕಾಮನಯ್ಯ ಕರುಣಾಳೊ ಶ್ಯಾಮಲವರ್ಣನೆ ಬಾರೊ
ಕೋಮಲಾಂಗ ಶ್ರೀ ಪುರಂದರವಿಠಲನೆ ಸ್ವಾಮಿರಾಯನೆ ಬಾರೊ ೩



ರೇಗುಪ್ತಿ ಝಂಪೆ

ಕೇಳೊ ಕೋಪಿಸಬೆಡ ಹೇಳಿದರೆ ಫಲವಿಲ್ಲ
ಹೇಳಲಂಜುವೆನು ನಿನ್ನ
ಬಾಳ ಒಳಗಕ್ಕಿಲ್ಲ ಪಾಲಿಸು ಅಭೀಷ್ಟವನು
ವ್ಯಾಳಗಿರಿ ವೆಂಕಟೇಶ ಈಶ ಪ

ತಲೆ ಹೊಡಕ ಹಿರಿಯುಮಗ ಧರೆಗೆ ಪೂಜಿತನಲ್ಲ
ಒಲಿಬಂಧ ನಿನ್ನಯ ಕಿರಿಯಮಗ
ಲಲನೆ ಲೋಭಿಗಳ ಮನೆ ನೆಲಸಿಪಳು ಸೊಸೆ ತಾನು
ಪೋಲಿಯಕುಲವರಿಯದವಳು ೧

ಮಗಳ ಮಾರ್ಗವು ಡೊಂಕು ಮೈದುನ ಗುರುದ್ರೋಹಿ ಮೊ
ಮ್ಮಗನು ಬಲು ಚಾಡಿಖೋರ
ಹಗರಣಕೆ ನೀ ಯೆಂಜಲ್ಹಣ್ಣನ್ನು ಮೆದ್ದು ಮೂ
ಜಗದೊಡೆಯನೆನಿಸಿ ಮೆರೆದೆ ತಿರಿದೆ ೨

ಹುಲುವಂಗದವನೆಂದು ಆಡಲೇತಕೆ ಕುಡುತೆ
ಹಾಲ ಸವಿದುಂಡ ರನ್ನ
ನೆಲೆಗೆ ಸಿಲುಕಿದ ನೀನು ಪುರಂದರವಿಠಲನೆ
ಸಲಹಿ ದಾಸನ ಮಾಡಿದೆ ಬಿಡದೆ ೩

ವ್ಯಾಳಗಿರಿ—ವ್ಯಾಳವೆಂದರೆ ಸರ್ಪ, ಇಲ್ಲಿ ಆದಿಶೇಷ, ಶೇಷಾಚಲ, ತಿರುಮಲೆಯಲ್ಲಿ ದೇವರು ನಿಂತಿರುವ ಬೆಟ್ಟ

ತಲೆಹೊಡಕ ಹಿರಿಯಮಗ—ಹಿರಿಯಮಗನೆಂದರೆ ಸೃಷ್ಟಿಗೆ ಮೊದಲು ತನ್ನ ನಾಭಿಯಿಂದ ಹೊರಬಂದ ಚತುರ್ಮುಖ ಬ್ರಹ್ಮ, ಅವನ ಒಂದು ತಲೆಯನ್ನು ಶಿವನು ಚಿವುಟಿ ತೆಗೆದದ್ದು ಇಲ್ಲಿನ ಸಂದರ್ಭ

ಕಿರಿಯ ಮಗ—ಮನ್ಮಥ

ಬಲುಭಂಡ—ಮನ್ಮಥನು ಪೂರ್ವಜನ್ಮದಲ್ಲಿ ಭಂಡನೆಂಬ ಅಸುರನಾಗಿದ್ದನೆಂಬ ಕಥೆ ಬ್ರಹ್ಮಾಂಡ ಪುರಾಣದ ಲಲಿತೋಪಾಖ್ಯಾನದಲ್ಲಿ ಬರುತ್ತದೆ, ಇಲ್ಲಿ ಕಾಮನು ಲಜ್ಜೆಯಿಲ್ಲದವನು, ಪೋಕರಿ ಎಂಬರ್ಥವೂ ಆಗುತ್ತದ

ಲಲನೆ—ಲಕ್ಷ್ಮಿಯು, ಜಿಪುಣರ ಮನೆಯಲ್ಲೇ ಐಶ್ವರ್ಯ ಉಳಿಯುವುದೆಂಬ ಕಲ್ಪನೆಯ ಛಾಯೆ ಇಲ್ಲಿದೆ

ಸೊಸೆ—ಮಗ ಬ್ರಹ್ಮನ ಹೆಂಡತಿಯಾದ ಸರಸ್ವತಿ, ವಿದ್ಯಾಭಿಮಾನಿ

ಹೊಲೆಯ ಕುಲವರಿಯದವಳು—ವಿದ್ಯೆಗೆ ಕುಲವೆಂಬ ಹೆಮ್ಮೆಯಾಗಲಿ ಹೀನಾಯ ವಾಗಲಿ ಇರದು ಯಾರಿಗಾದರೂ ವಿದ್ಯೆ ಒಲಿಯುವುದು

ಮಗಳ ಮಾರ್ಗವು ಡೊಂಕು—ತನ್ನ ಚರಣದಿಂದ ಹುಟ್ಟಿದ ಗಂಗೆಯ ದಾರಿ ನೇರ ವಾದುದಲ್ಲ, ಅವಳು 'ಮೂರು ದಾರಿ ಹಿಡಿದವಳು' (ತ್ರಿಪಥಗಾಮಿನಿ)

ಮೈದುನ —ಸಮುದ್ರ ಮಥನ ಕಾಲದಲ್ಲಿ ಸಮುದ್ರದಿಂದ ಲಕ್ಷ್ಮಿಯೊಂದಿಗೆ ಹೊರ ಬಂದ ಚಂದ್ರ, ಅವನು ತನ್ನ ಗುರುವಿನ ಪತ್ನಿಯಾದ ತಾರೆಯೊಂದಿಗೆ ಸಂಭೋಗಿಸಿ ಗುರುದ್ರೋಹಿಯಾದ

ಮೊಮ್ಮಗನು—ಮಗ ಬ್ರಹ್ಮನ ಮಾನಸಪುತ್ರನಾದ ನಾರದ

ಹಗರಣಕೆ—ಸೀತಾನ್ವೇಷಣೆಗಾಗಿ ಹೊರಟ ರಾಮನಿಗೆ ಪಂಪಾತೀರದಲ್ಲಿ ಶಬರಿಯೆಂಬ ತಪಸ್ವಿನಿಯು ತಾನು ಮೊದಲು ರುಚಿ ನೋಡಿ ಹಣ್ಣುಗಳನ್ನು ಕೊಟ್ಟಳೆಂಬ ಕಥೆ, ಆದರೆ ಇದು ವಾಲ್ಮೀಕಿರಾಮಾಯಣದಲ್ಲಿಲ್ಲ, ಜನಪ್ರಿಯವಾದ ಒಂದು ಆಖ್ಯಾಯಿಕೆ ಅಷ್ಟೆ

ಹಲವಂಗದವ—ಬಗೆಬಗೆಯ ಉಪಾಯಗಳನ್ನು ಬಲ್ಲವನು, ಹಲವು ದಾರಿಗಳನ್ನು ಹಿಡಿಯುವವನು



ಆರಭಿ ಅಟ್ಟ

ಶ್ರೀನಿವಾಸನಂಘ್ರಿ ಸೇವೆ ಮಾಡುವ ಬನ್ನಿ
ದೃಢಮತಿಯುಳ್ಳವರು ಪ

ಜ್ಞಾನ ಭಕ್ತಿ ವೈರಾಗ್ಯದಿ ಜ್ಞಾನವೆಮ್ಮ ನಿರತ ಬರಲು
ಧ್ಯಾನಿಸುವ ಸನ್ನಿಧಿಯಲ್ಲಿ ಸಾನುರಾಗದಿಂದ ಪಾಡಿ ಅ

ಬಂದ ದುರಿತಗಳನೆಲ್ಲ ದಿನ ದಿನ ತಾ–
ನೊಂದು ಗಳಿಗೆ ಹಿಂದು ಮುಂದು ಇಂದು ಹಿತದಿಂದ
ಬಂದು ನಿಂದು ಭಯತೋರಿದಂತೆ
ನಂದನಂದನ ದಿವ್ಯ ಧಿಮಿ ಧಿಮಿ ಧಿಮಿಕೆಂದು ಕುಣಿವ
ನಿಂದು ಗೆಜ್ಜೆ ಘಲಿ ಘಲಿರೆನ್ನೆ
ಮಂದಿರದೊಳು ಮೋಹಿಸುತ್ತ ೧

ಕಾಮಕ್ರೋಧಾದಿಗಳ ಕಷ್ಟಗಳ ಕಳೆದು ಕೆಡಹಿ ಕಾರುಣ್ಯದಿಂದ
ಹೇಮ ಹೆಣ್ಣಿನ ಹಿತವ ಬಿಡಿಸಿ ರಾಮನಾಮ ವ್ರತ ವಾಕ್ಯಗಳ
ಸೋಮಶೇಖರ ರಾಣಿ ಸಹಿತ ಪಾಮರ ಸಂಘದಲಿಹ
ಪ್ರೇಮ ಬೇಡವೆಂದು ರಾಮನಾಮ ಜಪವನಿತ್ತ ೨

ಮೂರ್ಜಗದ ಮೂಲ ಕಾರಣನ
ಮುನಿಯ ಮನದ ಮಹಾ ನಿಧಿಯ
ಸಾರ್ಜಗದ ಸಭೆಯ ಚೆನ್ನಿಗನ
ಸೇವಿಪುದು ವರವೀವುದಂತೆ
ಶ್ರೀಯನಾಥರ ಶಿಷ್ಯ ಸೇರಿ ಪೂ
ರ್ವಜಿತವಾಗಿರಲೆಂದು ರಾಜಿಸುವ ಪುರಂದರವಿಠಲ ೩

ಹೇಮ-ಹೆಣ್ಣಿನ—ಬಂಗಾರ, ಹೆಂಗಳೆಯರು (ಕಾಮಿನೀ-ಕಾಂಚನ)
ಸೋಮಶೇಖರ—ಶಿವನು.
ರಾಣಿ ಸಹಿತ—ತನ್ನ ಹೆಂಡತಿಯಾದ ಪಾರ್ವತಿಯೊಂದಿಗೆ ; ಪಾರ್ವತಿಗೆ.

ಪಾಮರಸಂಘದಲಿಹ ಪ್ರೇಮ ಬೇಡವೆಂದು—ಪ್ರಾಪಂಚಿಕ ಪ್ರವೃತ್ತಿಯುಳ್ಳವರ ಸಹ ವಾಸ ಮಾಡಬಾರದೆಂದು.

ರಾಮನಾಮ ಜಪವನಿತ್ತ—ರಾಮನಾಮವನ್ನು ಉಪದೇಶಿಸಿದ, ಶಿವಸಂಹಿತೆಯಲ್ಲಿ ಬರುವ ಉಮಾಮಹೇಶ್ವರ ಸಂವಾದ ಇಲ್ಲಿನ ಸಂದರ್ಭ.

ಮೂರ್ಜಗದ—ಮೂರು ಲೋಕಗಳ

ಸಾರ್ಜಗದ —ಸಾರಭೂತವಾದ ಜಗತ್ತಿನ, ಎಂದರೆ ಸ್ಥಿರವಾದ ವೈಕುಂಠವೆಂಬ ಸಭೆಯಂ.

ಶ್ರೀಯನಾಥರ —ಪಾಠ ಅಶುದ್ಧವಾಗಿದೆ



ಶಂಕರಾಭರಣ ಆದಿ

ವೇಣುನಾದ ಬಾರೋ ಶ್ರೀ ವೇಂಕಟರಮಣನೆ ಬಾರೊ
ಬಾಣನ ಭಂಗಿಸಿದಂಥ ಭಾವಜನಯ್ಯನೆ ಬಾರೋ ಪ

ಪೂತನಿಯ ಮೊಲೆಯುಂಡ ನವನೀತ ಚೋರನೆ ಬಾರೋ
ಭೀತ ರಾವಣನ ಸಂಹರಿಸಿದ ಸೀತಾನಾಯಕ ಬಾರೋ ೧

ಬಿಲ್ಲ ಮುರಿದು ಮಲ್ಲರ ಗೆದ್ದ ಫುಲ್ಲನಾಭನೆ ಬಾರೋ
ಗೊಲ್ಲತೇರೊಡನೆ ನಲಿವ ಚೆಲುವ ಮೂರುತಿ ಬಾರೋ ೨

ಮಂದರಗಿರಿ ಎತ್ತಿದಂಥ ಇಂದಿರೆ ರಮಣನೆ ಬಾರೋ
ಕುಂದದೆ ಗೋವುಗಳ ಕಾಯಿದ ಪುಂಡರೀಕಾಕ್ಷನೆ ಬಾರೋ ೩

ನಾರಿಯರ ಮನೆಗೆ ಪೋಗುವ ವಾರಿಜನಾಭನೆ ಬಾರೋ
ಈರೇಳು ಭುವನವ ಕಾಯುವ ಮಾರನಯ್ಯನೆ ಬಾರೋ ೪

ಶೇಷ ಶಯನ ಮೂರುತಿಯಾದ ವಾಸುದೇವನೆ ಬಾರೋ
ದಾಸರೊಳು ದಾಸನಾದ ಪುರಂದರವಿಠಲ ಬಾರೋ ೫

ಬಾಣನ —ಬಲಿಚಕ್ರವರ್ತಿಯ ಮಗನಾದ ಬಾಣಾಸುರನ ಮಗಳಾದ ಉಷೆಯನ್ನು, ಅನಿರುದ್ಧನು (ಕೃಷ್ಣನ ಮಗ ಪ್ರದ್ಯುಮ್ನ, ಅವನೇ ಮನ್ಮಥ, ಭಾವಜ, ಅವನ ಮಗ ಅನಿರುದ್ಧ) ಕದ್ದೊಯ್ದು ಮದುವೆಯಾದದ್ದು ಇಲ್ಲಿನ ಸಂದರ್ಭ

ಬಿಲ್ಲ ಮುರಿದು —ಕಂಸನ ಆಸ್ಥಾನದಲ್ಲಿ

ಗೊಲ್ಲತೇರೊಡನೆ—ಗೊಲ್ಲತಿಯರೊಡನೆ, ಕವಾಡಿಗರ ಹೆಂಗಳೆಯರನ್ನು ಕೂಡಿಕೊಂಡು

ಈರೇಳು ಭುವನವ—ಹದಿನಾಲ್ಕು ಲೋಕಗಳನ್ನು

ಮೋಹನ ಅಟ್ಟ

ನಿನ್ನ ದಿವ್ಯ ಮೂರುತಿಯು ಕಣ್ಣಿಂದಲೀಗ ನೋಡಿ
ಧನ್ಯನಾದನೋ ಧರೆಯೊಳು ಪ

ಇನ್ನು ಈ ಭವ ಭಯಕೆ ಅಂಜಲೇತಕೋ
ಚೆನ್ನ ಸಿರಿ ವೇಂಕಟೇಶ ಶ್ರೀಶ ಅ

ಏಸು ಜನ್ಮದ ಪುಣ್ಯ ಬಂದೊದಗಿತೊ ಶ್ರೀ ಸ್ವಾಮಿ ಪುಷ್ಕರಿಣಿಯ
ಲಿ ಸ್ನಾನ ಜಪತಪವ ಮಾಡಿ ವರಹದೇವರ ನೋಡಿ
ಶ್ರೀಸ್ವಾಮಿ ಮಹಾದ್ವಾರಕೆ
ಈ ಶರೀರವನು ಈಡಾಡಿ ಪ್ರದಕ್ಷಣೆಮಾಡಿ ಲೇಸಾಗಿ ಪೊಗಳುತಲಿ
ಆ ಸುವರ್ಣದ ಗರುಡಕಂಬವನೆ ನೋಡಿ ಸಂತೋಷದಲಿ
ಕೊಂಡಾಡಿದೆ ಬಿಡದೆ ೧

ನೆಟ್ಟನೆರಡನೇ ದ್ವಾರವನೆ ದಾಂಟಿ ಪೋಗುತಲಿ ದಟ್ಟಣೆಯು ಬಹು ಜನದಲಿ
ಘಟ್ಟಿ ಮನದಲಿ ತಲೆಯ ಚಿಟ್ಟಿಡುತ ನೆಟ್ಟನೇ ಕಟ್ಟಾಂಜನಕೆ ತಾ ಒರುತಲಿ
ಕೃಷ್ಣಾಜಿನದವರ ಪೆಟ್ಟುಗಳ ಕಾಣುತಲಿ ಕಂಗಟ್ಟು ಹರಿಯೆನುತಲಿ
ಬೆಟ್ಟದಧಿಪತಿ ನಿನ್ನ ದೃಷ್ಟಿಂದ ಕಾಣುತಲಿ ಸುಟ್ಟಿತೆನ್ನಯ
ದುರಿತವು ಸರ್ವವು ೨

ಶಿರದಲ್ಲಿ ರವಿಕೋಟಿ ತೇಜದಿಂದೆಸೆವಂಥ ವರ ಕಿರೀಟವು ಕುಂಡಲ
ಕೊರಳೊಳಿಹ ಸರಿಗೆ ವೈಜಯಂತಿಯ ಮಾಲೆ ಪರಿಪರಿಯ ಹಾರಗಳನು
ಉರದಿ ಶ್ರೀವತ್ಸವನು ಕರದಿ ಶಂಖಚಕ್ರಗಳು ವರನಾಭಿ ಮಾಣಿಕವನು
ನಿರುಪಮ ಮಣಿಖಚಿತ ಕಟಿಸೂತ್ರ ಪೀತಾಂಬರ ಚರಣದ್ವಯ
ದಂದುಗೆಯನು ಇನ್ನು ೩

ಇಕ್ಷುಚಾಪನ ಪಿತನೆ ಪಕ್ಷೀಂದ್ರವಾಹನನೆ ಲಕ್ಷ್ಮೀಪತಿ ಕಮಲಾಕ್ಷನೆ
ಅಕ್ಷಯ ಅಜ ಸುರೇಂದ್ರಾದಿ ವಂದಿತನೆ ಸಾಕ್ಷಾಜ್ಜಗನ್ನಾಥನೆ
ರಾಕ್ಷಸಾಂತಕನೆ ನಿರಪೇಕ್ಷ ನಿತ್ಯತೃಪ್ತನೆ ನಿರುಪಮ ನಿಸ್ಸೀಮನೆ
ಕುಕ್ಷಿಯೊಳಗೀರೇಳು ಲೋಕವನು ತಾಳ್ದವನೆ ರಕ್ಷಿಸುವುದೆಂದು
ದಯದಿ ಮುದದಿ ೪

ಉರಗಗಿರಿ ಅರಸು ನಿಮ್ಮ ಚರಣಗಳ ಕಂಡ ಮೇಲೆ ಉರಗ
ಕರಿ ವ್ಯಾಘ್ರ ಸಿಂಹ
ಅರಸು ಚೋರಾಗ್ನಿ ವೃಶ್ಚಿಕ ಮೊದಲಾದ ಪರಿಪರಿಯ ಬಹಳ ಭಯವು
ಪರಮ ವಿಷಲಂಪಟದೊಳಗೆ ನಾ ಸಿಗದಂತೆ ಕರುಣಿಸುವುದೊಲಿದು ದಯದಿ
ಸ್ಮರಗಧಿಕಲಾವಣ್ಯ ತಂದ ಪುರಂದರ ವಿಠಲ ಶರಣಜನ
ಕರುಣಾರ್ಣವ ದೇವ ೫

ವಿಸು—ವಿಷ್ಣು

ಸ್ವಾಮಿಪುಷ್ಕರಿಣಿ—ಬೆಟ್ಟದ ಮೇಲೆ ಗುಡಿಯ ನೆರೆಯಲ್ಲೇ ಇರುವ ಕೊಳ

ವರಹದೇವರ—ಕೊಳದ ದಂಡೆಯ ಮೇಲಿರುವ ವರಾಹಸ್ವಾಮಿಸನ್ನಿಧಿ , ಈ ಕ್ಷೇತ್ರದಲ್ಲಿ ಇದೇ ಪ್ರಾಚೀನ ದೈವವೆಂದೂ, ವೇಂಕಟೇಶ್ವರನಿಗೆ ಇಲ್ಲಿ ಎಡೆಯನ್ನಿತ್ತುದೇ ಈ ದೈವವೆಂದೂ, ಆದ್ದರಿಂದ ವೇಂಕಟೇಶ್ವರನ ದರ್ಶನಕ್ಕೆ ಮೊದಲು ವರಾಹಸ್ವಾಮಿಯ ದರ್ಶನವಾಗಬೇಕೆಂದೂ ಕ್ಷೇತ್ರವಿಧಿಯ ವಿವರಗಳು

ಕಟ್ಟಾಂಜನ—ಕಡೆಯ ಅಂಗಳ , ಈಗ ತಿರುಮಾಮಣಿ ಮಂಟಪವೆನ್ನುವ ಆವರಣ

ಕೃಷ್ಣಾಜಿನದವರ ಪೆಟ್ಟುಗಳ—ಮೊದಲಿಗೆ ಬೆಟ್ಟದ ಗುಡಿಯಲ್ಲಿ ದಟ್ಟವಾದ ಜನಸಂದಣಿಯಿರುವಾಗ ದೇವರ ದರ್ಶನವಾದ ಒಡನೆ ಭಕ್ತರು ಅಲ್ಲೇ ನಿಲ್ಲದೆ ಮುಂದೆ ಸಾಗಿ ಉಳಿದವರಿಗೆ ದರ್ಶನದ ಅವಕಾಶ ಮಾಡಿಕೊಡಲೆಂದು, ಗರ್ಭಗುಡಿಯ ಹೊರಗೆ ಕೆಲವರು ಅಧಿಕಾರಿಗಳು ನಿಂತು ಕೃಷ್ಣಾಜಿನ ಸುತ್ತಿದ ಬೆತ್ತದಿಂದ ಅಲ್ಲೇ ನಿಲ್ಲುವ ಭಕ್ತರ ಬೆನ್ನಿಗೆ ಹೊಡೆಯುವ ವಾಡಿಕೆಯಿದ್ದಿತು ಈ ಊಳಿಗದವರನ್ನು ಕೃಷ್ಣಾಜಿನದವರೆಂದು ಕರೆಯುತ್ತಿದ್ದರು ಈಗಿನಂತೆ ಕ್ಯೂ ಇರದಿದ್ದ ಕಾಲ ಅದು

ಉರದಿ—ಎದೆಯ ಮೇಲೆ

ಕಟಿಸೂತ್ರ—ಉಡಿದಾರ

ಇಕ್ಷುಚಾಪನ ಪಿತನೆ—ಕಬ್ಬನ್ನೇ ಬಿಲ್ಲಾಗಿ ಹೊಂದಿರುವ ಮನ್ಮಥನ ತಂದೆಯಾದ ವಿಷ್ಣುವೆ.

ಪಕ್ಷೀಂದ್ರ—ಪಕ್ಷಿಗಳಿಗೆ ಒಡೆಯ ಗರುಡ

ಅಕ್ಷಯ ಅಜ —ನಾಶವಿಲ್ಲದ ಬ್ರಹ್ಮ ಮೊದಲಾದ ದೇವತೆಗಳಿಂದ ವಂದಿತನಾದವನೆ.

ನಿರಪೇಕ್ಷ—ಯಾವ ಕಾಮನೆಯೂ ಇಲ್ಲದ , ಜಗತ್ತಿನ ಸೃಷ್ಟಿ, ಸ್ಥಿತಿ ಮೊದಲಾದ ತನ್ನ ಕೆಲಸಕ್ಕೆ ಯಾರ ನೆರವನ್ನೂ ಬಯಸದ

ನಿರುಪಮ ನಿಸ್ಸೀಮ—ಎಣೆಯಿಲ್ಲದ, ಕೊನೆಯಿಲ್ಲದ (ಸೀಮೆಯೆಂದರೆ ಗಡಿ)

ಕುಕ್ಷಿಯೊಳಗೀರೇಳು ಲೋಕವನು —ತನ್ನ ಹೊಟ್ಟೆಯಲ್ಲೇ ಹದಿನಾಲ್ಕು ಲೋಕಗಳನ್ನು ಅಡಗಿಸಿಕೊಂಡಿರುವ

ಉರಗಗಿರಿ ಅರಸು—ಶೇಷಾಚಲಪತಿ

ಉರಗ ಕರಿ ವ್ಯಾಘ್ರ—ಹಾವು, ಆನೆ, ಹುಲಿ

ಅರಸು ಚೋರಾಗ್ನಿ ವೃಶ್ಚಿಕ—ರಾಜರು, ಕಳ್ಳರು, ಬೆಂಕಿ, ಚೇಳು ದಾಸರು ದುಷ್ಟ ಪ್ರಾಣಿಗಳ ಸಾಲಿನಲ್ಲಿ ರಾಜರನ್ನೂ ಸೇರಿಸಿರುವುದನ್ನು ಗಮನಿಸಬೇಕು !

ಸ್ಮರಗಧಿಕಲಾವಣ್ಯ—ಮನ್ಮಥನ ಚೆಲುವನ್ನೂ ಮೀರಿದ ಚೆಲುವ

ಶರಣಜನ ಕರುಣಾರ್ಣವ—ಮೊರೆ ಹೊಕ್ಕವರಿಗೆ ದಯೆಯ ಸಮುದ್ರವೇ ಆಗಿರುವ



ಶಂಕರಾಭರಣ ಅಟ್ಟ

ಬಾರಯ್ಯ ವೆಂಕಟ ಕೃಷ್ಣ ಪ
ಬಾರಯ್ಯ ವೆಂಕಟ ಕೃಷ್ಣ ನೀನನಗೆ
ಧಾರುಣಿಯೊಳು ನಿನ್ನ ಮೂರುತಿ ತೋರುತ ಅ

ಮನವೆಂಬ ಮಂಟಪದ ನಿನಗೆ ಹಾಕಿ ಎನ್ನ
ತನುವನೊಪ್ಪಿಸಿ ಕೈಯ ಮುಗಿವೆನಯ್ಯ
ವನಜಭವ ಸುರಮುನಿಗಳು ಬಜಿಸಲು
ಘನ ಮಹಿಮನೆ ಪಾದಕ್ಕೆರಗಲಿ ಎನ್ನ ಶಿರ ೧

ಲಿಂಗದೇಹವೆಂಬೊ ಮಣಿಸೊ ದಾರದ
ಅಂಗವ ನಿನಗೆ ಕಾಣಿಕೆ ಇಡುವೆ
ಮಂಗಳಮೂರುತಿ ಅಂಗನೆ ಸಹಿತ ಭು
ಜಂಗಶಯನ ಎನ್ನ ಕಂಗಳಿಗುತ್ಸವವೀಯೊ ೨

ಉಡುಗೆಜ್ಜೆ ರಾಗಟಿ ಪೆಂಡೆಗಳಿಂದೊಪ್ಪುವ
ಉಡುವ ಪೀತಾಂಬರ ಕೊರಳ ಕೌಸ್ತುಭ
ದೃಢದಿಂದ ಶಂಖಚಕ್ರ ಕರ್ಣಕುಂಡಲದಿಂದ
ಕಡಲ ಶಯನ ಎನ್ನ ಹೃದಯದೊಳಗೆ ನಿಲ್ಲೊ ೩

ಒಡೆಯ ನೀನೆನಗೆ ಅನಾದಿ ಕಾಲದಿಂದ
ಬಡವನು ನಾ ನಿನ್ನ ದಾಸನು ಸತ್ಯ
ಕಡು ಕರುಣದಿಂದ ಬರಲಿಬೇಕೋ ಗ
ರುಡ ಗಮನ ವೇಂಕಟೇಶ ಎನ್ನ ಮನೆಗೆ ೪

ಬರಿಮನೆಯಲ್ಲ ಪರಿವಾರ ಉಂಟು
ಪರಮಪುರುಷ ನಿನ್ನ ರೂಪಗಳುಂಟು
ಸಿರಿದೇವಿ ಸಹಿತಾಗಿ ಪುರಂದರವಿಠಲ
ಕರುಣದಿಂದಲಿ ಮನ್ಮಂದಿರದೊಳಗೆ ೫

ಲಿಂಗದೇಹ —ಸೂಕ್ಷ್ಮಶರೀರ ವಿವರಗಳಿಗೆ ಎರಡನೆಯ ಸಂಪುಟ ನೋಡಿ

ಪವಣಿಸೊ ದಾರದ—ಪೋಣಿಸುವ ದಾರ, ಜನ್ಮಾಂತರಗಳಲ್ಲಿ ಸೇರಿಕೊಂಡು ಬರುವುದು ಲಿಂಗದೇಹ, ಮುಕ್ತಿಯಲ್ಲೇ ಅದರ ಭಂಗವಾಗುವುದು ಅದನ್ನು 'ಸೂತ್ರ' (ದಾರ)ವೆಂದೂ 'ಆತಿವಾಹಿಕ'ವೆಂದೂ ಕರೆಯುತ್ತಾರೆ ಇಲ್ಲಿ ಅದನ್ನು ಜೀವದ ಅಂಗವೆಂದು ಹೇಳಿದ್ದಾರೆ

ಅಂಗನೆಸಹಿತ—ಲಕ್ಷ್ಮಿಯೊಡಗೂಡಿ

ಉಡುಗೆಜ್ಜೆ—ಉಡಿಗೆಜ್ಜೆ, ನಡುವಿಗೆ ತೊಟ್ಟುಕೊಳ್ಳುವ, ಗೆಜ್ಜೆಯಿರುವ ಬಂಗಾರದ ಪಟ್ಟಿ

ರಾಗಟೆ—ರಾಗಟಿ, ರಾಕಟಿ, ತೆಲುಗಿನಲ್ಲಿ ರಾಕಿಡಿ ಮರಾಠಿಯಲ್ಲಿ ರಾಖಡೀ, ಹೆಂಗಸರು ಜಡೆಯ ಮೇಲೆ ಧರಿಸುವ ಗುಂಡಗಿರುವ ಬಂಗಾರದ ಒಂದು ಆಭರಣ

ಪೆಂಡೆ—ಪಾಯವಟ್ಟ, ಕಾಲಿಗೆ ತೊಡುವ ಆಭರಣ

ಬರಿಮನೆಯಲ್ಲ—ಹೃದಯಗುಹೆ, ದಹರಾಕಾಶವು ಶೂನ್ಯವಲ್ಲ, ಬಿಂಬಸ್ವರೂಪನಾದ ಹರಿಯ ಆವಾಸಸ್ಥಾನ

ಪರಿವಾರ—ತತ್ತ್ವಾಭಿಮಾನಿದೇವತೆಗಳು ಮುಖ್ಯಪ್ರಾಣ ಮತ್ತು ರಮಾದೇವಿಯರು

ಮನ್ಮಂದಿರದೊಳಗೆ—ನನ್ನ ಮನೆಯಲ್ಲಿ, ಮನಮಂದಿರದಲ್ಲಿ ಎಂದೂ ಆದೀತು



ಾದಸಾಮಕ್ರಿಯ ಅಟ್ಟ

ರಂಗನ ನೋಡಿರೆ ರಾಜಕುವರ ನರ
ಸಿಂಗದೇವ ನಮ್ಮ ದೇವಕಿ ಸುತನ ಪ

ಹಮ್ಮಿನ ತಾಯಿತ ತೋಳ ಬಾಪುರಿಯೊ
ಘಮ್ಮನೆ ಘಲ್ಲೆಂಬ ಗೆಜ್ಜೆಯ ಧ್ವನಿಯೊ
ಸುಮ್ಮಹಿಮನ ಕಿವಿಯಲ್ಲಿ ಚೌಕುಲಿಯೊ
ತಿಮ್ಮರಾಯನಿಟ್ಟ ಸೊಬಗಿನ ಬಗೆಯೊ ೧

ಶುಕ್ಕರವಾರದ ಪೂಜೆಗೊಂಬುವನ
ಸಕ್ಕರೆ ಪಾಲ್‌ಮೊಸರು ಬೆಣ್ಣೆ ಮೆಲ್ಲುವನ
ಫಕ್ಕನೆ ಸುರರಿಗೆ ಅಮೃತವಿತ್ತವನ
ರಕ್ಕಸಕುಲವೈರಿ ರಾವಣಾಂತಕನ ೨

ಪಾಪವಿನಾಶಿನಿ ಸ್ನಾನವ ಮಾಡಿ
ಪಾಪಗಳೆಲ್ಲವು ಬೇಗ ಬಿಟ್ಹೋಡಿ
ಈ ಪರಿ ದಿನದಿನ ಮೂರುತಿ ನೋಡಿ
ಶ್ರೀಪತಿ ಪುರಂದರವಿಠಲನ ಪಾಡಿ ೩

ಹಮ್ಮಿನ—ಹೆಮ್ಮೆಯ, ಎದ್ದು ಕಾಣುವ
ಬಾಪುರಿ—ಬಾಹುಪೂರ, ತೋಳಿನಲ್ಲಿ ತೊಡುವ ಬಳೆ
ಸುಮ್ಮಹಿಮನ—ಸುಮಹಿಮನ, ಒಳ್ಳೆಯ ಹಿರಿಮೆಯುಳ್ಳವನ
ಚೌಕುಲಿ—ಚೌಕುಳಿ, ಚವುಕುಳಿ, ಮರಾಠಿಯಲ್ಲಿ ಚೌಕಡಾ , ನಾಲ್ಕು ಮುತ್ತುಗಳನ್ನು ಕೂಡಿಸಿ ಮಾಡಿದ ಓಲೆ , ಚಚ್ಚೌಕನಾದ ಬಂಗಾರದ ಓಲೆಯೂ ಆಗಬಹುದು.
ತಿಮ್ಮರಾಯ—ತಿರುಮಲೆರಾಯ, ಬೆಟ್ಟದ ಮೇಲಿರುವ ದೇವರು

ಫಕ್ಕನೆ—ಇದ್ದಕ್ಕಿದ್ದಂತೆ, ಪೂರ್ವಸೂಚನೆಯಿಲ್ಲದೆ, ಸಮುದ್ರಮಥನದ ಸಂದರ್ಭದಲ್ಲಿ ವಿಷ್ಣುವು ಮೋಹಿನಿಯಂತೆ ಬಂದು ದೇವತೆಗಳಿಗೆ ಅಮೃತವನ್ನು ದೊರಕಿಸಿ ಕೊಟ್ಟು ಅಸುರರ ಕೈತಪ್ಪಿಸಿ ಕಣ್ಮರೆಯಾದ ಹಿನ್ನೆಲೆ

ಪಾಪವಿನಾಶಿನಿ—ಬೆಟ್ಟದ ಮೇಲಿರುವ ಒಂದು ಕೊಳ, ಗುಡಿಯಿಂದ ಮೂರು ಮೈಲಿ ದೂರದಲ್ಲಿದೆ ಮೊದಲಿಗೆ ದೇವರ ಅಭಿಷೇಕಕ್ಕೆ ನೀರನ್ನು ಇಲ್ಲಿಂದಲೇ ತರುತ್ತಿದ್ದರು

ಈ ಪರಿ—ಈ ರೀತಿಯಲ್ಲಿರುವ ಮೂರ್ತಿಯನ್ನು



ಸುರುಟಿ ಚಾಪು

ರಂಗಯ್ಯ ನಿನ್ನ ಯಾರೇನೆಂದರೊ ಪ

ಸಕಲ ಭಾಗವತರು ಗತಿತಾಳ ಮೇಳದಿಂದ
ತಕಿಟ ಕಿಟತಕ ಧಿಮಿಕೆಂದು ಕುಣಿವಾಗ ಅ

ಸಕ್ಕರೆ ಚೀಣಿ ಹಾಲಿನ ಕೆನೆ ರಸದಿಂದ
ಉಕ್ಕುವ ನೊರ ಹಾಲನು ಮೆದ್ದ ಕೃಷ್ಣಯ್ಯ ೧

ದ್ರುಪದನ ಮಗಳ ಸೀರೆಯ ಸುತ್ತಿ ಸೆಳೆವಾಗ
ಕೃಪೆಯಿಂದ ಅಕ್ಷಯವಿತ್ತ ದೇವನೆ ನಿನ್ನ ೨

ಜಗದೊಡೆಯ ಮೂಡಲಗಿರಿಯ ಕೋನೇರಿ ತಿಮ್ಮ
ಅಗಣಿತ ಮಹಿಮ ಶ್ರೀ ಪುರಂದರವಿಠಲ ನಿನ್ನ ೩

ಸಕ್ಕರೆ ಚೀಣಿ—ಚೀನಾದೇಶದ ಸಕ್ಕರೆ , ತುಂಬ ಬೆಳ್ಳಗಿರುವುದು.
ಮೂಡಲಗಿರಿಯ ಕೋನೇರಿ ತಿಮ್ಮ—ತಿರುಮಲೆ ಬೆಟ್ಟದ ಮೇಲಿರುವ ಕೊಳದ (ಸ್ವಾಮಿಪುಷ್ಕರಿಣಿಯ) ದಂಡೆಯ ಮೇಲಿರುವ ದೇವರು

೧೨೪

ಸಿಂಧುಭೈರವಿ ಆದಿ

ವೇಂಕಟೇಶ ನಿನ್ನ ನಾಮಕ್ಕೆ ಮೊದಲು ನಾಕಕ್ಷರಗಳು ನೋಡೊ ಪ

ಬಿಂಕವಾದ ನಾಲ್ಕು ವೇದಶಾಸ್ತ್ರ ಪುರಾಣಗಳಿದರಿಂದ ಅ

ವೇದ ಪೊಯ್ದನ ಸಾಧಿಸಿ ಗೆದ್ದೆ ಮೊದಲು ನೀನಲ್ಲವೆ
ವೇಷವ ತಾಳಿದೆ ಶರಧಿಯ ಮಥನ ಲೇಸು ನಿನಗಲ್ಲವೆ
ವೇಗದಿಂದಲಿ ಎತ್ತಿ ದೈತ್ಯನ ಸೀಳಿದೆ ನೀನಲ್ಲವೆ
ವೆಕ್ಕಸ ಇಹ ಪಾತಕನ ಕರುಳು ನಿನಗೆ ಒಂದು ಮಾಲೆಯಾಗಿಲ್ಲವೆ ೧

ಕಮ್ಮಮಾಡಿ ಮೂರುತಿಯಲ್ಲಿ ಬಲಿಯ ಹಾಕಿದೆ ಪಾತಾಳಕೆ
ಕಲ್ಮಷ ನುಡಿಯ ಸುತನ ಕೈಯ ಮಾತೆಯ ಕೊಲ್ಲುವುದಕ್ಕೆ
ಕಡನಿಲ್ಲದೆ ವನವಾಸಕ್ಕೆ ಬಂದೆ ಸೀತೆಯ ಹುಡುಕುವುದಕ್ಕೆ
ಕಂಸಮಾವನ ಕೊಂದೆ ತಂದೆತಾಯಿಗಳ ಬಿಡಿಸುವದಕ್ಕೆ ೨

ಟೀಕಿಮಾಡಿ ಮೂರ್ಪುರ ಸತಿಯರ ವ್ರತವ ಕೆಡಿಸಿಬಿಟ್ಟೆ
ಟಕ್ಕಿಸಿ ಎಡಬಲ ಲಕ್ಷ್ಮಿಯ ತೆಗದು ವಕ್ಷಸ್ಥಳದಲಿಟ್ಟೆ
ಟಂಕಿ ಬೆಳ್ಳಿ ಟಂಕಿ ನರಲೋಕಕ್ಕೆ ಉಡುಪಿಗೆ ಮನಸಿಟ್ಟೆ
ಟೇಕೋರ್ಣಡಿಯಲಿ ರಾಣವ ಹಾಕಿದೆ ಜಗದಿ ಕುದುರೆಯ ಬಿಟ್ಟೆ ೩

ಶಾಕದ ತುದಿಯಲ್ಲಿ ಶಾಂತಪಾಂಡವರು ದ್ರೌಪದಿ ವನವಾಸ
ಶ್ಯಾಮಸುಂದರ ಶರಣು ಸಜ್ಜನ ಗುರುಚಂದ್ರ ಭಾಸ
ಶಾಮ ಸಹಿತ ಬಹುಮುಕ್ತಿಯ ಪೊಂದಿದ ರುಕ್ಮಾಂಗದ ಪೋಷ
ಶಾಶ್ವತ ಸಲಹುವ ಪುರಂದರವಿಠಲ ಕಲಿಯುಗ ವೇಂಕಟೇಶ ೪

[ಈ ಪದದ ಕಡೆಯ ಮೂರು ನುಡಿಗಳ ಪಾಠ ತೀರ ಅಶುದ್ಧವಾಗಿದೆ ]

ಬಿಂಕವಾದ—ಹೆಮ್ಮೆಯ, ಶ್ರೇಷ್ಠವಾದ.

ವೇದಪೊಯ್ದನ—ಇಲ್ಲಿಂದ ಮುಂದೆ ದಶಾವತಾರಗಳ ವರ್ಣನೆ

ವೆಕ್ಕಸ ಇಹ—ಕ್ರೂರಿಯಾದ, ನಯವಿಲ್ಲದ

ಕಮ್ಮವಾಡಿ—ಆಳತೆ ವಾಡಿ , ಕಮ್ಮ ವಾಡಿ 'ಮೂರುತಿಯಲಿ' ಎಂದರೆ ವಾಮನಾವತಾರದ ಸೂಚನೆ

ಮುಂದಿನ ಸಾಲುಗಳಲ್ಲಿ 'ಕಡನಿಲ್ಲದೆ' 'ಟೀಕಿಮಾಡಿ' ಮೊದಲಾದ ಮಾತುಗಳೂ ಕಲ್ಕಿಯ ಅವತಾರದ ವರ್ಣನೆಯಲ್ಲಿ ಬಂದಿರುವ ವಿವರಗಳೊ ಅರ್ಥವಾಗುವುದಿಲ್ಲ ಕಡೆಯ ನುಡಿಯಲ್ಲಿ ಕಡೆಯ ಸಾಲೊಂದೇ ನೇರವಾಗಿರುವುದು

ಟಕ್ಕಿಸಿ—ಮೋಸ ಮಾಡಿ

ಟಂಕಿ ಬೆಳ್ಳಿಟಂಕಿ—ಉಡುಪಿಯ ವೈಶಿಷ್ಟ್ಯ ಈ ನಗರ ಬೆಳ್ಳಿಯ ಟಂಕಿ ನಾಣ್ಯದಂತೆ ಪ್ರಸಿದ್ಧ , ಈ ಊರಿಗೆ ಶಿವಬೆಳ್ಳಿಯೆಂಬ ಹೆಸರೂ ಇದೆ (ರಜತಪೀಠ)



ಸುರುಟ ಆದಿ

ಶರಣು ವೇಂಕಟರಮಣ ನಿನ್ನ
ಚರಣವ ನಂಬಿದೆ ನಾನು ಪ

ಕರುಣಾಸಾಗರ ಕಾಮಿತ ಫಲವೀವ
ಶರಣ ಭಕ್ತರ ಕಾವ ಗರುಡವಾಹನ ದೇವ ಅ

ಭಕ್ತವತ್ಸಲ ಹರಿಯೆ ನಮ್ಮ
ಭವದುರಿತ ಪರಿಹಾರನೆ
ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕ
ಶರಣಭಕ್ತರ ಕಾವ ಸುರಮುನಿಗಳ ದೇವ ೧

ಪಾಪವಿನಾಶಿನಿ ತೀರ್ಥ
ನಮ್ಮ ಪಾತಕವ ಪರಿಹರಿಸೆ
ಶ್ರೀವೇಂಕಟಗಿರಿ ಶ್ರೀವಾಸ
ಕೋನೇರಿ ತೀರ್ಥಾಧಿವಾಸ ನಿವಾಸ ೨

ದೇಶಕಧಿಕವಾದ ನಮ್ಮ
ಶೇಷಗಿರಿಯಲಿ ವಾಸ
ಶ್ರೀವೇಂಕಟಗಿರಿ ತಿರುಮಲೇಶ
ದಾಸದಾಸರ ಸಲಹುವ ಪುರಂದರವಿಠಲ ೩

ಭವದುರಿತ ಪರಿಹಾರನೆ—ಸಂಸಾರದ ಪಾಪಗಳನ್ನೆಲ್ಲ ತೊಡೆದುಹಾಕುವವನೆ
ಸುರಮುನಿಗಳ ಕಾವ—ದೇವತೆಗಳನ್ನೂ ಮುನಿಗಳನ್ನೂ ಕಾಪಿಡುವವನೆ
ಪಾಪವಿನಾಶಿನಿ ತೀರ್ಥ—ಬೆಟ್ಟದ ಮೇಲಿರುವ ಒಂದು ಕೊಳ
ಕೋನೇರಿ ತೀರ್ಥಾಧಿವಾಸ—ಸ್ವಾಮಿಪುಷ್ಕರಿಣೀತೀರ್ಥವನ್ನು ಇಲ್ಲಿ ಕೋನೇರಿ (ಕೋನೇರು) ಎಂದು ಕರೆಯಲಾಗಿದೆ , ಈ ಕೊಳದ ದಂಡೆಯ ಮೇಲೇ ವೇಂಕಟೇಶ್ವರನ ಗುಡಿಯಿರುವುದು

ತೋಡಿ ಅಟ

ದಾಸ ಶೇಷಾದ್ರಿವಾಸ ತಿಮ್ಮಪ್ಪನ
ದಾಸರನ ಕರೆದೊಯ್ದು
ಸಾಸಿರನಾಮ ವಿಲಾಸಮೂರ್ತಿಯು
ಲೇಸಾಗಿ ತೋರೆನಗೆ ಪ

ಬೆರಳು ಇಲ್ಲದ ಕೈಯೊಳುಂಡು ಜೀವಿಸುವನ
ಶಿರವಲಂದದ ದೇವನ
ಉರುವ ಶಾವಕೆ ತಾನು ಕರಿದಾಗಿ ಇರುವನ
ಶಿರದೊಳು ಧರಿಸಿದವನ
ಕೊರಳ ಮಾಲೆಯು ಪೆಸರೊಪ್ಪಿದ ಗಿರಿಯೊಳು
ಸ್ಥಿರವಾಗಿ ನೆಲಸಿಪ್ಪನ
ಕರುಣವಾರಿಧಿ ವೇಂಕಟೇಶನ ಚರಣವ
ಕರೆದೊಯ್ದು ತೋರೆನಗೆ ೧

ವಾರಿಯೊಳುದಿಸಿದ ನಾರಿಯು ಮಧ್ಯದಿ
ಏರಿಯೆ ಕುಳಿತವನ
ವಾರಿಜವದನದಿ ತೋರಿದ ಸಾರದ
ಮೂರೊಂದು ಪೆಸರವನ
ಮೇರುವಿನಗ್ರದಿ ಊರಿದ ಚರಣವ
ಸಾರಿದವರ ಜೀವನ
ಊರಿಗೆ ಕರೆದೊಯ್ದು ಶ್ರೀ ವೆಂಕಟೇಶ ಪ
ದಾರವಿಂದವ ತೋರೆನಗೆ ೨

ಸೋತ ಮಾನಿನಿಯೊಳು ಜಾತವಾಗಿಯೆ ಮೇಲೆ
ಮಾತೆಯ ಸಲಹಿದವನ
ನೀತಿ ತಪ್ಪಿಯೆ ನಡೆ ವಾತಭಕ್ಷಕರನ್ನು
ಘಾತಿಸಿ ತರಿದವನ
ನೂತನವಾಗಿಹ ನಾಮ ಶೈಲದ ಮೇಲೆ
ಕಾತರದೊಳು ನಿಂತನ
ಪಾತಕನಾಶನ ಶ್ರೀ ವೇಂಕಟೇಶನ
ರೀತಿಯ ತೋರೆನಗೆ ೩

ಋಷಿಯ ಮಕ್ಕಳಿಗೆಲ್ಲ ಹಸಿವಿಗೆ ಗುರಿಯಾಗಿ
ವಶತಪ್ಪಿ ನಡೆದವಳೆ
ಬಸಿರೊಳಗುದಿಸಿಯೆ ಬಿಸಿಯನೆಲ್ಲವ ತಿಂದು
ಎಸೆವಂದ ಮಹವೀರನ
ಪೆಸರೊಳಗೂಪ್ಪಿದ ಹಸನಾದ ಗಿರಿಯೊಳು
ಕುಶಲದಿ ನಿಂತವನ
ಸಸುಮುದ್ದು ಶ್ರೀ ವೇಂಕಟೇಶನ ಚರಣದ
ಬಿಸರುಹ ತೋರೆನಗೆ ೪

ಪಾದ ನಾಲ್ಕನು ಮೇದಿನಿಯೊಳಗೂರಿಯೆ
ಆದರಿಸುತ ಬಪ್ಪ ಮೇ
ಲಾದ ಪಾದವ ನಾಲ್ಕು ಅಂತರಿಕ್ಷದ ಮೇಲೆ
ಕಾದುಕೊಳ್ಳುತಲಿಪ್ಪನ
ಆದಿಯ ನಾಮಕ್ಕೆ ಅದ್ರಿಯನೊಡಗೊಂಡು
ಹಾದಿಯನಿತ್ತವನ
ನಾಧಿಸಿ ನಿಂತಿಹ ಶ್ರೀ ವೇಂಕಟೇಶನ
ಪಾದವ ತೋರೆನಗೆ ೫

ಆದಿನಾರಾಯಣನೆಂಬ ಪರ್ವತವನ್ನು
ಭೇದಿಸಿ ನಿಂತವನ
ಸಾಧಿಸಿ ಮುಂದಣ ವೇಂಕಟಾದ್ರಿಯ ಮೇಲೆ
ಪಾದವನೂರಿದನ
ಮೇದಿನಿಯೊಳಗುಳ್ಳ ಸಾಧು ಭಕ್ತರನೆಲ್ಲ
ಕಾದುಕೊಳುತಲಿಪ್ಪ ವಿ
ನೋದ ಮೂರುತಿಯಾದ ಶ್ರೀ ವೇಂಕಟೇಶನ
ಪಾದವ ತೋರೆನಗೆ ೬

ಅತ್ತೆಯ ವರಸೆಯ ಮತ್ತೆ ಅಳಿಯಗಾದ
ಪುತ್ರಿಯ ತಂದವನ
ಉತ್ತಮವಾಗಿಹ ಮಗಳ ಸನ್ನಿಧಿಯಲ್ಲಿ
ನಿತ್ಯದೊಳಿರುತಿಪ್ಪನ
ಬತ್ತಲೆಯಾಗಿಹ ಸತಿಯಳ ಸತ್ಯಕ್ಕೆ
ಪುತ್ರನೆಂದೆನಿಸಿದನ
ಹತ್ತಿರ ಕರೆದೊಯ್ಯು ಪುರಂದರವಿಠಲನ
ನಿತ್ಯದಿ ತೋರೆನಗೆ ೭

[ಈ ಪದದಲ್ಲಿ ಚಮತ್ಕಾರದ ವರ್ಣನೆಗಳಿದ್ದು ಸ್ವಾರಸ್ಯವಾಗಿದೆ, ಆಲೋಚನೆ ಮಾಡದಿದ್ದರೆ ಪುರಾಣ ಕಥೆಗಳ ಪರಿಚಯವಿಲ್ಲದಿದ್ದರೆ ಅರ್ಥವಾಗುವುದಿಲ್ಲ ]

ಬೆರಳು ಇಲ್ಲದ —ಇಡೀ ಮೊದಲ ನುಡಿ 'ಶೇಷಾಚಲವೆಂಬ ಬೆಟ್ಟದ ಮೇಲೆ ನೆಲೆಸಿರುವವನೆಂಬುದನ್ನು ಹೇಳುತ್ತದೆ ಅಷ್ಟೆ ಆದರೆ ಶೇಷಾಚಲವೆಂದು ನೇರವಾಗಿ ಹೇಳದೆ ಅದನ್ನು ಬಳಸಾಗಿ ಆದರೆ ರಂಜಕವಾಗಿ ಸೂಚಿಸಿದ್ದಾರೆ 'ಬೆರಳು ಇಲ್ಲದ ಕೈ (ಎಂದರೆ ಸೊಂಡಿಲು, ಸಂಸ್ಕೃತದಲ್ಲಿ ಸೊಂಡಿಲಿಗೆ ಕರವೆಂದೇ ಹೆಸರು) ಯೊಳುಂಡು ಜೀವಿಸುವನ' (ಎಂದರೆ ಆನೆಯು), 'ಶಿರದಲಂದದ ದೇವನ' (ಆನೆಯ ತಲೆಯಂತೆ ತಲೆಯುಳ್ಳವನ, ಎಂದರೆ ಗಣಪತಿಯು), 'ಉರುವ ಶಾಪಕೆ ತಾನು ಕಿರಿದಾಗಿ ಇರುವನ' (ಗಣಪತಿಯ ಶಾಪದಿಂದ ಕ್ಷಯವಾಗುವವನ, ಎಂದರೆ ಚಂದ್ರನ, ಕೃಷ್ಣಪಕ್ಷದ ದಿನಗಳಲ್ಲಿ ಚಂದ್ರನು ಬರುಬರುತ್ತ ಕಳಾಹೀನನಾಗುವನಷ್ಟೆ?), 'ಶಿರದೊಳು ಧರಿಸಿದವನ' (ಚಂದ್ರನನ್ನು ತಲೆಯ ಮೇಲಿರಿಸಿಕೊಂಡವನ, ಎಂದರೆ ಶಿವನ, ಚಂದ್ರಮೌಳಿಯು), 'ಕೊರಳ ಮಾಲೆಯು' (ಶಿವನ ಕೊರಳಲ್ಲಿ ಆಭರಣವಾಗಿ ಸುತ್ತಿಕೊಂಡಿರುವುದು, ಎಂದರೆ ಹಾವು, ಶೇಷ) 'ಪೆಸರೊಪ್ಪಿದ ಗಿರಿಯೊಳು' (ಶೇಷನ ಹೆಸರಿನಿಂದ ಪ್ರಸಿದ್ಧವಾದ ಬೆಟ್ಟದಲ್ಲಿ, ಎಂದರೆ ಶೇಷಾಚಲದಲ್ಲಿ), 'ಸ್ಥಿರವಾಗಿ ನೆಲಸಿಪ್ಪನ' (ನೆಲೆಗೊಂಡವನ)

ವಾರಿಯೊಳುದಿಸಿದ —ಈ ನುಡಿಯಲ್ಲಿ 'ಗರುಡಾದ್ರಿಯೆಂಬ ಹೆಸರಿನಿಂದ ಪ್ರಸಿದ್ಧವಾದ ಬೆಟ್ಟದ ಮೇಲೆ ನಿಂತವನು' ಎಂಬರ್ಥವನ್ನು ಸುತ್ತಿ ಸುತ್ತಿ ಹೊರಡಿಸಿದ್ದಾರೆ 'ವಾರಿಯೊಳುದಿಸಿದ ನಾರಿಯ ಮಧ್ಯದಿ' (ನೀರಿನಲ್ಲಿ ಹುಟ್ಟಿದ ತಾವರೆಯ ನಡುವೆ), 'ಏರಿಯೆ ಕುಳಿತವನ' (ವಿಷ್ಣುವಿನ ನಾಭಿಕಮಲದಲ್ಲಿ ಕುಳಿತವನು ಬ್ರಹ್ಮ), 'ವಾರಿಜ ವದನದಿ ತೋರಿದ' (ಬ್ರಹ್ಮನ ವದನಾರವಿಂದಗಳಿಂದ ಹೊರಬಂದ), 'ಮೂರೊಂದು ಪೆಸರವನ' (ಮೂರೊಂದು ಎಂದರೆ ನಾಲ್ಕು, ನಾಲ್ಕು ವೇದಗಳು,ವೇದದ ಹೆಸರನ್ನು ಹೊತ್ತವನು ಗರುಡ, ತಾರ್ಕ್ಷ್ಯ, ವೇದಾತ್ಮಕ), 'ಮೇರುವಿನಗ್ರದಿ' (ಮೇರು ಎಂದರೆ ಬೆಟ್ಟ, ತಿರುಮಲೆಯು ಮಹಾಮೇರುವಿನ ಒಂದು ಭಾಗವೆಂದು ಸ್ಥಳಪುರಾಣ ಹೇಳುತ್ತದೆ, ಬೆಟ್ಟದ ಮೇಲೆ) 'ಊರಿದ ಚರಣವ' (ನೆಲೆಯಾಗಿ ನಿಂತವನ)

ಸೋತಮಾನಿನಿಯೊಳು —'ಗರುಡಾಚಲ'ವೆಂಬುದನ್ನೇ ಈ ನುಡಿಯೂ ಎತ್ತಿಕೊಳ್ಳುತ್ತದೆ ಸೋತ ಮಾನಿನಿಯೊಳು (ವಿನತಾ, ಕದ್ರೂ ಎಂಬಿಬ್ಬರು ಕಶ್ಯಪನ ಹೆಂಡಿರಲ್ಲಿ ಸೆಣಸಾಟವಾಗಿ ವಿನತೆ ಸೋತಳು , ಅವಳ ಮಗ ಗರುಡ), 'ಮಾತೆ ಸಲಹಿದವನ' (ಸೋತು ತನ್ನ ಸವತಿಗೆ ದಾಸಿಯಾದ ವಿನತೆಗೆ ಗರುಡನು ದೇವಲೋಕದಿಂದ ಅಮೃತವನ್ನು ಕದ್ದು ತಂದುಕೊಟ್ಟನೆಂದು ವೇದದಲ್ಲೇ

ಬರುವ ಕತೆ), 'ನೀತಿ ತಪ್ಪಿಯೆ ನಡೆವಾತಭಕ್ಷಕರನ್ನು' ('ನೀತಿಯೆಂದರೆ ನಯನಕ್ಕೆ, ಓಡಿಯಾಟಕ್ಕೆ ಸಾಧನವಾದ ಕಾಲು, 'ಅದು ತಪ್ಪಿಯೆ' ಎಂದರೆ ಕಾಲುಗಳಿಲ್ಲದೆ ಸಾಗುವುದು, ಹಾವು, ಮತ್ತೆ 'ನಡೆವ ವಾತಭಕ್ಷಕ' ಎಂಬೆರಡು ಪದಗಳನ್ನು ಚಮತ್ಕಾರದಿಂದ ಕೂಡಿಸಿ 'ನಡೆವಾತಭಕ್ಷಕ' ಎಂದು ಮಾಡಿದ್ದಾರೆ 'ವಾತಭಕ್ಷಕ'ವೆಂದರೆ ಬರಿಯ ಗಾಳಿಯನ್ನುಂಡು ಬದುಕುವ ಪ್ರಾಣಿ ಹಾವೆಂದು ಪ್ರತೀತಿ), 'ಘಾತಿಸಿ ತರಿದವನ' (ಹಾವುಗಳನ್ನು ಕೊಲ್ಲುವುದು, ಗರುಡ), 'ನೂತನವಾಗಿಹ ನಾಮಶೈಲದ ಮೇಲೆ' (ಗರುಡಾದ್ರಿಯ ಮೇಲೆ)

ಋಷಿಯ ಮಕ್ಕಳಿಗಲ್ಲ —ಇದು ಅಂಜನಾದ್ರಿಯೆಂಬ ಮಾತಿಗೆ ಹಿನ್ನೆಲೆಯನ್ನು ಒದಗಿಸುತ್ತದೆ 'ಋಷಿಯ' (ಗೌತಮನ) 'ಮಕ್ಕಳಿಗಲ್ಲ ಹಸಿವೆಗೆ ಗುರಿಯಾಗಿ' (ಇಂದ್ರನಿಂದ ಮತ್ತು ಸೂರ್ಯನಿಂದ ಅಹಲ್ಯೆಯು ಪಡೆದುಕೊಂಡ ಮಕ್ಕಳನ್ನು ನಡೆಸಿಕೊಂಡು ಹೋಗುತ್ತಾ ಅವರ ಮೂಲವನ್ನು ಅರಿತು ಅವರನ್ನು ಕಪಿಮುಖಿ ರಾಗುವಂತೆ ಶಪಿಸಿದ ಕಥೆ , ಆದರೆ ಈ ಮಾತುಗಳ ಪಾಠ ಅಶುದ್ಧವಾಗಿದೆ, 'ಮಕ್ಕಳು ಮುನಿಸಿಗೆ ಗುರಿಯಾಗಿ' ಎಂದಿದ್ದರೆ ಚೆನ್ನು), 'ವಶತಪ್ಪಿ ನಡೆವವಳ' (ಅಹಲ್ಯೆ, ಗೌತಮರ ಮಗಳಾದ ಅಂಜನೆ, ಗುಟ್ಟಾಗಿ ವಾಯುವಿನಿಂದ ಗರ್ಭ ವನ್ನು ತಳೆದವಳು) 'ಬಸಿರೊಳಗುದಿಸಿಯೆ' (ಅವಳ ಮಗನಾದ ಹನುಮಂತ, ಆಂಜನೇಯ), 'ಬಿಸಿಯನೆಲ್ಲವ ತಿಂದು' (ಮಗುವಾಗಿರುವಾಗ ಸೂರ್ಯನನ್ನೇ ತಿನ್ನಲು ಹೊರಟನೆಂದು ಕಥೆ), 'ಎಸೆವಂಥ ಮಹವೀರನ' (ಹನುಮಂತ ಬಲವಂತನೆಂದು ಮಹಾವೀರನೆಂದೂ ಪ್ರಖ್ಯಾತಿ), 'ಪೆಸರಳೊಪ್ಪಿದ' (ಅಂಜ ನಾದ್ರಿ)

ಪಾದನಾಲ್ಕನು —ಇದು 'ವೃಷಭಾಚಲ' ಎನ್ನುವ ಮಾತನ್ನು ವಿವರಿಸುತ್ತದೆ 'ಪಾದ ನಾಲ್ಕನು ಮೇದಿನಿಯೊಳಗೂರಿಯೆ' (ವೃಷಭವೆಂದರೆ ಧರ್ಮವೆಂದು ಒಕ್ಕಣೆ, ಧರ್ಮವು ಹಸುವಿನ ರೂಪವನ್ನು ತಳೆದು ನಾಲ್ಕೂ ಕಾಲುಗಳನ್ನು ಭೂಮಿಯಲ್ಲಿ ಊರಿ ನಿಲ್ಲುವುದು ಕೃತಯುಗದಲ್ಲಿ), 'ಆದರಿಸುತ ಬಪ್ಪ ಮೇಲಾದ ಪಾದವ ನಾಲ್ಕು ಅಂತರಿಕ್ಷದ ಮೇಲೆ' (ಧರ್ಮ, ಅರ್ಥ, ಕಾಮ, ಮೋಕ್ಷ ಗಳೆಂಬ ಚತುರ್ವಿಧ ಪುರುಷಾರ್ಥಗಳು) 'ಕಾದುಕೊಳ್ಳುತಲಿಪ್ಪನ' (ಧರ್ಮ ರಕ್ಷಕನಾದ ವೃಷಭ ನಾಮಕನ) 'ಆದಿಯ ನಾಮಕ್ಕೆ ಅದ್ರಿಯನೊಡಗೂಡು' (ವೃಷಭಾದ್ರಿಯೆಂದಾಗಿ), 'ಹಾದಿಯನಿತ್ತವನ' (ಜನರಿಗೆ ಮಾರ್ಗದರ್ಶಕ ನಾದವನನ್ನು) 'ಸಾಧಿಸಿ' (ಮನ್ನಿಸಿ)

ಆದಿನಾರಾಯಣನೆಂಬ —ತಿರುಮಲೆಯ ಬೆಟ್ಟಸಾಲುಗಳಲ್ಲಿ ನಾರಾಯಣಾದ್ರಿಯೂ ಒಂದು ಇದನ್ನು ದಾಟಿದರೆ ಸಿಗುವುದು ವೇಂಕಟಾದ್ರಿ

ಅತ್ರಿಯ ಪರಸೆಯ —ಇದು ಅತ್ರಿಯು ಅನಸೂಯೆಯಿಂದ ದತ್ತಾತ್ರೇಯನೆಂಬ ವಿಷ್ಣುರೂಪದ ಮಗನನ್ನು ಪಡೆದುದನ್ನು ಹೇಳುತ್ತದೆ ಸಪ್ತರ್ಷಿಗಳಲ್ಲಿ ಒಬ್ಬನಾದ ಅತ್ರಿಯು ಬ್ರಹ್ಮನ ಮಗ ಕರ್ದಮನೆಂಬುವನೂ ಬ್ರಹ್ಮನ ಮಾನಸ ಪುತ್ರನೇ, ಇವನು ಸ್ವಾಯಂಭುವ ಮನುವಿನ ಮಗಳಾದ ದೇವಹೂತಿಯನ್ನು ಮದುವೆಯಾಗಿ, ಅನಸೂಯೆಯೆಂಬ ಮಗಳನ್ನು ಪಡೆದನು ಇವಳ ಪಾತಿವ್ರತ್ಯವನ್ನು ಪರೀಕ್ಷಿಸಲೆಂದು ತ್ರಿಮೂರ್ತಿಗಳೂ ಬಂದು ಅವಳು ಬೆತ್ತಲೆಯಾಗಿ ತಮಗೆ ಉಣಬಡಿಸಬೇಕೆಂದು ಕೇಳಿದಾಗ, ಆಕೆ ಮೂವರನ್ನೂ ಸಣ್ಣ ಮಕ್ಕಳನ್ನಾಗಿ ಮಾರ್ಪಡಿಸಿದ ಕಥೆ ಹಿನ್ನೆಲೆಯಾಗಿದೆ ಮೂವರೂ ಮುಂದೆ ಸೇರಿ ಒಂದು ವಿಗ್ರಹವಾಗಿ 'ದತ್ತಾತ್ರೇಯ'ನೆಂಬ ರೂಪ ಸಿದ್ಧವಾಯಿತು ಇದು ವಿಷ್ಣುವಿನ ಅವತಾರಗಳಲ್ಲಿ ಒಂದೆಂದು ಪ್ರಸಿದ್ಧವಾಗಿದೆ



ಭೈರವಿ ಅಟ್ಟ

ಶ್ರೀನಿವಾಸನು ಬಂದ ಕೋನೇರಿ ತಿಮ್ಮಪ್ಪ
ವಾಣಿಯರಸನಯ್ಯನು ಪ

ವೇಣುಗಾನಲೋಲ ಮೋಸಮಾಡಲು ಬಂದ
ದೀನ ರಕ್ಷಕನಯ್ಯ ಮೋಹನ ಕೃಷ್ಣ ಅ

ಪತಿತಪಾವನ ಬಂದ ಸಚ್ಚಿದಾನಂದನು
ಹಿತಕರನು ಬಂದ ನಿಖಿಳವೇದ
ಪ್ರತಿಪಾದ್ಯನು ಬಂದ ಹಿಗ್ಗುತಲಿನಿಂದ
ಮತಿಗೆಡಿಸಿ ಪೋದನಯ್ಯ ಮುದ್ದುರಂಗಯ್ಯಕೃಷ್ಣ ೧

ಉಡುಪಿ ನಿಲಯ ಬಂದ ಉಡುವನಂತ್ಹೊಳೆಯುತ
ತಟಿಯಂತೆ ಮರೆಯಾದ ಕಾಣಬಾರದ ವಸ್ತು
ಉಟ್ಟದ್ದು ತೊಟ್ಟದ್ದು ಇಟ್ಟದ್ದು ನೋಡಲು
ಅಷ್ಟು ಮಾಯವಯ್ಯ ಬಲು ಮಾಯವಯ್ಯ ೨

ಏಸು ಹರುಷವೊ ಏಸು ಕರುಣವೊ
ಕಾಸು ಬಾಳದ ಎನ ಮೇಲೆ ಮುದ್ದು ಕೃಷ್ಣಯ್ಯಗೆ
ವಾಸುಕಿಶಯನನು ತಂದೆ ಪುರಂದರವಿಠಲ
ಶೇಷಾದ್ರಿವಾಸನಯ್ಯ ಕೇಳಣ್ಣಯ್ಯ ೩

ಕೋನೇರಿ—ಸ್ವಾಮಿಪುಷ್ಕರಿಣೀ ಎಂಬ ಕೊಳ

ತಿಮ್ಮಪ್ಪ—ತಿರುಮಲೆಯಪ್ಪ

ವಾಣಿಯರಸನಯ್ಯನ—ಸರಸ್ವತಿಯ ಗಂಡನಾದ ಬ್ರಹ್ಮನ ತಂದೆಯ, ಎಂದರೆ ವಿಷ್ಣುವಿನ

ಮೋಸಮಾಡಲು ಒಂದ—ದೈತ್ಯರನ್ನು ವಂಚಿಸಿ ದೇವತೆಗಳಿಗೆ ಅಮೃತವನ್ನು ಒದಗಿಸಿ ಕೊಡಲು ಮೋಹಿನಿಯಾಗಿ

ಪತಿತವಾಹನ— ಪತತ್ರಿವಾಹನ ಎಂಬುದರ ರೂಪಾಂತರವೋ (ಪತತ್ರಿಯೆಂದರೆ ಪಕ್ಷಿ, ಗರುಡ ಅದನ್ನೇರಿ ಸಾಗುವವನು) ಅಥವಾ ಪತಿತ ಪಾವನ (ಪಾಪಿಗಳನ್ನು ಪವಿತ್ರಗೊಳಿಸುವವನು) ಎಂಬುದರ ಅಶುದ್ಧ ಪಾಠವೋ ಇದ್ದೀತು

ನಿಖಿಳವೇದಪ್ರತಿಪಾದ್ಯನು— ಎಲ್ಲ ವೇದಗಳೂ ಅವನ ಹಿರಿಮೆಯನ್ನು ಹೇಳಲೆಂದೇ ಹೊರಟಿರುವುವು

ಮತಿಗೆಡಿಸಿ—ನನ್ನನ್ನು ಮರುಳುಮಾಡಿ

ಉಡುಪನಂತೆ ಹೊಳೆಯುತ—ಚಂದ್ರನಂತೆ ಬೆಳಗುತ್ತ, 'ಉಡು', ನಕ್ಷತ್ರಗಳಿಗೆ, 'ಪ', ಒಡೆಯ, ಚಂದ್ರ

ತಟಿಯಂತೆ—ತಟಿತ್ತಿನಂತೆ, ಮಿಂಚಿನಂತೆ

ಕಾಣಬಾರದ ವಸ್ತು—ಕಾಣಲು ಬಾರದ ಇಂದ್ರಿಯಗೋಚರವಲ್ಲದ ತತ್ತ್ವ

ಅಷ್ಟು ಮಾಯವಯ್ಯ—ತುಂಬ ಮೋಹಕ

ಕಾಸುಬಾಳದ ಎನ್ನಮೇಲೆ—ನಿರ್ಗತಿಕನಾಗಿ, ಯೋಗ್ಯತೆಯೂ ಇಲ್ಲದ ನನ್ನನ್ನು ಕುರಿತು



## ೧೨೮

ಕಾಂಬೋದಿ ಏಕ

ನೋಡು ನೋಡು ವೆಂಕಟೇಶ
ನೋಡು ನೋಟವ ಅವನು
ಆಡುವಾಟವ
ಬೇಟೆಗಾಗಿ ಹೊರಟು ಬಂದ ಪ್ರಖ್ಯಾತವ ಪ

ಡಂಗುರವ ತೀಡಿ ಮೈಯೊಳು ಗಂಧ ಪೂಸಿದ
ಸ್ವಾಮಿ ಗಂಧ ಪೂಸಿದ ೧

ಪುಣುಗು ಜವ್ವಾಜಿ ಕಸ್ತೂರಿ ಹಚ್ಚಿದ
ಸ್ವಾಮಿ ಕಸ್ತೂರಿ ಹಚ್ಚಿದ ೨

ನೊಸಲಮೇಲೆ ಮೃಗನಾಭಿ ತಿಲಕ ಧರಿಸಿದ
ಸ್ವಾಮಿ ತಿಲಕ ಧರಿಸಿದ ೩

ಓರೆ ತುರುಬ ಓರೆ ಜಡೆಯ ಗೊಂಡೆ ಕಟ್ಟಿದ
ಸ್ವಾಮಿ ಗೊಂಡೆ ಕಟ್ಟಿದ ೪

ಎಂಟು ಎಂಟು ಮುತ್ತಿನ ವಂಟಿ ಇಟ್ಟನೆ
ಸ್ವಾಮಿ ವಂಟಿ ಇಟ್ಟನೆ ೫

ಕಂಠದಲ್ಲಿ ಕೌಸ್ತುಭ ಆಭರಣವಿಟ್ಟನೆ
ಸ್ವಾಮಿ ಆಭರಣವಿಟ್ಟನೆ ೬

ಪಾದದಲ್ಲಿ ಹೊನ್ನಂದುಗೆ ನೂಪುರವಿಟ್ಟನೆ
ಸ್ವಾಮಿ ಬಾಪುರಿ ಇಟ್ಟನೆ ೭

ಕಿರುಗೆಜ್ಜೆ ಪಾಡಗ ಪೆಂಡೆ ಕಾಲಲಿಟ್ಟನೆ
ಸ್ವಾಮಿ ಕಾಲಲಿಟ್ಟನೆ ೮

ಅಂಗುಲಿಗೆ ತಕ್ಕಂಥ ಉಂಗುರವಿಟ್ಟನೆ
ಸ್ವಾಮಿ ಹೊನ್ನುಂಗುರವಿಟ್ಟನೆ ೯

ತೋಳರಕ್ಷಮಣಿ ಹಸ್ತಕಡಗ ಇಟ್ಟನೆ
ಸ್ವಾಮಿ ಕಡಗ ಇಟ್ಟನೆ ೧೦

ಹಾರಪದಕ ಹುಲಿಯುಗುರು ವೈಜಯಂತಿಯು
ಕೊರಳೊಳು ವೈಜಯಂತಿಯು ೧೧

ದುಂಡು ಮುತ್ತು ಕಟ್ಟಿ ಸರಿಗೆ ತಾಳಿ ದರಿಸಿದ
ಸ್ವಾಮಿ ತಾಳಿ ಧರಿಸಿದ ೧೨

ಬಂದಿಕಂಕಣ ಬಾವುರಿ ವಂಕಿ ಇಟ್ಟನೆ
ಸ್ವಾಮಿ ವಂಕಿ ಇಟ್ಟನೆ ೧೩

ಶೃಂಗಾರದ ಜರತರದ ಅಂಗಿ ತೊಟ್ಟನೆ
ಸ್ವಾಮಿ ಅಂಗಿ ತೊಟ್ಟನೆ ೧೪

ಅಂಗಳದಲ್ಲಿ ಭಂಗಾರದ ಕವಚವಿಕ್ಕಿದ
ಸ್ವಾಮಿ ಕವಚವಿಕ್ಕಿದ ೧೫

ದಿಟ್ಟ ವೇಂಕಟೇಶ ಬೇಟೆಯಾಡ ಹೊರಟನೆ
ಸ್ವಾಮಿ ಬೇಟೆಯಾಡ ಹೊರಟನೆ ೧೬

ಪಟ್ಟವಾಳಿ ಶಾಮಿಯ ಕಸೆಯ ಬಿಗಿದನೆ
ಸ್ವಾಮಿ ಕಸೆಯ ಬಿಗಿದನೆ ೧೭

ಹುಡಿಯಕಟ್ಟು ನಡುವಿಗೆ ಕಟ್ಟಾಣಿ ಹೊಗಿಸಿದ
ಸ್ವಾಮಿ ಕಟ್ಟಾಣಿ ಹೊಗಿಸಿದ ೧೮

ಓರೆ ತುರುಬಿನ ನಾಯಕ ಬಾರದ್ಹೋದನೆ
ಸ್ವಾಮಿ ಬಾರದ್ಹೋದನೆ ೧೯

ಚೆಲುವ ಚೆನ್ನಿಗರಾಯನಾಗಿ ವನಕೆ ಹೊರಟನೆ
ಸ್ವಾಮಿ ವನಕೆ ಹೊರಟನೆ ೨೦

ಜಗವೆಲ್ಲ ನೋಡುತಿರಲು ತೇಜಿಯೇರಿದ
ಸ್ವಾಮಿ ತೇಜಿಯೇರಿದ ೨೧

ತ್ರಿಜಗವನ್ನೆ ಪಾಲಿಸೆಂದು ತೇಜಿ ಹಿಡಿದನೆ
ಸ್ವಾಮಿ ವಾಜಿ ಹಿಡಿದನೆ ೨೨

ಗಟ್ಟಬೆಟ್ಟವನ್ನೆ ಸುತ್ತಿ ಕಷ್ಟಬಟ್ಟನೆ
ಸ್ವಾಮಿ ಕಷ್ಟಬಟ್ಟನೆ ೨೩

ವೃಕ್ಷ ಮೂಲದಲ್ಲಿ ಮಿಂಚುತಿಹಳ ಕಂಡನೆ
ಸ್ವಾಮಿ ಮಿಂಚುತಿಹಳ ಕಂಡನೆ ೨೪

ಸೋಲಮುಡಿಯು ನೋಗೆಗಣ್ಣ ಓರೆನೋಟವ
ಅವಳ ಓರೆನೋಟವ ೨೫

ನೀಲವರ್ಣದ ಕೋಮಲಾಂಗಿ ಮೇಲೆ ಛಾಯವ
ಅವಳ ಮೇಲೆ ಛಾಯವ ೨೬

ಎರಳೆಗಂಗಳಂತೆ ಕಣ್ಣ ತಿರುಗುತಿರುವಳು
ಅವಳು ಹೊಳೆಯುತಿರುವಳು ೨೭

ಮೃಗವ ಕಂಡು ಎರವನೆತ್ತಿ ನೋಡುತಿರುವಳು
ಅವಳು ನೋಡುತಿರುವಳು ೨೮

ಕುಂಜರಗಮನೆಯಂತೆ ತಿರುಗುತಿರುವಳು
ಅವಳು ಒಲೆವುತಿರುವಳು ೨೯

ವನವ ಬಿಟ್ಟು ವನಕೆ ವನಕೆ ಹಾರುತಿರುವಳು
ಅವಳು ಹಾರುತಿರುವಳು ೩೦

ಅವಳ ಕಂಡು ವೆಂಕಟೇಶ ಭ್ರಾಂತಿಬಟ್ಟನೆ
ಸ್ವಾಮಿ ಭ್ರಾಂತಿಗೊಂಡನೆ ೩೧

ಅಡ್ಡದಾರಿಯಲ್ಲಿ ಮೋರೆ ನೋಡುತ್ತಿದ್ದನೆ
ಸ್ವಾಮಿ ನೋಡುತ್ತಿದ್ದನೆ ೩೨

ದಾರಿಗಡ್ಡ ನಿಂದಿರಲಾರ ಹೀನ ರಾವುತ
ಎಲೊ ಹೀನ ರಾವುತ ೩೩

ಪರನಾರಿಯರ ಕಂಡು ಮೋರೆ ಹೇಗೆ ಮಾಡುತಿ
ಎಲೊ ಹೇಗೆ ಮಾಡುತಿ ೩೪

ಹೀನನಲ್ಲವೆ ನಿನ್ನ ಹುಡುಕ ಬಂದೆನೆ
ನಿನ್ನ ಹುಡುಕ ಬಂದೆನೆ ೩೫

ನಿನ್ನ ಗುರುಕುಚಗಳ ಕಂಡು ಭ್ರಾಂತಿಗೊಂಡೆನೆ
ನಾನು ಭ್ರಾಂತಿಗೊಂಡೆನೆ ೩೬

ಲಂಡ ಪುಂಡರ ಮಾತು ಆಡದಿರೊ
ಎನ್ನ ಕೂಡಾಡದಿರೊ ೩೭

ಕತ್ತಿ ಕರಾರಿ ನಿನ್ನ ಸೇನೆಗಂಜೆನೊ
ನಾನು ಸೇನೆಗಂಜೆನೊ ೩೮

ನಿನ್ನ ಬಿರುದ ಬಿಟ್ಟುಕೊಟ್ಟು ಬಾರೆ ಚುಂಚುಕಿ
ಬೇಗ ಬಾರೆ ಚುಂಚುಕಿ ೩೯

ಬಾರೆ ಹೋಗೆನ್ನಲಿಕ್ಕೆ ಭಾಮಯೆ ನಾನು
ಎಲೊ ಭಾಮೆಯೆ ನಾನು ೪೦

ನಿನ್ನ ಬಿಂಕ ಬಿಟ್ಟುಕೊಟ್ಟು ತಿರುಗೊ ರಾವುತ
ಅತ್ತ ಸಾರೊ ರಾವುತ ೪೧

ನೀಲವೇಣಿ ಎನ್ನ ಕೂಡೆ ನಿಲ್ಲಲಾರೆಯು
ಎನ್ನೊಳ್ ನಿಲ್ಲಲಾರೆಯು ೪೨

ನಿನ್ನ ಮುಖ ಪದ್ಮಗಳ ಕಂಡು ಭ್ರಾಂತಿಗೊಂಡೆನೆ
ನೀರೆ ಭ್ರಾಂತಿಗೊಂಡೆನೆ ೪೩

ಹೀನ ಮಾತನಾಡದಿರೊ ಹೀನ ರಾವುತ
ಎಲೊ ಹೀನ ರಾವುತ ೪೪

ವಾರಿಜಾಕ್ಷಿ ಎನ್ನ ಕೂಡೆ ವಾದವೇತಕೆ
ಎಲೆ ವಾದವೇತಕೆ ೪೫

ಪ್ರೇಮದಿಂದ ಬಂದು ತೊಡೆಯ ಮೇಲೆ ಏರೆ ಚುಂಚುಕಿ
ಮೇಲೆ ಏರೆ ಚುಂಚುಕಿ ೪೬

ತೊಡೆಯ ಮೇಲೆ ಏರಲಿಕ್ಕೆ ಮಡದಿಯೆ ನಾನು
ಎಲೊ ಮಡದಿಯೆ ನಾನು ೪೭

ಹೀನ ಮಾತನಾಡದಿರೋ ಹುಡುಗ ರಾವುತ
ಎಲವೊ ತುಡುಗ ರಾವುತ ೪೮

ರಾಜ್ಯಭೂಮಿಗಳನು ನಾನು ಅಷ್ಟು ಕೊಡುವೆನು
ನಿನಗೆ ಬಿಟ್ಟುಕೊಡುವೆನು ೪೯

ನಿನ್ನೊಡೆಯನೆಂದು ಪಾಲಿಸೆ ಚುಂಚುಕಿ
ಬೇಡಿಕೊಂಬೆ ನಾಯಕಿ ೫೦

ರಾಜ್ಯ ಭೂಮಿಯಾಳಲಿಕ್ಕೆ ರಾಯನೇ ನಾನು
ಎಲೊ ರಾಯನೇ ನಾನು ೫೧

ದೊಡ್ಡ ಅಡವಿ ಬೆಟ್ಟದೊಳಗೆ ಆಹಾರವೇನೊ
ಎಲೊ ಆಹಾರವೇನೊ ೫೨

ಆಲದಂತಿಹ ಹಣ್ಣು ಮುಟ್ಟಬಾರದ ಹಣ್ಣು
ಮುಟ್ಟಬಾರದ ಹಣ್ಣು ೫೩

ಮುದ್ದು ಸುರಿವ ಹೂ ಬಹಳ
ಮುದ್ದು ಸುರಿವ ಹೂ ೫೪

ಕರೆಯ ಬಾರದಾ ಹಣ್ಣು ಕೈಗೆ ನಿಲಕಾದ
ಹಣ್ಣು ಕೈಗೆ ನಿಲಕಾದ ೫೫

ಎಷ್ಟು ಪೇಳ್ದರು ಕೇಳಲಿಲ್ಲ ಏನ ಮಾಡಲಿ
ಇನ್ನೇನು ಮಾಡಲಿ ೫೬

ಅಡವಿಯೊಳಗೆ ದಾರಿಲ್ಲೆಂದು ಜುಲ್ಮೆಮಾಡಿದ
ಸ್ವಾಮಿ ಜುಲ್ಮೆಮಾಡಿದ ೫೭

ಸ್ವಾಮಿ ಪುಷ್ಕರಣಿಯ ತೀರದಲ್ಲಿ ವಾಸಮಾಡಿದ
ಸ್ವಾಮಿ ವಾಸಮಾಡಿದ ೫೮

ವರಹವತಾರ ತಾನೆಂದು ಅರಸನಾದನೆ
ಸ್ವಾಮಿ ಅರಸನಾದನೆ ೫೯

ಕೊಲ್ಲಾಪುರದಲ್ಲಿ ತನ್ನ ನಾರಿಯಿಟ್ಟನೆ
ಸ್ವಾಮಿ ನಾರಿಯಿಟ್ಟನೆ ೬೦

ಬೆಟ್ಟ ನಡೆವರಿಲ್ಲವೆಂದು ಕೃಷ್ಣ ನಡೆದನೆ
ಸ್ವಾಮಿ ಕೃಷ್ಣ ನಡೆದನೆ ೬೧

ಸ್ವಾಮಿ ವೆಂಕಟೇಶ ತಾನು ಬೇಟೆಯಾಡಿದ
ಸ್ವಾಮಿ ಬೇಟೆಯಾಡಿದ ೬೨

ಅಪ್ಪ ವೆಂಕಟೇಶ ತಾನು ಒಪ್ಪದಿಂದಲಿ
ಸ್ವಾಮಿಗಿರಿಗೆ ಬಂದನೆ ೬೩

ಶ್ರೀಶ ಪುರಂದರವಿಠಲನೆಂದು ಹಾಗೆ ನಿಂದನೆ
ಸ್ವಾಮಿ ಹಾಗೆ ನಿಂದನೆ ೬೪



೧೨೯

ಯಮುನಾಕಲ್ಯಾಣಿ ಅಟ್ಟ

ಪನ್ನಗಾದ್ರಿಪತಿ ನಮಗೆ ನೀ ಗತಿ
ಯೆಂಬುವ ಮತಿಯರಿತು ಈ ಸ್ಥಿತಿ ಪ

ವೈಕುಂಠವಾಸ ವರಮಂದಹಾಸ
ಭಕ್ತರುಲ್ಲಾಸ ಲಕ್ಷ್ಮೀವಿಲಾಸ ೧

ಮಾನವ ವೇಷ ಮಂಜುಳ ಭಾಷ
ವಿನುತ ವಿಶೇಷ ಕೌಸ್ತುಭ ಭೂಷ ೨

ಶಂಕಿಸುತಿರಲು ಸಾಕುವ ಬಾಲ
ಸಂಖ್ಯೆಯು ಬಲ್ಲ ಪುರಂದರವಿಟ್ಠಲ ೩

ಪನ್ನಗಾದ್ರಿಪತಿ—ಪನ್ನಗ (ಹಾವು, ಶೇಷ), ಅದ್ರಿ (ಬೆಟ್ಟ), ಶೇಷಾಚಲಪತಿ

ಭಕ್ತರುಲ್ಲಾಸ—ತನ್ನನ್ನು ಮೊರೆಹೊಕ್ಕವರಿಗೆ ಧೈರ್ಯಸಂತೋಷಗಳನ್ನುಂಟು ಮಾಡುವ

ಮಂಜುಳಭಾಷ—ಸವಿಯಾದ ಮಾತನಾಡುವವನು

ಕೌಸ್ತುಭ—ವಿಷ್ಣುವಿನ ಎದೆಯ ಮೇಲಿರುವ ಆಭರಣ ವಿಶೇಷ

ಬಾಲ—ವೇಂಕಟೇಶ್ವರನು ಕುಮಾರರೂಪಿಯೆಂಬ ಪ್ರತೀತಿಯ ಸೂಚನೆ.

ಸಂಖ್ಯೆಯು—ಸಾಂಖ್ಯವೆಂದರೆ ಮೋಕ್ಷ , ಇಲ್ಲಿ ಮೋಕ್ಷಕ್ಕೆ ದಾರಿ

ಆನಂದಭೈರವಿ ಏಕ

ನಿನ್ನನೇ ನಂಬಿದೆ ನೀರಜನಯನ
ಎನ್ನ ಪಾಲಿಸೋ ಇಂದಿರಾರಮಣ ಪ

ಗೌತಮ ಮುನಿಯ ಶಾಪದಲಿ ಅಹಲ್ಯೆಯು
ಪಥದೊಳು ಶಿಲೆಯಾಗಿ ಮಲಗಿರಲು
ಪತಿತಪಾವನ ನಿನ್ನ ಪಾದ ಸೋಕಿ ಸತಿಯಾಗೆ
ಅತಿಶಯದಿ ಭಕುತರನು ಕಾಯಿದನೆಂಬೋದು ಕೇಳಿ ೧

ಬಲವಂತ ಉತ್ತಾನಪಾದರಾಯನಣುಗನ
ಮಲತಾಯಿ ನೂಕಲಡವಿಯೊಳಗೆ
ಜಲಜಾಕ್ಷ ನಿನ್ನನು ಕುರಿತು ತಪವಿ
ರಲಾಗೆ ನೀನವಗೆ ಧ್ರುವ ಪಟ್ಟಕಟ್ಟಿದ್ದು ಕೇಳಿ ೨

ಸುರನರಲೋಕದಿ ಪುಣ್ಯದ ಜನರನ್ನು
ಪೊರೆಯಬೇಕೆಂದು ವೈಕುಂಠದಿಂದ
ಸಿರಿಸಹಿತದಿ ಬಂದು ಶೇಷಾಚಲದಿ ನಿಂದು
ಕರುಣಿ ಶ್ರೀ ಪುರಂದರವಿಠಲನೆಂಬುದ ಕೇಳಿ ೩

ಗೌತಮಮುನಿಯ —ರಾಮಾವತಾರದಲ್ಲಿ
ಬಲವಂತ —ಧ್ರುವೋಪಾಖ್ಯಾನ
ಸುರನರಲೋಕದಿ —'ತ್ಯಕ್ತ್ವಾ ವೈಕುಂಠಮುತ್ತಮಂ, ಸ್ವಾಮಿಪುಷ್ಕರಿಣೀತೀರೇ ರಮಯಾ ಸಹ ಮೋದತೇ' ಎಂಬ ಸ್ಥಳಪುರಾಣೋಕ್ತಿಯ ಛಾಯೆ

ಸೌರಾಷ್ಟ್ರ                                                                ಆದಿ

ಮಂಗಳಂ ಜಯ ಮಂಗಳಂ
ಮಂಗಳಂ ಶುಭ ಮಂಗಳಂ ಪ

ಅಕ್ರೂರಗೊಲಿದ ತ್ರಿವಿಕ್ರಮಗೆ
ನಕ್ರನ ಗೆಲಿದ ಪರಾಕ್ರಮಿಗೆ
ಶಕ್ರನ ಗರ್ವಾಪಹಾರವ ಮಾಡಿದ
ಶುಕ್ರನ ಶಿಷ್ಯನ ಗೆಲಿದವಗೆ ೧

ಗಂಗೆಯ ಪಡೆದ ಶ್ರೀರಂಗನಿಗೆ
ರಂಗು ಮಾಣಿಕದುಂಗುರದವಗೆ
ಭೃಂಗ ಕುಂತಳೆಯರ ವ್ರತವನೆ ಕೆಡಸಿದ
ಅಂಗಜನಯ್ಯ ಶುಭಾಂಗನಿಗೆ ೨

ಧರೆಯೊಳಧಿಕ ವೇಂಕಟಾಚಲಗೆ
ಸ್ಥಿರವಾಗಿ ಪುಷ್ಕರಿಣಿಲಿ ನೆಲಸಿಹಗೆ
ಪರತತ್ವ ಶ್ರೀ ಪುರಂದರವಿಠಲಗೆ
ವರವೇಂಕಟ ಶ್ರೀನಿವಾಸನಿಗೆ ೩

ಅಕ್ರೂರಗೊಲಿದ—ಕಂಸನ ಮಂತ್ರಿಯಾದ ಇವನು ಕಂಸನಾಣತಿಯಂತೆ ಕೃಷ್ಣ ಬಲರಾಮರನ್ನು ಮಧುರೆಗೆ ಕರೆತರುವಾಗ, ಯಮುನಾ ತೀರದಲ್ಲಿ ಕೃಷ್ಣನ ದಿವ್ಯ ಸ್ವರೂಪವನ್ನು ಮನಗಂಡು ಭಕ್ತನಾದ

ತ್ರಿವಿಕ್ರಮ—ವಾಮನಾವತಾರದಲ್ಲಿ ಬಲಿ ಚಕ್ರವರ್ತಿಯಿಂದ ಮೂರು ಹೆಜ್ಜೆಗಳನ್ನು ದಾನವಾಗಿ ಪಡೆದುಕೊಂಡು ಭೂಲೋಕ, ಅಂತರಿಕ್ಷ, ಸ್ವರ್ಲೋಕಗಳನ್ನೆಲ್ಲ ತನ್ನ ಕಾಲಿನಿಂದಲೇ ಅಳೆದವನು, ವಿಷ್ಣು

ನಕ್ರನ ಗೆಲಿದ ಪರಾಕ್ರಮಿ—ಗಜೇಂದ್ರಮೋಕ್ಷದ ಸಂದರ್ಭದಲ್ಲಿ ಮೊಸಳೆಯನ್ನು ಕೊಂದು ಆನೆಯನ್ನು (ಇಂದ್ರದ್ಯುಮ್ನನನ್ನು) ಕಾಪಾಡಿದವನು

ಶಕ್ರನ ಗರ್ವಾಪಹಾರವ ಮಾಡಿ—ಗೋವರ್ಧನೋದ್ಧರಣ ಪ್ರಸಂಗ ಇಂದ್ರನು ತನಗೆ ಪೂಜೆ ಸಲ್ಲಿಸಲಿಲ್ಲವೆಂದು ಗೋವಳರ ಮೇಲೆ ಸಿಟ್ಟಿಗೆದ್ದು ಸುರಿಮಳೆಯನ್ನು ಸುರಿಸಲು, ಕೃಷ್ಣನು ಬೆಟ್ಟವನ್ನೆತ್ತಿ ಗೋವಳರನ್ನೂ ಹಸುಕರುಗಳನ್ನೂ ಕಾಪಾಡಿದನು

ಶುಕ್ರನ ಶಿಷ್ಯನ ಗೆಲಿದವ—ಶುಕ್ರಾಚಾರ್ಯನ ಶಿಷ್ಯನಾದ ಬಲಿಚಕ್ರವರ್ತಿಯನ್ನು ಭೂಮಿಯಿಂದ ಪಾತಾಳಕ್ಕೆ ತುಳಿದನು (ವಾಮನಾವತಾರ)

ಭೃಂಗಕುಂತಳೆಯರ ವ್ರತವನೆ ಕೆಡಿಸಿದ—ದುಂಬಿಗಳು ಬಂದಡರುವಂತೆ ಹೂವುಗಳನ್ನು ಮುಡಿದು ಸುವಾಸನೆಯು ಜಡೆಗಳನ್ನುಳ್ಳ ಹೆಂಗಳೆಯರು (ಗೋಪಿಯರು) ತನ್ನನ್ನು ಮೋಹಿಸುವಂತೆ ಮಾಡಿದ

ಅಂಗಜನಯ್ಯ—ಮನ್ಮಥನ ತಂದೆ

ಪುಷ್ಕರಿಣಿಲಿ—ಸ್ವಾಮಿ ಪುಷ್ಕರಿಣೀತೀರ್ಥದ ದಂಡೆಯ ಮೇಲೆ



# ತೊರವೆ

ಬಿಜಾಪುರ ಜಿಲ್ಲೆಯಲ್ಲಿ ಬಿಜಾಪುರಕ್ಕೆ ನಾಲ್ಕು ಮೈಲು ದೂರವಿರುವ ಹಳ್ಳಿ ತೊರವೆ ಒಂದು ಕಾಲದಲ್ಲಿ ದೊಡ್ಡ ಪಟ್ಟಣವಾಗಿದ್ದಿತು ಅಲ್ಲಿರುವ ಹಲವು ದೇವಾಲಯಗಳಲ್ಲಿ ನರಸಿಂಹನದು ಮುಖ್ಯವಾದುದು ಇದು ಭೂಮಿಯೊಳಗೆ ಗುಹೆಯಲ್ಲಿರುವುದು ವಿಶೇಷ ಗುಡಿಯಲ್ಲಿರುವ ಮೂರ್ತಿ ಶಾಲಿಗ್ರಾಮಶಿಲೆಯಲ್ಲಿ ಕಡೆದದ್ದೆಂದು ಹೇಳುತ್ತಾರೆ ತೊರವೆಯ ನರಹರಿ (ಕುಮಾರ ವಾಲ್ಮೀಕಿ) ತನ್ನ ಕನ್ನಡ ರಾಮಾಯಣ ಕಾವ್ಯವನ್ನು ರಚಿಸಿದ್ದು ಇಲ್ಲಿಯೇ ಕ್ರಿಸ್ತಾಬ್ದ 1500ರ ಸುಮಾರಿಗೆ ರಚಿತವಾದ ಈ ಕೃತಿಯು ತೊರವೆ ರಾಮಾಯಣವೆಂದೇ ಬಳಕೆಯಲ್ಲಿದೆ ಪುರಂದರದಾಸರ ಒಂದು ಪದದಲ್ಲಿ ಈ ಗುಡಿಯ ನರಸಿಂಹಮೂರ್ತಿಯ ಘೋರಾಕಾರದ ವರ್ಣನೆ ಯಿದೆ ಅವರದ್ದು ಮೂರು ಪದಗಳು ತೊರವೆಯನ್ನು ಕುರಿತಂತೆ ದೊರೆತಿವೆ

ದರ್ಬಾರು | ಅಟ್ಟ

ಇದು ಏನಂಗ ಮೋಹನಾಂಗ ಪ
ಮದನಜನಕ ತೂರವೆಯ ನರಸಿಂಹ ಅ

ಸುರರು ನುತಿಸಿದರೆ ತಂಟೆಯ ಮಿಸುಕದವ
ಮರೆದೇತಕೆ ಬಾಯ ತೆರೆದೆ ಪೇಳೊಮ್ಮೆ ೧

ವರ ನೀಲ ಮುತ್ತು ಮಾಣಿಕ ಹಾರಗಳಿರೆ
ಕೊರಳಲ್ಲಿ ಕರುಳಮಾಲೆಯನ್ನಿಟ್ಟು ಮೆರೆವುದು ೨

ತೊರವೆಯ ನರಹರಿ ಪುರಂದರವಿಠಲ
ಸಿರಿಯಿಪ್ಪ ತೊಡೆಯೊಳು ಅರಿಯನಿಟ್ಟಿರುವುದು ೩

ಇದು ಏನಂಗ—ಇದು ಯಾವ ಮಾಟ? ಏನು ಬಗೆ? ಇದು ಸರಿಯೇ ಎಂಬ ತಾತ್ಪರ್ಯ.

ಸಿರಿಯಿಪ್ಪ ತೊಡೆಯೊಳು—ಲಕ್ಷ್ಮೀದೇವಿ ಕೂಡುವ ತೊಡೆಯ ಮೇಲೆ ದಾನವನನ್ನು ಅಡ್ಡಲಾಗಿಸಿ ಅವನನ್ನು ಕೊಲ್ಲುವುದು ಸರಿಯೆ?



ಧನ್ಯಾಸಿ                                                    ಅಟ್ಟ

ಮುದ್ದು ತಾರೋ ರಂಗ ಎದ್ದು ಬಾರೊ                    ಪ
ಅಂದವಾದ ಕರ್ಪೂರದ ಕರಡಿಗೆಯ ಬಾಯೊಳೊಮ್ಮೆ    ಅ

ವಿಷವನುಣಿಸಲು ಒಂದ
ಅಸುರೆ ಪೂತಣಿಯ ಕೊಂದೆ
ವಶವಲ್ಲವೊ ಮಗನೆ ನಿನ್ನ
ವಿಷವನುಂಡ ಬಾಯೊಳೊಮ್ಮೆ                    ೧

ಕಡೆವ ಸಮಯದಿ ಬಂದು
ಕಡೆವ ಸತಿಯ ಕೈಯ ಪಿಡಿದು
ಕಡೆದ ಬೆಣ್ಣೆ ಮೊಸರನ್ನೆಲ್ಲ
ಒಡನೆ ಮೆದ್ದ ಬಾಯೊಳೊಮ್ಮೆ                    ೨

ತೊರವೆಯ ನಾರಸಿಂಹ
ವರದ ಪುರಂದರವಿಠಲ
ಹರವಿ ಹಾಲನ್ನೆಲ್ಲ ಕುಡಿದ
ನೊರೆ ಹಾಲಿನ ಬಾಯೊಳೊಮ್ಮೆ                    ೩

ಕರ್ಪೂರದ ಕರಡಿಗೆಯ ಬಾಯೊಳು—ಕರ್ಪೂರವಿರಿಸುವ ಕರಂಡ, ಸಂಪುಟ, ಅದ ರಂತೆ ಅಂದವಾಗಿರುವ ಬಾಯಿಯಲ್ಲಿ

## ೧೩೪

ಧನ್ಯಾಸಿ ಆದಿ

ದಾನವನ ಕೊಂದದ್ದಲ್ಲ ಕಾಣಿರೊ ಪ
ಗಾನ ವಿನೋದಿ ನಮ್ಮ ತೊರವೆಯ ನರಸಿಂಹ ಅ

ಅಚ್ಚ ಪುರುಷನೆಂಬ ಸ್ವಚ್ಛರತ್ನ ಒಡಲೊಳು
ಬಿಚ್ಚಿ ಬೆದಕಿ ನೋಡಿದರ ಇನ್ನೆಷ್ಟು ಇದ್ದಾವೊ ಎಂದು ೧

ನೆಂಟತನವು ಬೆಳೆಯಬೇ
ಕೆಂದು ಕರುಳ ಕೊರಳೊಳು
ಗಂಟು ಹಾಕಿಕೊಂಡನೆಷ್ಟೊ
ದೇಹ ಸಂಬಂಧದಿಂದ ೨

ತೊರವೆಯ ನಾರಸಿಂಹ
ಪ್ರಹ್ಲಾದ ಪಾಲಕ
ಉರಿಮೋರ ನೃಪ ನಮ್ಮ ಪುರಂದರವಿಠಲ ೩

[ನರಸಿಂಹಾವತಾರದ ಸ್ವಾರಸ್ಯವು ಕೋಪದಿಂದ ಹಿರಣ್ಯಕಶಿಪುವನ್ನು ಕೊಂದದ್ದಲ್ಲ, ಪೂರ್ವಜನ್ಮದಲ್ಲಿ ತನ್ನ ಪರಿಚಾರಕರೇ ಆದ ಜಯವಿಜಯರನ್ನು, ಸಾತ್ತ್ವಿಕರಾದರೂ ಕಾರಣಾಂತರದಿಂದ ದಾನವರಾಗಿ ಹಿರಣ್ಯಾಕ್ಷ–ಕಶಿಪುಗಳೆಂದು ಮೈದಳೆದವರನ್ನು, ಕರುಣೆಯಿಂದ ಉದ್ಧರಿಸಲೆಂದೇ ನರಸಿಂಹನಾಗಿ ವಿಷ್ಣುವು ಅವತರಿಸಿದ್ದು ]

ಅಚ್ಚಪುರುಷ—ಒಳ್ಳೆಯ ಮನುಷ್ಯ, ಸಾತ್ತ್ವಿಕ

ನೆಂಟತನವು —ವೈಕುಂಠದ ದ್ವಾರಪಾಲಕನಾಗಿದ್ದವನೊಂದಿಗೆ ತನ್ನ ನೆಂಟು ಎಂದೂ ಇದ್ದದ್ದೇ ಶಾಪ ತಳೆದು ಅವನು ದಾನವನಾದ ಮಾತ್ರಕ್ಕೆ ಈ ನೆಂಟೇನು ಹರಿಯಲಿಲ್ಲ ಅವನೊಂದಿಗಿರುವ ಕರುಳ ಸಂಬಂಧವನ್ನು ಕಾಣಿಸಲೆಂದೇ, ಹರಿಯು ಹಿರಣ್ಯಕಶಿಪುವಿನ ಕರುಳನ್ನು ಬಗೆದು ತನ್ನ ಕೊರಳಲ್ಲಿ ಸೇರಿಸಿಕೊಂಡ

ಉರಿಮೋರೆ—ಉರಿಯುವ ಮೊಗದವನು, ಭಯಂಕರ

# ನಾಗಮಂಗಲ

ಮೈಸೂರಿನಿಂದ ಮೂವತ್ತೊಂಬತ್ತು ಮೈಲು ಉತ್ತರಕ್ಕೆ ಮಂಡ್ಯ ಜಿಲ್ಲೆಗೆ ಸೇರಿದಂತೆ ಇರುವ ನಾಗಮಂಗಲ ಮೊದಲಿಗೆ ನಾಗಮಂಡಲವೆಂದು ಹೆಸರಾಗಿದ್ದಿತು ಪ್ರಾಚೀನಕಾಲದಲ್ಲಿ ಲೋಹಿತವಂಶದ ನಾಯಕನೊಬ್ಬನು ಇಲ್ಲಿಗೆ ಬಂದಾಗ ನರಸಿಂಹನ ಸ್ವಯಂಭು ಮೂರ್ತಿಯೊಂದನ್ನು ಕಂಡನೆಂದೂ, ಅದಕ್ಕೆ ಹಾವು ಸುತ್ತಿಕೊಂಡಿರುವುದನ್ನು ನೋಡಿ ಸ್ಥಳವನ್ನು ನಾಗಮಂಡಲವೆಂದು ಕರೆದನೆಂದೂ ಹೇಳುತ್ತಾರೆ ವಿಜಯನಗರದ ಅರಸ ಇಮ್ಮಡಿ ಪ್ರೌಢ ದೇವರಾಯನ (1446–1467) ಮಂತ್ರಿ ತಿಮ್ಮಣ್ಣ ದಣ್ಣಾಯಕನೆಂಬುವನು ಇಲ್ಲಿಂದಲೇ ಆಡಳಿತ ನಡೆಸುತ್ತಿದ್ದನು ಅದಕ್ಕೂ ಮೊದಲು ನಾಗಮಂಗಲದ ದೊರೆಯೆಂದು ಹೆಸರಾದ ಜಗದೇವರಾಯನು ಇಲ್ಲಿ ಸೌಮ್ಯಕೇಶವ ದೇವಾಲಯವನ್ನು ಕಟ್ಟಿಸಿದನು ಇದನ್ನು ಹೊಯ್ಸಳ ವಿಷ್ಣುವರ್ಧನನ (ಬಿಟ್ಟಿದೇವನ) ಹೆಂಡತಿ ಬಮ್ಮಲಾದೇವಿಯು ವಿಸ್ತರಿಸಿ ಜೀರ್ಣೋದ್ಧಾರ ಮಾಡಿದಳು (1135) ನಾಗಮಂಗಲದಲ್ಲಿ ಈ ದೇವಾಲಯವಲ್ಲದೆ ನರಸಿಂಹಸ್ವಾಮಿಯ ಆಲಯವೂ ಒಂದಿದೆ ಈ ಊರು ಕಂಚು–ಹಿತ್ತಾಳೆ ಕೆಲಸಗಾರಿಕೆಯ ತೌರೂರು , ಅದರಲ್ಲೂ ದೇವಾಲಯದ ಉತ್ಸವಮೂರ್ತಿಗಳು, ದೇವಾಲಯಕ್ಕೆ ಬೇಕಾಗುವ ದೀಪಸ್ತಂಭಗಳು, ಪಾತ್ರೆಗಳು ಇಲ್ಲಿನ ವೈಶಿಷ್ಟ್ಯ



ನಾಗಮಂಗಲದ ಸೌಮ್ಯಕೇಶವ

ಯರುಕುಲಕಾಂಬೋದಿ ರ...ಪೆ

ಗರುವ ಗಂಬೀರ ನಾಯಕಾ ಹರಿಯೆ ಪ

ಹರಿಯೆ ಹಳಚಿಕೆವುಳ್ಳವನಲ್ಲವ
ಸುರೂಪಿ ಸಮಗುಣನು ನೀನಲ್ಲವೆ
ಸಿರಿವಂತ ಸರ್ವಾಕಳಂಕ ನೀನಲ್ಲವೆ
ಕರೆಸಿಕೊಳ್ಳೈ ಏಕೆನ್ನನು ಹರಿಯೆ ೧

ವೇಳೆಯಲ್ಲವ ಆನು ಬಂದುದು
ಕೇಳುತಿಲ್ಲವ ಕಂಜನೇತ್ರ
ಸೋಳಸಾಸಿರದ ಗೋಪಿಯರೊಳಗಣ
ಸೂಳುವಾಳಿನಿಂ ತರಹಿಲ್ಲವೆ ೨

ಕುಂಬುಜೆಯು ಕೊಟ ಬೇಓದೊಳಿದ್ದೆಯೊ
ಅಬುಜೆಯಾಲಿಂಗನದೊಳಿದ್ದಯೊ
ಅಬುಜನಾಬ ಪೇಳೆನ್ನಾಣೆ ನಿನ್ನ
ಚುಬುಕ ಪಿಡಿದು ಮುದ್ದಾಡುವೆನೊ ೩

ನೆನ್ನಬಾರದ ಎತ್ತೆನ್ನ ಬಾರದ
ಸ್ವಾನುಭಾವಿ ನೀನೆಂತೆಂಬೆಯೊ
ಆನು ಮರುಳಾಗಿ ಬಂದನಲ್ಲದೆ
ನೀನೇ ಕೊಡೆ ಪಂದ ಪ್ರಾಣೇಶನೆ ೪

ಈಗ ತಾನಾದರೆ ಮನಸಾಯಿತೇ ನಿನ್ನ
ಶ್ರೀಗೆ ಸಿಲುಕಿದ ಸಿರಿವಲ್ಲಬ
ನಾಗಮಂಗಲದ ಚೆನ್ನ ಶ್ರೀ ಕೇಶವರೇಯ
ಭೋಗಿ ಪುರಂದರವಿಠಲರೇಯನೇ ನಮೋ ೫

ಗರುವ—ಗರ್ವ, ಹೆಮ್ಮೆ

ಹಳಚಿಕೆ—ಬೆಳಗುವ್ರದು, ಪ್ರಕಾಶ, ತಾಳುವಗುಣ

ಸರ್ವಾಕಳಂಕ—ಯಾವ ಕೊಳೆಯೂ ಇಲ್ಲದವನು (ಸರ್ವಕಳಂಕರಹಿತ)

ವೇಳೆಯಲ್ಲವೆ ಆನು ಬಂದುದು—ನಾನು ಬಂದದ್ದು ಸರಿಯಾದ ಕಾಲವಲ್ಲವೆ ?

ಸೋಳಸಾಸಿರದ—ಹದಿನಾರು ಸಾವಿರ ಸಂಖ್ಯೆಯ , ಸೋಳ ಎಂಬುದು ಮರಾಠೀಪದ (ಷೋಡಶ)

ಸೂಳುಪಾಳಿನಿಂ ತೆರೆಹಿಲ್ಲವೆ—ಗದ್ದಲಗುಂಪಿನಿಂದ, ಸರದಿಯಿಂದ ಬಿಡುವಿಲ್ಲವೆ ?

ಕುಬುಜೆ—ಕುಬ್ಜೆ, ಕಂಸನ ಗಂಧದಾಸಿ

ಅಬುಜೆ—ಅಬ್ಧಿಜೆ, ಲಕ್ಷ್ಮಿ

ಅಬುಜನಾಭ—ಅಬ್ಜನಾಭ, ತಾವರೆಹೊಕ್ಕುಳಿನವನು

ಚುಬುಕ—ಗದ್ದ

ಪಂಥ—ಪಂದ್ಯ, ಭರವಸೆ



# ಪಂಢರಪುರ

ಹರಿದಾಸರಿಗೆ ಪಂಢರಪುರದ ಪಾಂಡುರಂಗವಿಟ್ಠಲ ಕುಲದೈವವೆಂದರೂ ಸರಿಯೇ ಬಹುಮಟ್ಟಿಗೆ ಹರಿದಾಸರ ಅಂಕಿತಗಳಲ್ಲಿ ವಿಟ್ಠಲನೆಂಬ ಒಕ್ಕಣೆ ಇದ್ದೇ ಇರುತ್ತದೆ ಹರಿದಾಸರು ಪಂಢರಪುರಕ್ಕೆ ಯಾತ್ರೆಗಾಗಿ ಹೋಗುವುದೂ ಅಗತ್ಯವೆಂದೇ ಭಾವನೆ ಈಗ ಮಹಾರಾಷ್ಟ್ರದಲ್ಲಿರುವ ಕ್ಷೇತ್ರವಾದರೂ ಮರಾಠೀ ಸಂತರು ಹಾಡಿ ಹೊಗಳಿರುವ ದೈವವಾದರೂ, ಒಂದು ಕಾಲಕ್ಕೆ ಪಂಡರಪುರ 'ಪಂಡರಿಗೆ ಎಂಬ ಕನ್ನಡ ಹೆಸರನ್ನು ತಳೆದ ಊರು , ಪಾಂಡುರಂಗ ವಿಟ್ಠಲ ಕನ್ನಡದವನೆಂದು ಮರಾಠೀವಾಙ್ಮಯದಲ್ಲೇ ಉಲ್ಲೇಖವಿದೆ ವಿವರಗಳಿಗೆ ಪ್ರಸ್ತಾವನೆ ನೋಡಿ ಭೀಮಾನದಿಯ (—ಅಲ್ಲಿ ಅದನ್ನು ಚಂದ್ರಭಾಗಾ ನದಿಯೆಂದು ಕರೆಯುತ್ತಾರೆ—) ದಂಡೆಯ ಮೇಲಿರುವ ಈ ಕ್ಷೇತ್ರದಲ್ಲಿ ಪಾಂಡುರಂಗ ವಿಟ್ಠಲ ಬಂದು ನೆಲೆಸಿದ್ದು ಪುಂಡಲೀಕನೆಂಬ ಭಕ್ತನ ಸಲುವಾಗಿ ಎಂದು ಸ್ಥಳಪುರಾಣ ತಿಳಿಸುತ್ತದೆ ವಿಟ್ಠಲನ ಗುಡಿಯ ನೆರೆಯಲ್ಲೇ ರಖುಮಾ ಎಂಬ ದೇವಿಯ ಗುಡಿಯಿದೆ , ವಿಟ್ಠಲನ ಹೆಂಡತಿಯಾದ ಲಕ್ಷ್ಮಿಯೇ ಇವಳೆಂದು ಪ್ರತೀತಿ ಭಾಗವತಸಂಪ್ರದಾಯದವರಿಗೆ ಇದು ತೌರೂರು, ವಾರಕರೀ ( ವಾರಿ'ಯೆಂದರೆ ಯಾತ್ರೆ ಅದನ್ನು ಕೈಗೊಳ್ಳುವವರು ವಾರಿಕರಿಗಳು, ಆಡುಮಾತಿನಲ್ಲಿ ವಾರ್ಕರಿ) ಸಂಪ್ರದಾಯದವರಂತೂ ಆಷಾಢ ಮತ್ತು ಕಾರ್ತಿಕಮಾಸಗಳ ಏಕಾದಶಿಯ ದಿನಗಳಂದು ಚಂದ್ರಭಾಗಾನದಿಯಲ್ಲಿ ಸ್ನಾನ, ವಿಟ್ಠಲನ ದರ್ಶನಗಳನ್ನು ತಪ್ಪದೆ ಕೈಗೊಳ್ಳುತ್ತಾರೆ ವಿಟ್ಠಲಭಕ್ತಿ ವಿಜಯನಗರ ರಾಜ್ಯದಲ್ಲಿಯೂ ಬಲವಾಗಿದ್ದಿತು ಕೃಷ್ಣದೇವರಾಯನು ಹಂಪಿಯಲ್ಲಿ ವಿಜಯವಿಟ್ಠಲ ದೇವಾಲಯವನ್ನು ಕಟ್ಟಿಸಿದ ಪುರಂದರದಾಸರು ಪಂಢರಪುರದಲ್ಲೇ ಹಲವಾರು ವರ್ಷಗಳ ಕಾಲ ವಾಸಮಾಡಿದರೆಂದು ಪ್ರತೀತಿಯಿದೆ



ಪಂಢರಪುರದ ದೇವಾಲಯಗಳು

೧೩೬

ನಾದನಾಮಕ್ರಿಯ ಆದಿ

ಜಯಪಾಂಡುರಂಗ ನಾ ನಿನ್ನ ಮನಕೆ ಬಾರೆನೆ ಪ

ನಾ ನಿನ್ನ ಮನಕೆ ಬಾರೆನೆ, ಬಂದರೆ ಈ ಜವದ
ಬಲೆಯೊಳು ಸಿಲುಕುವೆನೆ ಜಯ ಪಾಂಡುರಂಗ ಅ

ಕೆಟ್ಟ ಕಿರಾತಕನ, ಬೆಟ್ಟದಂಥ ಪಾಪವ
ಸುಟ್ಟು ವಾಲ್ಮೀಕಿ ಎನಿಸಿದ್ಯೊ, ಜಯಪಾಂಡುರಂಗ ೧

ಅತಿಭ್ರಷ್ಟ ಅಜಾಮಿಳನ, ಅಂತ್ಯ ಸಮಯದಲ್ಲಿ
ಅಂತಕನ ಬಾಧೆ ಬಿಡಿಸಿದ್ಯೊ, ಜಯಪಾಂಡುರಂಗ ೨

ಅಂಬುಜನಾಭನೆ ಕುಬ್ಜೆ ಡೊಂಕನು ತಿದ್ದಿ
ಕುಶಲದಿಂದವಳ ಕೂಡಿದ್ಯೊ ಜಯಪಾಂಡುರಂಗ ೩

ಪ್ರೀತಿಯಿಂದಲಿ ಶಬರಿ, ಉಂಡ ಎಂಜಲ ಮೆದ್ದು
ಮುಕುತಿ ಮಾರ್ಗವ ತೋರಿದ್ಯೊ, ಜಯಪಾಂಡುರಂಗ ೪

ಐದು ಮಂದಿಯು ಕೂಡೆ, ಸರಸವು ದ್ರೌಪದಿಗೆ
ಐದೆ ಲಜ್ಜೆಯ ಕಾಯಿದ್ಯೊ, ಜಯಪಾಂಡುರಂಗ ೫

ಗಣಿಕೆ ಗಂಡಕಿಯ ಅಗಣಿತ ಪಾಪವ ಕಳೆದು
ವೈಕುಂಠದಲ್ಲಿ ನಿಲಿಸಿದ್ಯೊ, ಜಯಪಾಂಡುರಂಗ ೬

ತೊತ್ತಿನ ಮಗನ ಮನೆಯ ಕುಡುತೆ ಪಾಲನು ಸವಿದು
ವಿದುರನ ಶ್ಲಾಘ್ಯ ಮಾಡಿದ್ಯೊ ಜಯ ಪಾಂಡುರಂಗ ೭

ಎಲ್ಲರನುದ್ಧರಿಸಿದ್ಯೋ ಪುರಂದರವಿಠಲ ನೀ
ಯಾಕೆ ಎನ್ನನು ಮರೆತ್ಯೊ ಜಯ ಪಾಂಡುರಂಗ ೮

[ಈ ಪದದಲ್ಲಿ ವಾಲ್ಮೀಕಿ, ಅಜಾಮಿಳ, ಕುಬ್ಜೆ, ಶಬರಿ, ದ್ರೌಪದಿ, ಗಂಡಕಿ ಮತ್ತು ವಿದುರ ಇವರನ್ನು ಹರಿಯು ಉದ್ಧರಿಸಿದ್ದು ಉಲ್ಲೇಖಕ್ಕೆ ಒಂದಿದೆ ]

ಪೂರ್ವಕಲ್ಯಾಣಿ                                                    ಚಾಪು

ಏಕಾರತಿಯ ನೋಡುವ ಬನ್ನಿ, ನಮ್ಮ
ಲೋಕನಾಥನ ಸಿರಿ ಪಾದಕ್ಕೆ ಬೆಳಗುವ                    ಪ

ಹರುಷದಿಂದಲಿ ಏಕಾರತಿಯ ಬೆಳಗಲು
ನರಕದಿಂದುದ್ಧಾರ ಮಾಡುವನು
ಪರಮ ಭಕುತಿಯಿಂದ ಬೆಳಗುವ ನರರನು
ಹರಿ ತನ್ನ ಉದರದೊಳಿರಿಸುವನು                    ೧

ತುಪ್ಪದೊಳ್ಬೆರೆಸಿದ ಮೂರು ಬತ್ತಿಯನಿಟ್ಟು
ಒಪ್ಪುವ ದೀಪಕ್ಕೆ ದೀಪ ಹಚ್ಚಿ
ತಪ್ಪದೆ ಸಕಲ ಪಾಪಗಳ ಸಂಹರಿಸುವ
ಅಪ್ಪ ವಿಠ್ಠಲನ್ನ ಪಾದಕ್ಕೆ ಬೆಳಗುವ                    ೨

ಅನ್ಯಚಿಂತೆಯ ಮಾಡದನ್ಯರ ಭಜಿಸದೆ
ಅನ್ಯ ದೇವರುಗಳ ಸ್ಮರಿಸದಲೆ ಅ
ನನ್ಯವಾಗಿ ಶ್ರೀ ಪುರಂದರವಿಠಲನ್ನ
ಘನ್ನ ನಾಮಂಗಳ ಧ್ಯಾನಿಸುತ್ತಲಿನ್ನು                    ೩

ಏಕಾರತಿ—ತಟ್ಟೆಯಲ್ಲಿ ಒಂದೇಕಡೆ ಮೂರು ಬತ್ತಿಗಳನ್ನಿಟ್ಟು ಹಚ್ಚಿ ದೇವರ ಮುಂದೆ ಬೆಳಗುವುದು

ತನ್ನ ಉದರದೊಳಿರಿಸುವನು—ತನ್ನವನೆಂದು ಭಾವಿಸಿ, ತನ್ನ ವಶಕ್ಕೆ ತೆಗೆದುಕೊಂಡು ಕಾಪಾಡುವನು

ಪಂತುವರಾಳಿ ಆದಿ

ಕೂಸಿನ ಕಂಡಿರಾ ಗೋಪಾಲಕೃಷ್ಣನ ಕಂಡಿರಾ ಪ

ಅಂದಿಗೆ ಅರಳೆಲೆ ಇಟ್ಟಿತ್ತು ಕೂಸು
ಮುಂಗೈಯ ಬಾವುರಿ ಇಟ್ಟಿತ್ತು ಕೂಸು
ಬಿಂದಲಿ ಸರಪಳಿ ಹಾಕಿತ್ತು ಕೂಸು
ಅಂಗಳದೊಳಗಿಂದ ಹೋಗ್ಯದೆ ಕೂಸು ೧

ಕಾಲಿಗೆ ಕಿರುಗೆಜ್ಜೆ ಕಟ್ಟಿತ್ತು ಕೂಸು
ನೇವಳ ಪದಕವ ಹಾಕಿತ್ತು ಕೂಸು
ಜಾಲದ ಅಂಗಿಯ ತೊಟ್ಟಿತ್ತು ಕೂಸು
ಬಾಗಿಲ ಒಳಗಿದ್ದು ಹೋಗ್ಯದೆ ಕೂಸು ೨

ಹುಲಿಯುಗುರಿನ ಸರ ಹಾಕಿತ್ತು ಕೂಸು
ಬೆರಳಲಿ ಉಂಗುರ ಇಟ್ಟಿತ್ತು ಕೂಸು
ಕಿವಿಯೊಳು ಚೌಕುಳಿ ಇಟ್ಟಿತ್ತು ಕೂಸು
ಕುಳಿತಿದ್ದ ರಾವಿಲಿ ಕುಳಿತಿಲ್ಲ ಕೂಸು ೩

ನೀಲಮೇಘವ ಪೋಲುವ ಕೂಸು
ನೀಲದ ಬಾವುಲಿ ಇಟ್ಟಿತ್ತು ಕೂಸು
ನೀರಿನ ತೀರದಿ ಕುಳಿತಿತ್ತು ಕೂಸು
ನೀರಿನ ದಡದಿಂದ್ಹೋಗ್ಯದೆ ಕೂಸು ೪

ಪಂಢರಪುರದಲ್ಲಿ ನೆಲಸಿತ್ತು ಕೂಸು
ಪಾಂಡವರೈವರ ಸಲಹಿತು ಕೂಸು
ಅಂಡದೊಳಗೆ ಹರಿದಾಡುವ ಕೂಸು ಪ್ರ
ಚಂಡ ಪುರಂದರವಿಠಲ ಕೂಸು ೫

ಅಂದಿಗೆ—ಅಂದುಗೆ, ಕಾಲಂದುಗೆ , ಕಾಲಗಡಗ, ಪರಪಳಿ

ಬಿಂದಲಿ—ಕೈಯ ಆಬರಣ

ಅರಳೆಲೆ—ಮಕ್ಕಳ ಹಣೆಯ ಮೇಲ್ಗಡೆ ಇಡುವ ಒಂದು ಆಭರಣ, ಅರಳಿಯೆಲೆಯ ಆಕಾರದಲ್ಲಿರುವುದು

ಬಾಪುರಿ—ಬಾಹುಪುರಿ , ಅಂಗದ , ಕೈಗೆ ತೊಡಿಸುವ ಒಂದು ಆಬರಣ

ನೇವಳ—ನೇವುಣ , ಕತ್ತಿಗೆ ಹಾಕುವ ಬಂಗಾರದ ಸರ

ಹುಲಿಯುಗುರಿನ ಸರ—ರಕ್ಷೆಗೆಂದು ಹುಲಿಯ ಉಗುರನ್ನು ಬಂಗಾರದ ಕಟ್ಟು ಕೂಡಿಸಿ ಮಗುವಿಗೆ ಹಾರವಾಗಿ ಹಾಕುವುದು ವಾಡಿಕೆ

ದಾವಿಲಿ—ಜಾಗವಲ್ಲಿ

ನೀಲದ ಬಾವುಲಿ—ಕಿವಿಯ ತುದಿಗ ತೊಡಿಸುವ ಆಭರಣ , ಕುಂಡಲ ಪಚ್ಚೆಯನ್ನು ಮೂಡಿಸಿದ್ದು



# ಬೇಲೂರು

ಹಾಸನ ಜಿಲ್ಲೆಯಲ್ಲಿ, ಹಾಸನ ಪಟ್ಟಣದಿಂದ ಇಪ್ಪತ್ತುನಾಲ್ಕು ಮೈಲು ದೂರದಲ್ಲಿ, ಯಗಚೀ ನದಿಯ ಬಲ ದಂಡೆಯ ಮೇಲೆ ಇರುವ ಈ ಊರು ಇತಿಹಾಸಪ್ರಸಿದ್ಧವಾದುದು ಶಾಸನಗಳಲ್ಲಿ ಇದನ್ನು ವೇಲಾಪುರ, ವೆ ಲೂರು, ಬೆಲಹೂರು ಎಂದು ಕರೆದಿದ್ದಾರೆ ಇಲ್ಲಿ ಇಂದು ಲೋಕ ವಿಖ್ಯಾತವಾಗಿರುವ ಚೆನ್ನಕೇಶವನ ಗ ಡಿ ನಿರ್ಮಾಣವಾದುದು 1117ರಲ್ಲಿ, ಹೊಯ್ಸಳರಾಜ ವಿಷ್ಣುವರ್ಧನ (ಬಿಟ್ಟಿದೇವ) ಕಟ್ಟಿಸಿದ್ದ ಈ ದೇವರಿಗೆ ಶಾಸನೋಕ್ತವಾದ ಹೆಸರು ವಿಜಯನಾರಾಯಣನೆಂದು ವಿಷ್ಣುವರ್ಧನನು ಪ್ರತಿಷ್ಠೆಮಾಡಿದ ಪಂಚನಾರಾಯಣ ಮೂರ್ತಿಗಳಲ್ಲಿ ಇದು ಮುಖ್ಯವಾದುದು ಸಮುದ್ರಮಥನದ ಸಂದರ್ಭದಲ್ಲಿ ರಾಕ್ಷಸರಿಗೆ ಅಮೃತದ ಭಾಗವನ್ನು ಕೊಡದಿರುವ ಸಲುವಾಗಿ ವಿಷ್ಣುವು ಮೋಹಿನಿಯಂತೆ ಮೈದಳೆದು ಬಂದುದು ಈ ಮೂರ್ತಿಯ ಹಿನ್ನೆಲೆಯಂತೆ ಈ ನಾರಾಯಣನು ತುಂಬ ಲಾವಣ್ಯಪೂರ್ಣನಾಗಿರುವುದರಿಂದ 'ಚೆನ್ನಿಗರಾಯ'ನೆಂದೇ ಜನರಲ್ಲಿ ಬಳಕೆ, 'ಚೆಲುವ ಚೆನ್ನ' ಎಂದೂ ಹೆಸರು ಮೋಹಿನಿಯ ರೂಪವೇ ಇವನದ್ದೆಂದು ಪುರಂದರದಾಸರ ಪದದಲ್ಲಿಯೂ ಉಲ್ಲೇಖವಿದೆ ನಾರಿರನ್ನಳು, ಮೂಗುತಿಯನಿಟ್ಟವಳು, ಹೂವು ಮುಡಿದವಳು ಮೊದಲಾದ ವಿವರಗಳಿವೆ ಚೆನ್ನಕೇಶವ ದೇವಾಲಯದ ಶಿಲ್ಪಕಲೆ ಅದ್ಭುತವಾದುದು ಪ್ರಾಚೀನವಾದ ದೇಗುಲವಾದರೂ ಪೂಜೆ ತಪ್ಪದೆ ನಡೆಯುತ್ತ ಬಂದಿದೆ ಇಲ್ಲಿದ್ದ ವೈಕುಂಠ ದಾಸರೆಂಬ ಹರಿದಾಸರು ವ್ಯಾಸರಾಯಸ್ವಾಮಿಗಳ ಶಿಷ್ಯರೇ, ಪುರಂದರ ದಾಸರ ಒಡನಾಡಿಗಳೇ ಇವರು ಆಗಾಗ ಪುರಂದರರನ್ನೂ ಕನಕದಾಸರನ್ನೂ ಬೇಲೂರಿಗೆ ಕರೆದುಕೊಂಡು ಬರುತ್ತಿದ್ದರೆಂದು ಹೇಳುತ್ತಾರೆ



ಬೇಲೂರು ಚೆನ್ನಕೇಶವ

ಹಿಂದೂಸ್ಥಾನಿ ಕಾಪಿ ಆದಿ

ಅಳುವದ್ಯಾತಕೊ ರಂಗ, ಅತ್ತರಂಜಿಪ ಗುಮ್ಮ ಪ

ಪುಟ್ಟಿದೇಳು ದಿವಸದಲಿ ದುಷ್ಟ ಪೂತನಿಯ ಕೊಂದೆ
ಮುಟ್ಟಿ ವಿಷದ ಮೊಲೆಯುಂಡ ಕಾರಣ
ದೃಷ್ಟಿ ತಾಕಿತೆ ನಿನಗೆ ರಂಗಯ್ಯ ೧

ಬಾಲಕತನದಿ ಗೋಪಾಲಕರೊಡಗೂಡಿ
ಕಾಳಿಂದಿ ಮಡುವನು ಕಲಕಿದ ಕಾರಣ
ಕಾಲು ಉಳುಕಿತೆ ನಿನಗೆ ರಂಗಯ್ಯ ೨

ತುರುವ ಕಾಯಲು ಪೋಗೆ ಭರದಿ ಇಂದ್ರ ಮಳೆಗರೆಯೆ
ಬೆರಳಲಿ ಬೆಟ್ಟವನೆತ್ತಿದ ಕಾರಣ
ಬೆರಳು ಉಳುಕಿತೆ ನಿನಗೆ ರಂಗಯ್ಯ ೩

ವಸುದೇವ ಸುತನಾಗಿ ಅಸುರರೆಲ್ಲರ ಮಡುಹಿ
ಹೆಸರಿನ ಮಲ್ಲರ ಮಡುಹಿದ ಕಾರಣ
ಕಿಸರು ತಾಕಿತೇ ನಿನಗೆ ರಂಗಯ್ಯ ೪

ಶರಣು ವೇಲಾಪುರದ ಚೆಲುವ ಚೆನ್ನಿಗರಾಯ
ಪರಿಪರಿ ವಿಧದಿಂದ ಶರಣರ ಪೊರೆಯುವ
ವರದ ಪುರಂದರವಿಠ್ಠಲರಾಯ ೫

ಗುಮ್ಮ—ಗುರ್ವ, ದೆವ್ವ
ಕಿಸುರು—ಕಿಸುರ್, ಕಣ್ಗಿಸುರ್, ಕೆಟ್ಟಕಣ್ಣು, ದೃಷ್ಟಿದೋಷ

೧೪೦

ರೇಗುಪ್ತಿ ಅಟ್ಟ

ಈರೇಳು ಲೋಕದೊಳಗೆ ಇಂಥಾ ಸ್ವಾಮಿಯ
ನಾರಿರನ್ನಳ ಕಂಡೆಯ ಪ

ವಾರಿಜನಾಭ ದೇವರ ದೇವ ಸುಗುಣ ಬೇ
ಲೂರು ಚೆನ್ನಿಗರಾಯನ ಸ್ವಾಮಿಯ ಅ

ಪೊಸಬಗೆ ಮಾಟವ ಪೊಳೆವ ಕಿರೀಟವ
ಎಸೆವ ಮಾಣಿಕದೋಲೆಯು
ಶಶಿಕಾಂತಿಗಧಿಕವೆಂದೆನಿಪ ಮೂಗುತಿಯಿಟ್ಟ
ರಸಿಕ ಚೆನ್ನಿಗರಾಯನ ಸ್ವಾಮಿಯ ೧

ತಿದ್ದಿದ ಕಸ್ತೂರಿ ತಿಲಕದಿಂದೊಪ್ಪುವ
ಮುದ್ದು ಮುಖದ ನೋಟದ
ಅದ್ದಿದ ಕುಂಕುಮದಂಗಿ ಪೀತಾಂಬರ
ಪೊದ್ದ ಚೆನ್ನಿಗರಾಯನ ಸ್ವಾಮಿಯ ೨

ಮಘಮಘಿಸುವ ಚಂಪಕ ಜಾಜಿ ಸಂಪಿಗೆ
ಬಗೆಬಗೆ ಪೂಮಾಲೆಯು
ಅಗರು ಚಂದನ ಗಂಧ ಅನುಲೇಪನದಿಂದ
ಜಗವ ಮೋಹಿಪ ಚೆನ್ನಿಗಸ್ವಾಮಿಯ ೩

ದನುಜರ ಗಂಡನೆಂದೆನಿಪ ಪೆಂಡೆಯನಿಟ್ಟ
ಮಿನುಗುವ ಪೊಂಗೆಜ್ಜೆಯು
ಘನಶಂಖ ಚಕ್ರಗದಾ ಪದ್ಮಾಂಕಿತನಾದ
ವಿನುತ ಚೆನ್ನಿಗರಾಯನ ಸ್ವಾಮಿಯ ೪

ಲೀಲೆಯಿಂದಲಿ ಬಂದು ವೇಲಾಪುರದಿ ನಿಂದು
ಓಲಗ ಕೈಕೊಂಬನ
ಪಾಲಗಡಲಶಯನ ಪುರಂದರವಿಠಲ ಶ್ರೀ
ಲೋಲ ಚೆನ್ನಿಗರಾಯನ ಸ್ವಾಮಿಯ ೫

ಈರೇಳು ಲೋಕದೊಳಗೆ—ಎರಡು ಏಳು ಎಂದರೆ ಹದಿನಾಲ್ಕು ಲೋಕಗಳಲ್ಲಿ , ಏಳು ಲೋಕಗಳು (ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕ) ಮತ್ತು ಏಳು ಪಾತಾಳಗಳು (ಅತಲ, ವಿತಲ, ಸುತಲ, ರಸಾತಲ, ತಲಾತಲ, ಮಹಾತಲ, ಪಾತಾಲ)

ನಾರಿರನ್ನಳ—ನಾರಿಯರಲ್ಲಿ ರತ್ನದಂತಿರುವವಳ (ಮೋಹಿನಿ)

ಪೊಸಬಗೆ ಮಾಟವ— ಹೊಸದಾದ ರೀತಿಯಲ್ಲಿ ಮಾಡಿದ ಕೆಲಸ (ವಿಷ್ಣುವು ಹೆಂಗಳೆಯಂತೆ ತೋರಿಕೊಂಡುದು)

ಶಶಿಕಾಂತಿಗಧಿಕವೆಂದು— ಚಂದ್ರನ ಹೊಳಪಿಗಿಂತ, ಬೆಳದಿಂಗಳಿಗಿಂತ, ಹೆಚ್ಚಾಗಿ

ಪೆಂಡೆ—ಕಾಲಿಗೆ ತೊಡುವ ಆಭರಣ ವಿಶೇಷ

ಪೊಂಗೆಜ್ಜೆ—ಬಂಗಾರದ ಗೆಜ್ಜೆ



ಪೂರ್ವಿಕಲ್ಯಾಣಿ    ಅಟ್ಟ

ಕಂಡೆ ನಾ ಗೋವಿಂದನ
ಪುಂಡರೀಕಾಕ್ಷ ಪಾಂಡವಪಕ್ಷ ಕೃಷ್ಣನ    ಪ

ಕೇಶವ ನಾರಾಯಣ ಶ್ರೀಕೃಷ್ಣನ
ವಾಸುದೇವ ಅಚ್ಯುತಾನಂತನ
ಸಾಸಿರನಾಮನ ಶ್ರೀ ಹೃಷಿ ಕೇಶನ
ಶೇಷಶಯನ ನಮ್ಮ ವಸುದೇವಸುತನ    ೧

ಮಾಧವ ಮಧುಸೂದನ ತ್ರಿವಿಕ್ರಮ
ಯಾದವಕುಲ ಜನ ಮುನಿವಂದ್ಯನ
ವೇದಾಂತವೇದ್ಯನ ಇಂದಿರಾರಮಣನ
ಆದಿಮೂರುತಿ ಪ್ರಹ್ಲಾದವರದನ    ೨

ಪುರುಷೋತ್ತಮ ನರಹರಿ ಶ್ರೀ ಕೃಷ್ಣನ
ಶರಣಾಗತ ವಜ್ರಪಂಜರನ
ಕರುಣಾಕರ ನಮ್ಮ ಪುರಂದರವಿಠಲನ
ನೆರೆ ನಂಬಿದೆ ಬೇಲೂರ ಕೇಶವನ    ೩

ಪಾಂಡವಪಕ್ಷನ—ಕೌರವ-ಪಾಂಡವರ ಯುದ್ಧದಲ್ಲಿ ಪಾಂಡವರ ಕಡೆಯಲ್ಲಿ ಸೇರಿ ನಿಂತವನ

ಶರಣಾಗತ ವಜ್ರಪಂಜರನ—ಮೊರೆಹೊಕ್ಕವರಿಗೆ ಸುಭದ್ರವಾದ ಆವರಣದಂತಿದ್ದು ಕಾಪಾಡುವವನ

ಪೀಲು                                                                 ಆದಿ

ದೇವಕಿ ಕಂದ ಮುಕುಂದ  ಪ

ನಿಗಮೋದ್ಧಾರ ನವನೀತ ಚೋರ
ಖಗಪತಿ ವಾಹನ ಜಗದೋದ್ಧಾರ  ೧

ಶಂಖ ಚಕ್ರಧರ ಶ್ರೀ ಗೋವಿಂದ
ಪಂಕಜಲೋಚನ ಪರಮಾನಂದ  ೨

ಮಕರಕುಂಡಲಧರ ಮೋಹನವೇಷ
ರುಕುಮಿಣಿ ವಲ್ಲಭ ಪಾಂಡವ ಪೋಷ  ೩

ಕಂಸಮರ್ದನ ಕೌಸ್ತುಭಾಭರಣ
ಹಂಸವಾಹನ ಪೂಜಿತ ಚರಣ  ೪

ವರವೇಲಾಪುರ ಚೆನ್ನ ಪ್ರಸನ್ನ
ಪುರಂದರವಿಠಲ ಸಕಲ ಗುಣಪೂರ್ಣ  ೫

ನಿಗಮೋದ್ಧಾರ—ದಾನವರು ಕೊಂಡೊಯ್ದು ಅಡಗಿಸಿದ್ದ ವೇದಗಳನ್ನು ಮತ್ತೆ ಪಡೆದುಕೊಂಡು ಬಂದು ಲೋಕಕ್ಕೆ ಕೊಟ್ಟವನು (ಮತ್ಸ್ಯಾವತಾರದಲ್ಲಿ)
ಖಗಪತಿವಾಹನ—ಪಕ್ಷಿಗಳಿಗೆ ಒಡೆಯನಂತಿರುವ ಗರುಡನನ್ನೇರಿ ಬರುವವನು
ಹಂಸವಾಹನಪೂಜಿತ—ಹಂಸವಾಹನನೆಂದರೆ ಬ್ರಹ್ಮ, ಅವನಿಂದ ಪೂಜಿಸಲ್ಪಟ್ಟವನು

ಶಂಕರಾಭರಣ ಅಟ್ಟ

ಹೆಂಡಿರನಾಳುವಳೀ ಕನ್ನಿಕೆ
ಗಂಡನಿಲ್ಲದ ಹೆಂಗಸೀ ಕನ್ನಿಕೆ ಪ

ಮೇರುಮಂದಿರದ ಕಡೆಗೋಲನೆ ಮಾಡಿ
ಉರಗ ವಾಸುಕಿ ನೇಣ ಮಾಡಿ
ಕ್ಷೀರಾಂಬುಧಿ ಸುರರಸುರರು ಮಥಿಸಲು
ಕೂರಮ ರೂಪವ ದರಿಸಿದ ಕನ್ನಿಕೆ ೧

ಶಿಶುರೂಪತಾಳಿದ ಆಲದೆಲೆಯ ಮೇಲೆ
ಆ ಸಮಯ ಜಲದೊಳು ಮಲಗಿಕೊಂಡು
ವಶವಾಗದ ಮುಪ್ಪ ಹೂವಿಸ್ಹೊಕ್ಕಳಲ್ಲಿ
ಬಸಿರಿಂದ ಬೊಮ್ಮನ ಪಡೆದಾ ಕನ್ನಿಕೆ ೨

ಪಟ್ಟೆವಾಳಿಯನುಟ್ಟು ಬೊಟ್ಟು ಕುಪ್ಪಸ ತೊಟ್ಟು
ಬೊಟ್ಟಗಿಂಡಿಯ ಕೈಲಿ ಪಿಡಿದುಕೊಂಡು
ದಿಟ್ಟ ಸ್ತ್ರೀ ರೂಪವ ತಾಳಿ ದೈತ್ಯರನೆಲ್ಲ
ಅಟ್ಟಹಾಸದಿ ಮೋಹಿಸಿದ ಕನ್ನಿಕೆ ೩

ಅಂಥ ಇಂಥವನೆಂದು ಕೇಳುತ್ತ ಇರಲಾಗಿ
ಸಂತತ ಸುರರಿಗೆ ಅಮೃತವನು
ಪಂಕ್ತಿಯೊಳಗೆ ಅಳವಡಿಸದೆ ಬಡಿಸಿದ
ಎಂಥಾ ಸೊಬಗಿನ ಮೋಹದ ಕನ್ನಿಕೆ ೪

ಬೇಗೆಗಣ್ಣನಿಗೆ ಬಿಸಿ ಕೈಯನಿಡಲು ಬರೆ
ಭೋಗದಾಸೆಯ ತೋರಿ ಬೂದಿ ಮಾಡಿದ
ಭಾಗೀರಥಿಯ ಪಿತ ಪುರಂದರವಿಠ್ಠಲ
ಭೋಗಿ ಬೇಲೂರ ಚೆನ್ನಿಗ ಕನ್ನಿಕೆ ೫

[ಇದು ಮೋಹಿನೀ ಅವತಾರದ ಸ್ವಾರಸ್ಯವನ್ನು ಕುರಿತ ಪದ]

ಹೆಂಡಿರನಾಳುವಳೀ ಕನ್ನಿಕೆ—ಈ ಹೆಣ್ಣು (ನಾರಾಯಣನು), ಶ್ರೀದೇವಿ, ಭೂದೇವಿ, ದುರ್ಗಾದೇವಿ ಎಂಬ ಹೆಂಡತಿಯರನ್ನು ಪ್ರೇರಿಸಿ ಅವರವರ ಕಾರ್ಯಗಳಲ್ಲಿ ನಿಯೋಜಿಸುವುದು

ಗಂಡನಿಲ್ಲದ—ಹರಿಯೇ ಸರ್ವೋತ್ತಮನಾದುದರಿಂದ, ಅವನಿಂದ ಮಿಗಿಲಾದ ದೈವವಿರದು

ಮೇರುಮಂದರವ —ಪಾಲಗಡಲನ್ನು ಅಮೃತಕ್ಕಾಗಿ ದೇವತೆಗಳೂ ದಾನವರೂ ಕಡೆದ ಸಂದರ್ಭ (ಅಮೃತಮಥನ)

ಶಿಶುರೂಪ ತಾಳಿದ —ಮಹಾಪ್ರಳಯದಲ್ಲಿ ಮೂಲಪ್ರಕೃತಿಯನ್ನು ತನ್ನೊಳಗೇ ಇರಿಸಿಕೊಂಡು ಮಗುವಿನಂತೆ ತೋರಿಕೊಂಡು, ಮುಂದಣ ಸೃಷ್ಟಿಗಾಗಿ ಚತುರ್ಮುಖನನ್ನು ಹೊರಹೊಮ್ಮಿಸಿದ ಸಂದರ್ಭ ('ಬ್ರಹ್ಮಾಂಡಭಾಂಡ ಮುದರೇ ನಿಧಾಯ ಲಕ್ಷ್ಮೀಭುಜಾಂತರಗತಃ ಸ್ವರತೋಽಪಿ ಜಾಗ್ರೇ')

ಪಟ್ಟವಾಳಿಯನುಟ್ಟು —ಅಮೃತಮಥನಕಾಲದಲ್ಲಿ ಮೋಹಿನಿಯಾಗಿ ಬಂದದ್ದು

ಬೇಗೆ ಗಣ್ಣನಿಗ—ಹಣೆಗಣ್ಣಿನಲ್ಲಿ ಬೆಂಕಿಯಿರುವ ಶಿವನಿಗೆ ಅವನಿಂದ ವರವನ್ನು ಪಡೆದ ಭಸ್ಮಾಸುರ ಅವನನ್ನೇ ತೀರಿಸಲು ತೊಡಗಿದಾಗ, ಮೋಹಿನಿಯು ಅವನನ್ನು ಮರುಳುಮಾಡಿ, ನಾಟ್ಯವನ್ನಾಡಿ ಅಸುರನನ್ನು ಜಾಣತನದಿಂದ ಸುಟ್ಟುಹಾಕಿದ ಕತೆ ಇದರ ಹಿನ್ನೆಲೆ

ಭಾಗೀರಥಿಯ ಪಿತ—ಹರಿಯ ಪಾದಗಳಿಂದ ಗಂಗೆ ಹುಟ್ಟಿದಳೆಂದು ಪ್ರತೀತಿ



# ಭದ್ರಾಚಲ

ಆಂಧ್ರಪ್ರದೇಶದಲ್ಲಿ ಖಮ್ಮಂ ಜಿಲ್ಲೆಗೆ ಸೇರಿದಂತಿರುವ ಭದ್ರಾಚಲ ಇಂದು ತಾಲ್ಲೂಕು ಕೇಂದ್ರ ಗೋದಾವರೀ ನದಿಯ ದಂಡೆಯ ಮೇಲೆ ಭದ್ರಗಿರಿಕೊಂಡ ಎನಿಸಿಕೊಳ್ಳುವ ಬೆಟ್ಟದ ಮೇಲೆ ಶ್ರೀರಾಮನ ದೇವಾಲಯ ವಿದೆ ಸೀತಾವಿಯೋಗವಾದ ತರುಣದಲ್ಲಿ ರಾಮನು ಸೀತೆಯನ್ನು ಹುಡು ಕಾಡುತ್ತ ಈ ಬೆಟ್ಟಕ್ಕೆ ಬಂದಿದ್ದನೆಂದೂ, ಅಲ್ಲಿ ಭದ್ರನೆಂಬ ಮುನಿಯಿಂದ ಆತಿಥ್ಯ ಪಡೆದನೆಂದೂ ಸ್ಥಳಪುರಾಣ ಹೇಳುತ್ತದೆ ಸೀತೆಯನ್ನು ಪಡೆದು ಕೊಂಡು ಲಂಕೆಯಿಂದ ಹಿಂದಿರುಗುವಾಗ ಮತ್ತೆ ಈ ಬೆಟ್ಟಕ್ಕೆ ಬಂದು ಭದ್ರ ಮುನಿಯನ್ನು ಕಂಡುಹೋದನಂತೆ ಆ ಸಂದರ್ಭದಲ್ಲಿ ತನ್ನ ಒಂದಂಶದಿಂದ ಇಲ್ಲಿನ ವಿಗ್ರಹವಾಗಿ ಉಳಿದುಕೊಂಡನೆಂದೂ ಪ್ರತೀತಿ ಈ ಕ್ಷೇತ್ರದ ಹಿರಿಮೆ ಒದಗಿದ್ದು ಕಂಚರ್ಲ ಗೋಪಣ್ಣ ಎಂಬ ಅಧಿಕಾರಿಯ ಆದರದಿಂದ ರಾಮ ಭಕ್ತನಾಗಿದ್ದ ಇವನು ಭದ್ರಾಚಲ ರಾಮದಾಸನೆಂದೇ ಪ್ರಸಿದ್ಧನಾಗಿದ್ದಾನೆ ಈ ದೇವಾಲಯವನ್ನು ಇವನೇ 1725ರಲ್ಲಿ ಕಟ್ಟಿಸಿದನೆಂದು ತಿಳಿದು ಬರುತ್ತದೆ ಇಲ್ಲಿನ ರಾಮನ ಮೂರ್ತಿ ಚತುರ್ಭುಜನಾಗಿರುವುದೊಂದು ವಿಶೇಷ ಇಲ್ಲಿ ಪ್ರತಿವರ್ಷವೂ ಚೈತ್ರ ಶುದ್ಧ ನವಮಿಯ ದಿನ ಕಲ್ಯಾಣ ಮಹೋತ್ಸವವು ವೈಭವದಿಂದ ಜರುಗುತ್ತದೆ ಪುರಂದರದಾಸರ ಕಾಲಕ್ಕೆ ಈಗಿನ ಗುಡಿ ಇರಲಿಲ್ಲ , ಸ್ಥಳ ಮಾಹಾತ್ಮ್ಯೆಯೇನೋ ಇದ್ದಿರಬೇಕು



ಭದ್ರಾಚಲ ಶ್ರೀರಾಮನ ದೇವಾಲಯ

೧೪೪

ಪಂತುವರಾಳಿ | ಚಾಪು

ಬಾರಯ್ಯ ಮನೆಗೆ ರಂಗಯ್ಯ ನೀನು ಪ

ಬಾರಯ್ಯ ಮನೆಗೆ ಬಾಲಗೋಪಾಲ
ಜಾರ ಚೋರ ಕೃಷ್ಣ ಜಾನಕೀಪತಿ ರಾಮ ಅ

ನಂದನಂದನ ನವನೀತಚೋರ ಕೃಷ್ಣ
ಮಂದರೋದ್ಧರನೆ ಮಾಧವರಾಯ ರಾಮ ೧

ಗೋಕುಲದೊಳಗೆ ಗೋಪಿಯರ ಕೂಡಿ
ಲೋಕ ನೋಡಲವರ ಕಾಕು ಮಾಡಿ ೨

ಹಳ್ಳಿ ಪಳ್ಳಿಗಳೊಳು ಎಲ್ಲ ಮೊಸರು ಹಾಲು ಬೆಣ್ಣೆ
ಕೊಳ್ಳೆಯಾಡಿ ಗೋಪೀಕುಚ ಪಿಡಿದ ಕೃಷ್ಣ ೩

ಅನಂತಪದುಮನಾಭ ಅಪ್ರಮೇಯ ಹೃಷೀಕೇಶ
ದಾನವಾಂತಕ ರಂಗ ದಶರಥಪುತ್ರ ರಾಮ ೪

ಪರಮಪವಿತ್ರ ರಾಮ ಭದ್ರಾಚಲಾಧೀಶ
ವರದ ಶ್ರೀ ಪುರಂದರವಿಠಲ ರಾಮ ೫

ಕಾಕುಮಾಡಿ—ಕೆಟ್ಟವರೆಂದು ಕಾಣಿಸಿ

# ಮನ್ನಾರು

ತಂಜಾವೂರು ಜಿಲ್ಲೆಯಲ್ಲಿ ಈಗ ಒಂದು ತಾಲ್ಲೂಕು ಕೇಂದ್ರವಾಗಿರುವ ಮನ್ನಾರುಗುಡಿ ರಾಜಗೋಪಾಲಸ್ವಾಮಿಯ ದೇವಾಲಯಕ್ಕೆ ಪ್ರಸಿದ್ಧ ವಾಗಿದೆ ಕಾವೇರೀ ತೀರದಲ್ಲಿರುವ ಈ ಊರು ಮೊದಲಿಗೆ ಒಂದು ಶ್ರೋತ್ರಿಯ ಅಗ್ರಹಾರವಾಗಿದ್ದಿತು ಹಲವರು ವಿದ್ವಾಂಸರು ಇಲ್ಲಿ ವಾಸ ಮಾಡುತ್ತಿದ್ದರು ಇಲ್ಲಿನ ವೈಶಿಷ್ಟ್ಯವೆಂದರೆ ಕೃಷ್ಣನ ಅಪುರೂಪದ ಮೂರ್ತಿ ಭೇದವಾದ ರಾಜಗೋಪಾಲನಿಗೆ ದೇವಸ್ಥಾನವಿರುವುದು ಗೋಪಾಲ ಮೂರ್ತಿಗಳಲ್ಲಿ ಮೂರು ಬಗೆಗಳು—ವೇಣುಗೋಪಾಲ, ರಾಜಗೋಪಾಲ, ಮದನಗೋಪಾಲ ಎಂದು ವೇಣುಗೋಪಾಲ ಮೂರ್ತಿಗೆ ಎರಡು ಕೈ ಗಳಿದ್ದು, ಕೊಳಲನ್ನು ನುಡಿಸುತ್ತಿರುವಂತೆ ಚಿತ್ರಿಸುತ್ತಾರೆ ಮದನ ಗೋಪಾಲ ಮೂರ್ತಿಯೂ ಕೊಳಲನ್ನು ನುಡಿಸುತ್ತಿರುವಂತೆಯೇ ಇದ್ದರೂ, ಎಂಟು ಕೈಗಳು ಎರಡು ಕೈಗಳಲ್ಲಿ ಕೊಳಲಿನ ಪ್ರಸಕ್ತಿಯಾದರೆ, ಉಳಿದವು ಗಳಲ್ಲಿ ಶಂಖ, ಚಕ್ರ ಪದ್ಮ, ಕಬ್ಬಿನ ಜಲ್ಲೆ ಮತ್ತು ಪುಷ್ಪಬಾಣ, ಗದೆ ಇವು ಇರುತ್ತವೆ ರಾಜಗೋಪಾಲ ಮೂರ್ತಿಯಾದರೋ ಗೋವಳರ ನಾಯಕ ನಂತೆ ಕಾಣುತ್ತಾನೆ ಎರಡೇ ಕೈಗಳಿದ್ದು ಒಂದು ಕೈಯಲ್ಲಿ ಚಾಟಿ ಹಿಡಿದಂತೆ, ಮತ್ತೊಂದು ಕೈ ದೊಣ್ಣೆಯನ್ನು ಊರಿಕೊಂಡಿರುವಂತೆ ಚಿತ್ರಿಸಬೇಕೆಂದು ಶಿಲ್ಪಶಾಸ್ತ್ರಗಳ ವಿಧಿ ಮನ್ನಾರುಗುಡಿಯಲ್ಲಿರುವ ಮೂರ್ತಿ ತುಂಬ ಮೋಹಕವಾಗಿದೆ ಪುರಂದರದಾಸರ ಪದವು ತುರುಗಳ ಕಾಯ್ದ'ವ ನೆಂಬುದನ್ನು ಎತ್ತಿ ಹೇಳುತ್ತದೆ



ಮನ್ನಾರು ರಾಜಗೋಪಾಲಸ್ವಾಮಿ ದೇವಾಲಯ

ತೋಡಿ ಆದಿ

ಮನ್ನಾರು ಕೃಷ್ಣಗೆ ಮಂಗಳ, ಜಗವ
ಮನ್ನಿಸಿದೊಡೆಯಗೆ ಮಂಗಳ ಪ

ಬೊಮ್ಮನ ಪಡೆದಗೆ ಬಕ್ತರುದ್ಧಾರಿಗೆ
ಕಮ್ಮಗೋಲಯ್ಯಗ ಮಂಗಳ
ಧರ್ಮ ರಕ್ಷಕನಿಗೆ ದಾನವ ಶಿಕ್ಷಗೆ
ನಮ್ಮ ರಕ್ಷಿಸುವಗೆ ಮಂಗಳ ೧

ತುರುಗಳ ಕಾಯ್ದಗೆ ಕರುಣಾಕರನಿಗೆ
ಗಿರಿಯನೆತ್ತಿದವಗೆ ಮಂಗಳ
ವರದ ತಿಮ್ಮಪ್ಪಗೆ ವಾರಿಜನಾಭಗೆ
ಹರಿ ಸರ್ವೋತ್ತಮನಿಗೆ ಮಂಗಳ ೨

ದೇವಕಿ ದೇವಿಯ ತನಯಗೆ ಮಂಗಳ
ದೇವ ತಿಮ್ಮಪ್ಪಗೆ ಮಂಗಳ
ಮಾವನ ಕೊಂದು ಮಲ್ಲರ ಮಡುಹಿದ
ಪುರಂದರವಿಠಲಗೆ ಮಂಗಳ ೩

ಬೊಮ್ಮನ —ಚತುರ್ಮುಖ ಬ್ರಹ್ಮನನ್ನು ತನ್ನ ನಾಭಿಕಮಲದಿಂದ ಹೊರ ಹೊಮ್ಮಿಸಿದವನು ನಾರಾಯಣ

ಕಮ್ಮಗೋಲನ ಅಯ್ಯ—ಕಮ್ಮಗೋಲನ್ನು, ಎಂದರೆ ಕಂಪುಳ್ಳ ಬಾಣವನ್ನು (ಕಮ್ಮ, ಕಂಪು, ಸುವಾಸನೆ, ಹೂಗಳು) ಹಿಡಿದವನು ಮನ್ಮಥ , ಅವನ ಅಯ್ಯನೆಂದರೆ ತಂದೆ, ನಾರಾಯಣ

ಧರ್ಮರಕ್ಷಕನಿಗೆ —ಭಗವದ್ಗೀತೆಯಲ್ಲಿರುವ 'ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ। ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ॥' ಎಂಬ ಮಾತಿನ ಆಧಾರ

ಮಾವನ ಕೊಂದು —ಮಥುರೆಯಲ್ಲಿ ಕಂಸನನ್ನು ಕೊಂದು, ಅವನು ಕಳುಹಿಸಿದ ಚಾಣೂರ ಮೊದಲಾದ ಮಲ್ಲರನ್ನು ಕೊಂದವನು, ಕೃಷ್ಣ

ಸಾವನಾಮಕ್ರಿಯ ಏಕ

ಕಂಡೆ ಕಂಡೆ ಕಂಡೆನಯ್ಯ ಕಂಗಳ ದಣಿಯುವ ತನಕ
ಮಂಗಳಮೂರುತಿ ಮನ್ನಾರು ಕೃಷ್ಣನ ಕಂಡೆ ಪ

ಉಟ್ಟ ಪೀತಾಂಬರ ಕಂಡೆ ತೊಟ್ಟ ವಜ್ರದಂಗಿ ಕಂಡೆ
ದಕ್ಷಿಣದ ದ್ವಾರಕಿ ಮನ್ನಾರು ಕೃಷ್ಣನ ಕಂಡೆ ೧

ಕಡೆವ ಕಡೆಗೋಲ ಕಂಡೆ ನಡುವಿನೊಡ್ಯಾಣ ಕಂಡೆ
ಕಡುಮುದ್ದು ಮನ್ನಾರು ಕೃಷ್ಣನ ಕಂಡೆ ೨

ದೇವಕಿ ದೇವಕಿಯರ ಕಂಡೆ ಗೋಪಿಯರ ಮುದ್ದಾಟ ಕಂಡೆ
ಮಾವ ಕಂಸನ ಮರ್ದನನ ಶ್ರೀಕೃಷ್ಣನ ಕಂಡೆ ೩

ಆಕಳ ಕಾವುದ ಕಂಡೆ ಗೋಪಾಲಕೃಷ್ಣನ ಕಂಡೆ
ವೈಕುಂಠವಾಸನ ಮನ್ನಾರು ಕೃಷ್ಣನ ಕಂಡೆ ೪

ಶೇಷನ ಹಾಸಿಗೆಯ ಕಂಡೆ ಸಾಸಿರನಾಮನ ಕಂಡೆ
ಶ್ರೀಶ ಪುರಂದರವಿಠಲ ಕೃಷ್ಣರಾಯನ್ನ ಕಂಡೆ ೫

ದಕ್ಷಿಣದ ದ್ವಾರಕಿ—ಮನ್ನಾರುಗುಡಿಯಲ್ಲಿ ರಾಜಗೋಪಾಲಸ್ವಾಮಿ ದ್ವಾರಕಾಧೀಶನೆಂದೇ ಪ್ರತೀತಿ ಈ ಕ್ಷೇತ್ರಕ್ಕೆ 'ದಕ್ಷಿಣ ದ್ವಾರಕೆ'ಯೆಂದು ಹೆಸರಿದೆ ಇಲ್ಲಿನ ಅರ್ಚಾವತಾರವನ್ನು ವಾಸುದೇವನೆಂದು ನಿರ್ದೇಶಿಸುತ್ತಾರೆ ಉಭಯನಾಚ್ಚಿಯಾರರಿಂದ (ಶ್ರೀದೇವಿ, ಭೂದೇವಿ) ಕೂಡಿದ ಈ ಮೂರ್ತಿ ತುಂಬ ಮೋಹಕವಾಗಿದೆ, 'ಕಡುಮುದ್ದು' ಆದರೆ ಇಲ್ಲಿ ಬಂದಿರುವ ವರ್ಣನೆ ಸಾಮಾನ್ಯವಾಗಿ ಕೃಷ್ಣನ ವರ್ಣನೆಯೇ, ಮನ್ನಾರು ಗುಡಿಯ ರಾಜಗೋಪಾಲ ಸ್ವಾಮಿಯದೇ ಅಲ್ಲ

# ಮಳೂರು

ಬೆಂಗಳೂರು ಜಿಲ್ಲೆಗೆ ಸೇರಿದ ಚನ್ನಪಟ್ಟಣದ ನೆರೆಯಲ್ಲಿ ಕಣ್ವಾನದಿಯ ದಂಡೆಯಲ್ಲಿರುವ ಮಳೂರು ಈಗ ಕುಗ್ರಾಮವಾದರೂ ಒಂದು ಕಾಲಕ್ಕೆ ಅದು ಮಳೂರ-ಪಟ್ಟಣವೆಂದೇ ಹೆಸರಾಗಿ ಮೆರೆಯುತ್ತಿದ್ದಿತು ಇಲ್ಲಿ ಮತ್ತು ಸುತ್ತಮುತ್ತ ಇರುವ ಗುಡಿಗಳಲ್ಲಿ ಕನ್ನಡ ಶಾಸನಗಳಲ್ಲದೆ ತಮಿಳು ಶಾಸನಗಳೂ ಇವೆ ಗಂಗವಂಶದ ಅರಸರ ಮತ್ತು ಚೋಳರಾಜರ ಕಾಲದಲ್ಲಿ ಇದು ಪ್ರಸಿದ್ಧವಾಗಿದ್ದಿತು ಮಳೂರಿಗೆ ರಾಜೇಂದ್ರಸಿಂಹ ನಗರವೆಂಬ ಹೆಸರೂ ಇದ್ದಿತೆಂದು ದಾಖಲೆಯಿದೆ ಯಾಜ್ಞವಲ್ಕ್ಯಸ್ಮೃತಿಯ ಮೇಲೆ 'ಮಿತಾಕ್ಷರಾ ಎಂಬ ಭಾಷ್ಯಗ್ರಂಥವನ್ನು ಬರೆದ ವಿಜ್ಞಾನೇಶ್ವರ ಯೋಗಿಯು ತನ್ನ ಗ್ರಂಥವನ್ನು ಇಲ್ಲೇ ರಚಿಸಿದನು ಊರಿನ ನಡುವೆ ಇರುವ ವಿಷ್ಣು ದೇವಾಲಯ ಭವ್ಯವಾದುದು ಅದರ ಸನ್ನಿಧಿಯ ಮೂರ್ತಿಗೆ ಅಪ್ರಮೇಯ ಸ್ವಾಮಿಯೆಂದು ಹೆಸರು ದೇಗುಲದ ವೈಶಿಷ್ಟ್ಯವೆಂದರೆ ಇಲ್ಲಿರುವ ಅಂಬೆಗಾಲು ಕೃಷ್ಣನ ಸೊಗಸಾದ ವಿಗ್ರಹ ಇದು ತುಂಬ ಅಪುರೂಪವಾದ ಮೂರ್ತಿ ಬಾಲಕೃಷ್ಣನೆಂದರೆ ಸಾಮಾನ್ಯವಾಗಿ ಮೂರುವರ್ಷಗಳ ಹುಡುಗನಂತೆ ಕಾಣಿಸುತ್ತಾರೆ (ನವನೀತಕೃಷ್ಣ, ಸಂತಾನ ಗೋಪಾಲ, ಇತ್ಯಾದಿ). ಇಲ್ಲಿಯಾದರೋ ಸಣ್ಣ ಮಗುವಿನಂತೆ ಮೂರ್ತಿ ಇದೆ ಪುರಂದರದಾಸರ ಮನಸ್ಸಿಗೆ ಯಶೋದೆ ಆಡಿಸುತ್ತಿದ್ದ ಮಗುವಿನ ಚಿತ್ರ ಹೊಳೆದಿರಬೇಕು ಈ ಪದದಲ್ಲಿ ಇದರ ಭಾವವೇ ತುಂಬಿದೆ ಕಡೆಯಲ್ಲಿ ಅಪ್ರಮೇಯನ' ಎಂದು ಇರುವುದರಿಂದ ಇದು ಮಳೂರಿನ ಅಂಬೆಗಾಲು ಕೃಷ್ಣನನ್ನೇ ಕುರಿತದ್ದೆಂದು ಊಹೆ ಕೃತಿಯಲ್ಲೇನೋ ಮಳೂರಿನ ಹೆಸರಿಲ್ಲ

ಹಿಂದೂಸ್ಥಾನಿ ಕಾಪಿ — ಕಾನಡ

ಜಗದುದ್ಧಾರನ ಆಡಿಸಿದಳೆಶೋದೆ ಪ

ಜಗದುದ್ಧಾರನ ಮಗನೆಂದು ತಿಳಿಯುತ
ಸುಗುಣಾಂತರಂಗನ ಆಡಿಸಿದಳೆಶೋದೆ ಅ

ನಿಗಮಕೆ ಸಿಲುಕದ ಅಗಣಿತ ಮಹಿಮನ
ಮಗುಗಳ ಮಾಣಿಕ್ಯನಾ ಆಡಿಸಿದಳೆಶೋದೆ ೧

ಅಣೋರಣೀಯನ ಮಹತೋಮಹೀಯನ
ಅಪ್ರಮೇಯನ ಆಡಿಸಿದಳೆಶೋದೆ ೨

ಪರಮಪುರುಷನ ಪರವಾಸುದೇವನ
ಪುರಂದರವಿಠಲನ ಆಡಿಸಿದಳೆಶೋದೆ ೩

ಜಗದುದ್ಧಾರನ—ಜಗತ್ತನ್ನು ಎತ್ತಿ (ಉತ್) ಹಿಡಿದು (ಧೃ) ಕಾಪಾಡುವವನನ್ನು
ಸುಗುಣಾಂತರಂಗನ—ಸತ್ತ್ವಗುಣವೊಂದೇ ಸ್ವಭಾವವಾಗಿ ಉಳ್ಳವನನ್ನು
ನಿಗಮಕೆ ಸಿಲುಕದ—ವೇದಗಳು ಕೂಡ ಯಾವನ ನೆಲೆಯನ್ನು ಅರಿಯಲಾರವೋ ಅವನ
ಅಗಣಿತ ಮಹಿಮನ—ಯಾವನ ಹಿರಿಮೆಯನ್ನು ಇಷ್ಟೆಂದು ಹೇಳಬರುವುದಿಲ್ಲವೋ ಅವನ
ಅಣೋರಣೀಯನ —ಅತಿ ಸಣ್ಣದಾದ ಅಣುವಿಗಿಂತ ಸಣ್ಣವನು (ಅದರಲ್ಲೂ ಅಂತರ್ಯಾಮಿಯಾಗಿ ಸೂಕ್ಷ್ಮವಾಗಿರುವನು), ಅತಿ ದೊಡ್ಡದಕ್ಕಿಂತ (ಎಂದರೆ ಆಕಾಶಕ್ಕಿಂತ) ದೊಡ್ಡವನು (ಅದೂ ಅವನಲ್ಲಿಯೇ ನೆಲೆಗೊಂಡಿದೆಯಾಗಿ), ಎಂದರೆ ಸರ್ವವ್ಯಾಪಿ, ಸರ್ವಾಧಾರ

# ಮೇಲುಕೋಟೆ

ಈಗ ಮಂಡ್ಯ ಜಿಲ್ಲೆಯಲ್ಲಿರುವ ಬೆಟ್ಟ ಮೇಲುಕೋಟೆ ಕಾವೇರಿ ನದಿಯ ಕಣಿವೆಗೆ ಎದುರಾಗಿರುವ ವಿಷ್ಣುಕ್ಷೇತ್ರ , ಅದು ಯದುಗಿರಿಯೆಂದೂ ಯಾದವಾದ್ರಿಯೆಂದೂ ತಿರುನಾರಾಯಣಪುರವೆಂದೂ ಹೆಸರಾಗಿದೆ ರಾಮಾನುಜಾಚಾರ್ಯರು ಚೋಳರಾಜನ ಉಪಟಳವನ್ನು ತಾಳಲಾರದೆ ಇಲ್ಲಿಗೆ ಬಂದು ಹದಿನಾಲ್ಕು ವರ್ಷಗಳು ನೆಲೆಸಿ ಚೆಲುವನಾರಾಯಣನ ಪೂಜೆಯನ್ನು ವ್ಯವಸ್ಥೆ ಮಾಡಿದರೆಂದು ಪ್ರತೀತಿ ಹನ್ನೆರಡನೆಯ ಶತಮಾನದ ಸುಮಾರಿಗೆ ವೈದಳೆದ ಈ ಗುಡಿ ಶ್ರೀವೈಷ್ಣವರಿಗೆ ತುಂಬ ಆದರಾಸ್ಪದವಾದುದು ಈ ದೇವರನ್ನು ಚೆಲುವಚೆನ್ನಿಗ, ಶೆಲ್ವಪುಳ್ಳೆ (ಚೆಲ್ವಪಿಳ್ಳೆ) ಎಂದೂ ಕರೆಯುವುದುಂಟು , ಮೊದಲಿಗೆ ರಾಮಪ್ರಿಯ ಎಂಬ ಹೆಸರಿದ್ದಂತೆ ತೋರುತ್ತದೆ ಮೇಲುಕೋಟೆಯ ಮೇಲೊಂದು ಬೆಟ್ಟವಿದ್ದು ಅದರ ಮೇಲೆ ನರಸಿಂಹನ ಗುಡಿಯೊಂದಿದೆ ಇದು ತುಂಬ ಪ್ರಾಚೀನವಾದುದು ಆದರೆ ಚೆಲುವನಾರಾಯಣನ ಗುಡಿಯೇ ಜನಪ್ರಿಯವಾಗಿರುವುದು ಇಲ್ಲಿ ನಡೆಯುವ ವೈರಮುಡಿ, ರಾಜಮುಡಿ ಉತ್ಸವಗಳು ಹೆಸರಾಗಿವೆ ಬೆಟ್ಟದ ಮೇಲೆ ಶ್ರೀ ವೈಷ್ಣವ ಸಂಪ್ರದಾಯದ ಯತಿರಾಜಸ್ವಾಮಿಗಳ ಮಠವೂ ಒಂದಿದೆ ಕೆಳಗಡೆ ತೊಣ್ಣೂರಿನಲ್ಲಿ ಮೋತಿತಲಾಬ್ ಎಂದು ಹೆಸರನ್ನು ಹೊತ್ತು ರಮಣೀಯವಾಗಿರುವ ಕೊಳವೂ ಒಂದಿದೆ ಈ ಗುಡಿಗೆ ಮೈಸೂರಿನ ರಾಜಮನೆತನದವರು ಸೇವೆ ಸಲ್ಲಿಸಿದ್ದಾರೆ ಪುರಂದರದಾಸರ ಈ ಕೃತಿಯಲ್ಲಿ ಮೇಲುಕೋಟೆಯ ಉಲ್ಲೇಖವೂ ಇದೆ, ಚೆಲುವರಾಯನೆಂಬ ಹೆಸರೂ ಇದೆ



ಮೇಲುಕೋಟೆ ಚೆಲುವರಾಯಸ್ವಾಮಿ

## ೧೪೮

**ಶಂಕರಾಭರಣ** ತ್ರಿವಿಡೆ

ಸರ್ವಾಪರಾದವ ಕ್ಷಮಿಸಯ್ಯ, ಎನ್ನ
ಗರ್ವಾಂಧಕಾರವ ಬಿಡಿಸಿ ರಕ್ಷಿಸಯ್ಯ ಪ

ಎಂದೆಂದು ಹಿರಿಯರ ನಿಂದಿಸಿದನೊ, ಚೆಲ್ವ
ಚಂದನಗಂಧಿಯರೊಳು ಸರಸವಾಡಿದೆನೊ
ಬಂಧು ಬಂದರೆ ಎನ್ನ ಬಿಗುಹು ಬಿಂಕವ ತೋರೆ
ಬಂದೋಡುವರೈ ಎನ್ನ ಬೇಕೆಂದು ಕೋರದೆ
ಕುಂದ ಕುಟ್ಮಲದಂತ ಚಂದಿರವದನ ಗೋ
ವಿಂದನ ಪಾದಾರವಿಂದವ ಸ್ಮರಿಸೆನು
ಒಂದು ದಿನವು ನಾನು ಮಿಂದು ಮಡಿಯನ್ನುಟ್ಟು
ಗಂಧ ಪುಷ್ಪಾರ್ಚನೆಗಳನು ಮಾಡೆನು ಎನ್ನ ೧

ಅನ್ನದಾನವ ಮಾಡಲರಿಯೆನು ನಾ ಮುನ್ನ
ಸ್ವರ್ಣದಾನದ ಮಾತು ಸೊಗಸದು ಕಿವಿಗೆ
ಕನ್ಯಾದಾನದ ಮಾತು ಕನಸಿನಲಿ ನಾ ಕಾಣೆ
ಮುನ್ನವರಿಯದ ಮಹಾಮುಗ್ಧ ಕಾಣಯ್ಯ
ಉನ್ನತ ಗೋದಾನ ಭೂದಾನ ಮೊದಲಾದ್ದು
ಸನ್ಮತಿಯಲಿ ಕೊಟ್ಟು ಸುಖಿಸುವದರಿಯೆನು
ಅನ್ಯಾಯವ ಮಾಡಿ ಹರಿ ನಿನ್ನ ಮರೆಹೊಕ್ಕೆ
ಬೆಣ್ಣೆಕಳ್ಳನೆ ಮುದ್ದು ಚೆಣ್ಣಕೃಷ್ಣಯ್ಯ ೨

ಪಾಪಿಯರೊಳು ಅತಿ ಪಾಪಿ ಎಂತೆಂಬರು
ಕೋಪಿಗಳೊಳು ಉಗ್ರ ಕೋಪಿ ನಾನು
ಕೋಪ ತಾಪದ ವ್ಯಾಧಿಯನೆಲ್ಲ ಗುಣ ಮಾಡಿ
ಶ್ರೀಪತಿಯೆ ನೀ ಸಲಹೋ ಕರುಣದಿ
ಈ ಪರಿಯಲಿ ಮೇಲುಕೋಟೆ ಇಂದಿರೆವರ
ಆಪದ್ಬಾಂಧವೆ ಭಕ್ತರಘಹರನೆ
ತಾಪತ್ರಯಗಳ ಬಿಡಿಸಿ ಚೆಲ್ವರಾಯ
ಗೋಪಾಲಮೂರುತಿ ಪುರಂದರವಿಠ್ಠಲ ೩

ಗರ್ವಾಂಧಕಾರ—ಹೆಮ್ಮೆಯೆಂಬ ಕತ್ತಲೆ , ಅಹಂಕಾರ–ಮಮಕಾರಗಳು

ಚಂದನಗಂಧಿಯರೊಳು—ಪರಿಮಳ ದ್ರವ್ಯಗಳನ್ನು ಪೂಸಿಕೊಂಡ ಹೆಂಗಳೆಯರೊಡನೆ

ಬಿಗುಹು—ಬಿಗಿ, ಗತ್ತು

ಕುಂದ ಕುಟ್ಮಲ ದಂತ—ಮಲ್ಲಿಗೆಯ ಮೊಗ್ಗುಗಳಂತೆ ತೋರುವ ಹಲ್ಲುಗಳು

ಮುನ್ನವರಿಯದ—ಮುಂದೇನು ಎಂಬುದನ್ನು ಕಾಣದ

ಭಕ್ತರಘಹರನೆ—ಮೊರೆಹೊಕ್ಕವರ ಪಾಪಗಳನ್ನು ತೊಲಗಿಸುವವನೆ

ತಾಪತ್ರಯಗಳ—ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆಂಬ ಮೂರು ವಿಧವಾದ ತೊಂದರೆಗಳು ಆಧ್ಯಾತ್ಮಿಕವೆಂದರೆ ದೇಹಕ್ಕೆ ಮತ್ತು ಮನಸ್ಸಿಗೆ ಬರುವ ಆಧಿ ವ್ಯಾಧಿಗಳು , ಆಧಿಭೌತಿಕವೆಂದರೆ ನೆರೆಹೊರೆಯ ಜನರಿಂದ, ಕಳ್ಳಕಾಕರಿಂದ, ಹುಲಿಸಿಂಹ ಮೊದಲಾದ ವನ್ಯಪ್ರಾಣಿಗಳಿಂದ, ಹಾವು ಚೇಳು ಮೊದಲಾದ ವಿಷ ಜಂತುಗಳಿಂದ ಒದಗುವ ಕಷ್ಟ , ಆಧಿದೈವಿಕವೆಂದರೆ ಅತಿಯಾದ ಬಿಸಿಲು, ಮಳೆ, ಗಾಳಿ, ಸಿಡಿಲು, ಭೂತಬಾಧೆ ಮೊದಲಾದ ಉಪದ್ರವಗಳು



## ಶೃಂಗಾರಪುರ

ಮುಂದಿನ ಪದವು ಶಾರದೆಯನ್ನು ಕುರಿತದ್ದಾದ್ದರಿಂದಲೂ, 'ಶೃಂಗಾರಪುರ ನೆಲೆವಾಸಿನಿ'ಯೆಂಬ ವರ್ಣನೆಯಿರುವುದರಿಂದಲೂ ಇದು ಶೃಂಗೇರಿಯ ಶಾರದಾಂಬೆಯನ್ನು ಕುರಿತ ಪದವೆಂದು ಊಹೆ ಶೃಂಗಾರ ಪುರ ವೆನ್ನುವುದು ಶೃಂಗೇರಿಪುರ ಎನ್ನುವುದರ ರೂಪಾಂತರವಿದ್ದಿರಬಹುದೆ? ಋಷ್ಯಶೃಂಗಗಿರಿ ಶೃಂಗಗಿರಿಯಾಗಿ ಶೃಂಗೇರಿಯಾಯಿತು ಊರಿನ ನಡುವೆ ಇರುವ ಸಣ್ಣ ಬೆಟ್ಟವೇ ಶೃಂಗಗಿರಿ ಬೆಟ್ಟದ ಮೇಲೆ ಮಲ್ಲಿಕಾರ್ಜುನನ ಗುಡಿಯಿದೆ ಊರಿನೊಳಗೆ ಶಾರದೆಯ ದೇಗುಲವಿದೆ. ವಿದ್ಯಾತೀರ್ಥರ ಕಾಲದ ಗುಡಿ ಇದೆಂದು ಹೇಳುತ್ತಾರೆ ವಿದ್ಯಾತೀರ್ಥರು ವಿಜಯನಗರ ರಾಜ್ಯದ ಸ್ಥಾಪನೆಯಲ್ಲಿ ನೆರವಾದ ವಿದ್ಯಾರಣ್ಯಸ್ವಾಮಿಗಳ ಗುರುಗಳು (ಅವರ ಕಾಲ 1346ರಿಂದ 1378ರ ಒಳಗೆ) ವಿಜಯನಗರದ ಹರಿಹರ ರಾಯನ ಕಾಲದ ಶಾಸನವೊಂದು (1346ರದ್ದು) ವಿದ್ಯಾತೀರ್ಥರನ್ನು ಪ್ರಸ್ತಾಪಿಸುತ್ತದೆ ಅಲ್ಲಿಂದ ಮುಂದೆ ವಿಜಯನಗರದ ಅರಸರು ಶೃಂಗೇರಿ ಯೊಂದಿಗೆ ಧಾರ್ಮಿಕ ಸಂಬಂಧವನ್ನು ಬೆಳೆಸಿಕೊಂಡರು ಪುರಂದರದಾಸರ ಕಾಲದಲ್ಲಿ ಶೃಂಗೇರಿ ಮಠದ ಪರಂಪರೆಯಲ್ಲಿ ಪುರುಷೋತ್ತಮ ಭಾರತಿ (1418–1451), ರಾಮಚಂದ್ರ ಭಾರತಿ (1513–1524), ನರಸಿಂಹ ಭಾರತಿ (ನಿರ್ಯಾಣ 1547) ಇವರು ಪ್ರಸಿದ್ಧರಾಗಿದ್ದ ಸ್ವಾಮಿಗಳು ಆದರೆ ಪುರಂದರದಾಸರು ಶೃಂಗೇರಿಗೆ ಬಂದಿದ್ದರೋ, ಅವರ ಪದದಲ್ಲಿ ಉಲ್ಲೇಖಗೊಂಡಿರುವ ಶಾರದೆ ಶೃಂಗೇರಿಯ ಶಕ್ತಿದೇವತೆಯೋ ಸ್ಪಷ್ಟ ವಾಗುವುದಿಲ್ಲ



ಶೃಂಗೇರಿ ಶ್ರೀ ಶಾರದಾಂಬ

## ೧೪೯

ಮುಖಾರಿ ಆದಿ

ಪಾಲಿಸೆಮ್ಮ ಮುದ್ದುಶಾರದೆ
ಎನ್ನ ನಾಲಿಗಯಲಿ ತಪ್ಪು ಬಾರದೆ ಪ

ಲೋಲಲೋಚನೆ ತಾಯೆ
ನಿರುತ ನಂಬಿದೆ ನಿನ್ನ ಅ

ಅಕ್ಷರಕ್ಷರ ವಿವೇಕವಾ ನಿಮ್ಮ ಕುಕ್ಷಿಯೊಳೀರೇಳು ಲೋಕವ
ಸಾಕ್ಷಾತು ರೂಪದಿಂದ ಒಲಿದು ರಕ್ಷಿಸು ತಾಯೆ ೧

ಶೃಂಗಾರಪುರ ನೆಲೆವಾಸಿನೀ ದೇವಿ
ಸಂಗೀತಗಾನವಿಲಾಸಿನೀ
ಮಂಗಳಗಾತ್ರೆ ತಾಯೆ ಭಳಿರೆ ಬ್ರಹ್ಮನ ರಾಣಿ ೨

ಸರ್ವಾಲಂಕಾರ ದಯಾಮೂರುತಿ ನಿಮ್ಮ
ಚರಣವ ಸ್ಮರಿಸುವೆ ಕೀರುತಿ
ಗುರುಮೂರ್ತಿ ಪುರಂದರ ವಿಠಲನ್ನ ಸ್ಮರಿಸುವೆ ೩

ಅಕ್ಷರಕ್ಷರ ವಿವೇಕವ—ಅಕ್ಷರವೆಂದರೆ ನಾಶವಿಲ್ಲದಿರುವ ಮುಕ್ತಿ, ಕ್ಷರವೆಂದರೆ ಇದ್ದು ಹೋಗುವ ಪ್ರಾಕೃತಿಕ ಸಂಪತ್ತು, ಇವೆರಡರ ನಡುವೆ ಇರುವ ಭೇದವನ್ನು ಮನಗಾಣುವುದು ವಿವೇಕ , ನಿತ್ಯಾನಿತ್ಯ ವಸ್ತುವಿವೇಕವೆಂದೂ ಕರೆಯುತ್ತಾರೆ ಆಧ್ಯಾತ್ಮಿಕ ಸಾಧನೆಯಲ್ಲಿ ಇದು ಮುಖ್ಯವಾದ ಅಂಗ

ನಿಮ್ಮ ಕುಕ್ಷಿಯೊಳೀರೇಳು ಲೋಕವ—ದೇವಿಯ ಹೊಟ್ಟೆಯೊಳಗೆ ಹದಿನಾಲ್ಕು ಲೋಕಗಳೂ (ಈರೇಳು, ಎರಡು ಏಳು) ಅಡಗಿವೆ

# ಶ್ರೀಮುಷ್ಣ

ತಮಿಳುನಾಡಿನಲ್ಲಿ ಚಿದಂಬರವೆಂಬ ಸುಪ್ರಸಿದ್ಧ ಕ್ಷೇತ್ರದಿಂದ ಸುಮಾರು ಇಪ್ಪತ್ತೈದು ಮೈಲುಗಳ ದೂರದಲ್ಲಿರುವ ಈ ಊರು ಮಾಧ್ವ ಸಂಪ್ರದಾಯದವರಿಗೆ ಪವಿತ್ರವಾದುದು ತೊಂಡಮಂಡಲಕ್ಕೆ ಸೇರಿದ್ದ ಈ ಭೂಭಾಗದಲ್ಲಿ ದಂಡಕಾಸುರನ ಹಾವಳಿ ಹೆಚ್ಚಿ ಅವನು ಭೂಮಿಯನ್ನೇ ಕದ್ದೊಯ್ಯಲು ವಿಷ್ಣುವು ವರಾಹಾವತಾರಮಾಡಿ ಅವನನ್ನು ನಿಗ್ರಹಿಸಿ ಭೂಮಿಯನ್ನು ಮರಳಿ ಪಡೆದುಕೊಟ್ಟದ್ದು ಈ ಕ್ಷೇತ್ರದ ಹಿನ್ನೆಲೆ ಆದಿ ವರಾಹನ ಅವತಾರವಾದುದು ಇಲ್ಲೇ ಎಂದು ಪ್ರತೀತಿ ಭೂವರಾಹ, ಯಜ್ಞವರಾಹ ಎಂಬ ಇನ್ನೆರಡು ರೂಪಗಳೂ ಇಲ್ಲೇ ಇವೆ ಪ್ರಸ್ತುತ ಕಲ್ಪವಾದ ಶ್ವೇತವರಾಹ ಕಲ್ಪಕ್ಕೆ ಹೆಸರನ್ನೊದಗಿಸಿದ ರೂಪವೂ ಇಲ್ಲಿನದೇ ಎಂದು ನಂಬಿಕೆ ವಾದಿರಾಜಸ್ವಾಮಿಗಳು ತಮ್ಮ ತೀರ್ಥ ಪ್ರಬಂಧ'ದಲ್ಲಿ ಈ ಶ್ವೇತವರಾಹನನ್ನು ಬಣ್ಣಿಸಿದ್ದಾರೆ ಮಧ್ವಾಚಾರ್ಯರು ಈ ಕ್ಷೇತ್ರದಲ್ಲಿ ಒಂದು ಚಾತುರ್ಮಾಸ್ಯವನ್ನು ನಡೆಸಿದರೆಂದೂ, ಅಲ್ಲಿಯೇ ತಮ್ಮ ನಿತ್ಯಾಹ್ನಿಕಕ್ಕಾಗಿ ದಂಡತೀರ್ಥವೊಂದನ್ನು ವ್ಯವಸ್ಥೆ ಮಾಡಿಕೊಂಡರೆಂದೂ ಹೇಳುತ್ತಾರೆ ಇದಲ್ಲದೆ ಇಲ್ಲಿ ಹದಿನಾರು ತೀರ್ಥಗಳಿವೆಯೆಂದು ಪ್ರತೀತಿ ಇಲ್ಲಿಯ ದೇವಿಯ ಹೆಸರು ಅಂಬುಜವಲ್ಲಿ

೧೫೦

ಕಾಂಬೋದಿ ಆದಿ

ಆದಿವರಾಹನ ಚೆಲುವ ಪಾದವ ಕಾಣದೆ ಕಣ್ಣು
ವೇದನೆಯಾಗಿ ಒಳ ಬಾಧಿಸುತಲಿದೆ ಎನ್ನ ಪ

ಈ ದರಣಿ ಮುಳುಗೆ ಶುಕ್ಲನದಿಯು ದಕ್ಷಿಣದಲ್ಲಿದ್ದ
ಮೇದಿನಿ ಕೋರೆದಾಡೆಲೆತ್ತಿದಂಥ ಅ

ಅಷ್ಟ ಸ್ವಯಂವ್ಯಕ್ತ ಶ್ರೀ ಮುಷ್ಣ ಅಷ್ಟಾಕ್ಷರ ಮಂತ್ರವನ್ನು
ಇಷ್ಟುಮಾತ್ರ ತಿಳಿದವರೆಷ್ಟು ಪುಣ್ಯ ಮಾಡಿದರೊ
ನಷ್ಟಬಾರದಂತೆ ಮನದಿಷ್ಟಾರ್ಥವ ಕೊಟ್ಟು ಕಾಯ್ವ ನಮ್ಮ
ಅಷ್ಟದಿಕ್ಕಿಗೆ ಒಡೆಯನೊಬ್ಬ ೧

ನಿತ್ಯಪುಷ್ಕರಿಣಿ ಸುತ್ತು ಹದಿನಾರು ತೀರ್ಥ
ನಿತ್ಯ ಸೇವೆಯಾಗಿರುವ ಪ್ರತ್ಯೇಕ ಅಶ್ವತ್ಥ ನಿರಲು
ಅರ್ಥಿ ನೋಡ ಬಂದಾರೆಂದು ಶ್ರುತ್ಯರ್ಥಕೊಂಡಾಡುತಿರೆ
ಅತ್ಯಂತ ಅಕ್ಕರೆಯಿಂದಲಿ ೨

ಸತ್ಯಲೋಕದ ಬ್ರಹ್ಮನು ಭೃತ್ಯರನ್ನು ಕೂಡಿಕೊಂಡು
ವಿಸ್ತಾರದಿ ನಿಂತು ಕೈಯನೆತ್ತಿ ಮುಗಿವರೆಂತೆಂದು
ರತ್ನದ ಭೂಷಣಗಳು ಮುತ್ತಿನೋಲೆ ಮೂಗುತಿಯು
ಮುತ್ತೈದೆ ಅಂಬುಜವಲ್ಲಿಗೆ ಕೊಟ್ಟ ೩

ಅಲ್ಲಲ್ಲಿ ಪುಣ್ಯತೀರ್ಥವು ಅಲ್ಲಲ್ಲಿ ಸ್ನಾನ ದಾನವು
ಅಲ್ಲಲ್ಲಿ ಜಪತಪವು ಅಲ್ಲಲ್ಲಿ ದೇವತಾರ್ಚನೆ
ಅಲ್ಲಲ್ಲಿ ಗಂಧರ್ವರ ಗಾನ ಅಲ್ಲಲ್ಲಿ ನಂದನವನ
ಅಲ್ಲಿ ವರಾಹ ಅಂಬುಜವಲ್ಲಿಯು
ಝಲ್ಲಿಕಾವನದಲ್ಲಿದ್ದರು ೪

ದಂಡಕಾರಣ್ಯ ಭೂಮಿಲಿ ತೊಂಡಮಂಡಲದೊಳಗೆ
ಹಿಂಡು ಹಿಂಡು ಅಟ್ಟಿಬಂದ ದಂಡಕಾಸುರ ಪಡೆಯ
ಖಂಡಿಸಿ ದೈತ್ಯರನೆಲ್ಲ ತುಂಡು ಮಾಡಿದನು
ದ್ದಂಡ ಶ್ವೇತ ವರಾಹನು ೫

ಕಂಡು ಭಜಿಸಿರೊ ಗಜಗಂಡು ಸುಯಜ್ಞಮೂರುತಿ
ಕೊಂಡಾಡಿದ ಭಜಕರ ಮಂಡೆ ಪೂ ಬಾಡದೆಂದೆಂದು
ಪುಂಡರೀಕ ಸ್ವಾಮಿ ತಾನು ಉಂಡು ಮಿಕ್ಕ ಪ್ರಸಾದವ ಪ್ರ
ಚಂಡ ಹನುಮಂತಗೆ ಕೊಟ್ಟ ೭

ಭಾರವು ಹಾರುವೊ ವೇಳೆ ಗರುಡೋತ್ತಮನು ಬಂದು ಬೇಗ
ಗುರುಮಂತ್ರ ಉಪದೇಶ ಹರಿಸ್ಮರಣೆಯಿಂದಲಿ
ನರಬಾಧೆಗಳು ಬಾರದೆಂದು ಶ್ರೀ
ಹರಿವಾದ ತಿರುಪತಿ ಉತ್ತರ ಶೇಷವರದ
ಪುರಂದರವಿಠಲನ ಚರಣಕಮಲದಲಿ ಓಲಾಡಿದಿಯೆಂದು ೭

ಆದಿವರಾಹನ—ಆಗಮಗಳಲ್ಲಿ 'ಜಾನುದರಂ ಭೂಮಿಧರಂ ಫಣಮೂರ್ಧ್ನಿಸ್ಥಿತಂ ನೀಲೋತ್ಪಲಪ್ರಭಂ' ಎಂದು ಆದಿವರಾಹನ ಲಕ್ಷಣಗಳನ್ನು ಹೇಳಿದೆ ಹಿರಣ್ಯಾಕ್ಷನೆಂಬ ದಾನವನನ್ನು ನಿಗ್ರಹಿಸಲು ವಿಷ್ಣುವು ಮಾಡಿದ ಒಂದು ಅವತಾರ

ಒಳ ಬಾಧಿಸುತಲಿದೆ ಎನ್ನ—ನನ್ನ ಒಳಗೆ, ಎಂದರೆ ಮನಸ್ಸಿನಲ್ಲಿ, ಕಳವಳ, ಕಾತರ, ಇದೆ

ಅಷ್ಟ ಸ್ವಯಂವ್ಯಕ್ತ—ಶ್ರೀಕರಾಷ್ಟಾರ್ಣವೆಂಬ ಮಂತ್ರದಿಂದ ತಾನೇ ತಾನಾಗಿ ಹೊರ ಹೊಮ್ಮಿದವನೆಂದು ಪ್ರತೀತಿ , 'ಉತ್ತಿಷ್ಠ ಶ್ರೀಕರ ಸ್ವಾಹಾ' ಎಂಬುದು ಈ ಮಂತ್ರ.

ಶ್ರೀಮುಷ್ಣ ಅಷ್ಟಾಕ್ಷರಮಂತ್ರ—'ಓಂ ಭೂವರಾಹಾಯ ನಮಃ ಎಂಬುದು

ಅಷ್ಟದಿಕ್ಕಿಗೆ—ನಾಲ್ಕು ದಿಕ್ಕುಗಳು (ಪೂರ್ವ, ಪಶ್ಚಿಮ, ಉತ್ತರ, ದಕ್ಷಿಣ), ನಾಲ್ಕು ವಿದಿಕ್ಕುಗಳು (ಆಗ್ನೇಯ, ಈಶಾನ್ಯ, ವಾಯುವ್ಯ, ನೈಋತ್ಯ)

ರಘಿಲ್ಲಿಕಾವನ—ಅಲ್ಲಿನ ಉದ್ಯಾನದ ಹೆಸರು

ಉದ್ದಂಡ—ಮಹಾಬಲಶಾಲಿಯಾದ

ಗಜಗಂಡು—ಧೈರ್ಯಶಾಲಿ , ಯಾವುದಕ್ಕೂ ಅಂಜದವ

ಸುಯಜ್ಞಮೂರುತಿ—ಯಜ್ಞವರಾಹನೆಂಬ ರೂಪ

ಕೊಂಡಾಡಿದ ಭಜಕರ—ತನ್ನ ಮೊರೆಹೊಕ್ಕವರು ತಮ್ಮ ತಲೆಗೆ ಮುಡಿದ ಹೂ ಕೂಡ ಬಾಡದಿರುವಂತೆ ಅವರನ್ನು ಕಾಪಿಡುತ್ತಾನೆ

ಪ್ರಚಂಡ ಹನುಮಂತಗೆ—ಇಲ್ಲಿ ಮುಖ್ಯಪ್ರಾಣನ ಸನ್ನಿಧಿಯೂ ಇದೆ ಭೂವರಾಹ ದೇವರಿಗೆ ಅರ್ಪಿಸಿದ ನೈವೇದ್ಯದ ಒಂದು ಬಾಗವನ್ನು ಮುಖ್ಯಪ್ರಾಣನಿಗೆ ಸಲ್ಲಿಸುವ ವಾಡಿಕೆ

ಭಾರವು ಹಾರುವೊ ವೇಳೆ—ಸಂದರ್ಬ ತಿಳಿಯುವುದಿಲ್ಲ

ಹರಿಪಾದ ತಿರುಪತಿ —ತಿರುಪತಿಯಲ್ಲಿ ಬೆಟ್ಟವೇ ಶೇಷನ ರೂಪ, ಅದನ್ನು ಮುಟ್ಟಿ ದೇವರು ಇರುವುದರಿಂದ ಅದು 'ಹರಿಪಾದ' ವರಾಹಾವತಾರದಲ್ಲಿ ಶೇಷನು ದೇವರ ತಲೆಯ ಮೇಲೆ ತನ್ನ ಹೆಡೆಗಳನ್ನು ಎತ್ತಿ ಹಿಡಿದು (ಉತ್ತರ) ಸೇವೆ ಮಾಡಿ, ದೇವರಿಂದ ವರವನ್ನು ಪಡೆಯುತ್ತಾನೆ



# ಶ್ರೀರಂಗ

ತಮಿಳುನಾಡಿನಲ್ಲಿ ತಿರುಚಿರಪಳ್ಳಿಗೆ ಎರಡು ಮೈಲು ದೂರದಲ್ಲಿರುವ ಶ್ರೀರಂಗ (ತಿರುವರಂಗಂ) ಸುಪ್ರಸಿದ್ಧ ವೈಷ್ಣವಕ್ಷೇತ್ರ ಕಾವೇರಿಯು ಇಬ್ಭಾಗವಾಗಿ ಒಡೆದು ನಡುಗಡ್ಡೆಯಾಗಿ ಮತ್ತೆ ಸೇರಿಕೊಳ್ಳುವುದು ಮೂರು ಕಡೆಗಳಲ್ಲಿ, ಮೊದಲು ಶ್ರೀರಂಗಪಟ್ಟಣದಲ್ಲಿ, ಅನಂತರ ಶಿವಸಮುದ್ರದಲ್ಲಿ ಕಡೆಯದಾಗಿ ಶ್ರೀರಂಗದಲ್ಲಿ ಇವನ್ನು ಕ್ರಮವಾಗಿ ಆದಿರಂಗ, ಮಧ್ಯರಂಗ, ಅಂತ್ಯರಂಗ ಎಂದು ಕರೆಯುತ್ತಾರೆ ಶ್ರೀರಂಗವು ಹದಿನೇಳು ಮೈಲು ಉದ್ದ ಮೂರು ಮೈಲು ಅಗಲವಿರುವ ನಡುಗಡ್ಡೆ ಇಲ್ಲಿನ ಕಾವೇರಿಯನ್ನು ವಿರಜಾ ನದಿಯೆಂದೂ ಅದರ ನಡುಗಡ್ಡೆಯೇ ವೈಕುಂಠವೆಂದೂ ಬಣ್ಣಿಸುವುದಿದೆ ('ಕಾವೇರೀ ವಿರಜಾ ಸೇಯಂ ವೈಕುಂಠಂ ರಂಗಮಂದಿರಂ') ಪುರಂದರದಾಸರ ಪದವೊಂದರಲ್ಲೂ ಇದರ ಕನ್ನಡ ರೂಪವಿದೆ ಇಲ್ಲಿನ ರಂಗನಾಥಸ್ವಾಮಿ ದೇವಾಲಯ ಏಳು ಪ್ರಾಕಾರಗಳುಳ್ಳದ್ದು ಏಳನೆಯ ಪ್ರಾಕಾರ 3072 ಅಡಿ ಉದ್ದ, 2521 ಅಡಿ ಅಗಲವಿದೆ, ಮೊದಲ ಪ್ರಾಕಾರ 240 ಅಡಿ ಉದ್ದ 181 ಅಡಿ ಅಗಲ ಈ ದೇವಾಲಯದಲ್ಲಿ ನಡೆಯುವ ವೈಕುಂಠ ಏಕಾದಶಿ ಉತ್ಸವ ಪ್ರಸಿದ್ಧವಾದುದು ಶ್ರೀವೈಷ್ಣವರಿಗೆ ಶ್ರೀರಂಗಕ್ಕಿಂತಲೂ ಮಿಗಿಲಾದ ಕ್ಷೇತ್ರವಿಲ್ಲ ಅವರು ಎಲ್ಲೇ ಇರಲಿ, ಅವರ ನಿತ್ಯಾನುಸಂಧಾನದಲ್ಲಿ 'ಶ್ರೀರಂಗಶ್ರೀಶ್ಚವರ್ಧತಾಂ ಎನ್ನುವ ಬಯಕೆಯಿದೆ ಇಲ್ಲಿ ಶ್ರೀ ವೈಷ್ಣವ ಆಚಾರ್ಯರಾದ ರಾಮಾನುಜರೂ, ವೇದಾಂತದೇಶಿಕರೂ ನೆಲೆಸಿ ಇದರ ವೈಭವಕ್ಕೆ ಕಾರಣರಾದರು ರಂಗನಾಥನೆಂದರೆ ಶೇಷಶಯ್ಯೆಯ ಮೇಲೆ ಪವಡಿಸಿರುವ ಮೂರ್ತಿ, ಕಾಲ ಬಳಿ ಶ್ರೀದೇವಿ ಭೂದೇವಿಯರು ಈ ಮೂರ್ತಿಯು ಶ್ರೀರಾಮನ ಮನೆತನದಲ್ಲಿ ಪೂಜೆಗಿದ್ದಿತೆಂದೂ, ರಾವಣನನ್ನು ಕೊಂದು ಶ್ರೀರಾಮನು ಸೀತೆಯೊಂದಿಗೆ ಅಯೋಧ್ಯೆಗೆ ಹಿಂದಿರುಗಿದಾಗ ಅವನೊಂದಿಗೆ ಬಂದಿದ್ದ ವಿಭೀಷಣನಿಗೆ ಶ್ರೀರಾಮನು ಈ ಮೂರ್ತಿಯನ್ನು ಬಹುಮಾನವಾಗಿ ಕೊಟ್ಟನೆಂದೂ, ವಿಭೀಷಣನು ಲಂಕೆಗೆ ಇದನ್ನು ಒಯ್ಯುತ್ತಿದ್ದಾಗ ದಾರಿಯಲ್ಲಿ ಈಗಿನ ಶ್ರೀರಂಗದಲ್ಲಿ ಕೆಳಗಿರಿಸಲು ಅದು ಅಲ್ಲೇ ನೆಲೆಗೊಂಡಿತೆಂದೂ ಸ್ಥಳ ಪುರಾಣ ವಿದೆ ಈ ದೇವಾಲಯದ ವಿಮಾನ ಪ್ರಣವಾಕಾರವಾದುದೆಂದು ನಂಬಿಕೆ ತಮಿಳು ಸಾಹಿತ್ಯದಲ್ಲಿ ಹೆಸರು ಹೊತ್ತ ರಾಮಾಯಣವನ್ನು ಬರೆದ ಕಂಬ ಕವಿಯು ಇಲ್ಲಿಯೇ ತನ್ನ ಕೃತಿಯನ್ನು ರಚಿಸಿದನೆಂದು ಹೇಳುತ್ತಾರೆ



ಶ್ರೀರಂಗ ರಂಗನಾಥ ದೇವಾಲಯ

ತೋಡಿ ಆದಿ

ನೀನೇ ದಯಾಸಂಪನ್ನನೋ ಕಾವೇರಿ ರಂಗಾ ಪ
ನೀನೇ ಬ್ರಹ್ಮಾದಿ ವಂದ್ಯನೋ ಅ

ಬಂಧುಗಳೆಲ್ಲರ ಮುಂದಾದ್ರುಪದನ
ನಂದನೆಯೆಳೆತಂದು ಸೀರೆಯ ಸೆಳೆವಾಗ
ಬಂಧು ಕೃಷ್ಣಾ ಸಲಹೆಂದರೆ ಅಕ್ಷಯ
ವೆಂದು ಕಾಯ್ದ ಗೋವಿಂದನು ನೀನೇ ೧

ನಿಂದಿತ ಕರ್ಮವನೊಂದುಳಿಯದೆ ಬೇ
ಕೆಂದು ಮಾಡಿದನಂದಜಮಿಳನು
ಕಂದ ನಾರಣಾ ಎಂದರೆ ಮುಕ್ತಿಯ
ಕುಂದದೆಯಿತ್ತ ಮುಕುಂದನು ನೀನೇ ೨

ಮತ್ತಗಜವ ನೆಗಳೊತ್ತಿ ಪಿಡಿದು ಬಲು
ವತ್ಸರೋಷ್ಮವ ಮೃತ್ಯುವಿನಂತಿರೆ
ಭಕ್ತರ ಸಲಹುವ ಪುರಂದರವಿಠಲ
ಹಸ್ತಿಗೊಲಿದ ಪರವಸ್ತುವು ನೀನೆ ೩



ಭೈರವಿ

ತ್ರಿವಿಡೆ

ಇಲ್ಲೇ ವೈಕುಂಠ, ನಮ್ಮ ಶ್ರೀ ಲಕುಮಿ
ವಲ್ಲಭ ಪರಿಪೂರ್ಣನೆಂದು ಭಜಿಪರಿಗೆ ಪ

ಆಶಾಪಾಶಗಳನ್ನು ಮರೆದು ಶ್ರೀ ಹರಿಯ ಮೇ
ಲಾಸೆಯನ್ನು ಮಾಡಿ ನೆಲೆಗೊಳಿಸಿ
ವಾಸುಕಿಶಯನನ ದಾಸನಾಗಿ ಒಡನೆ
ವಾಸುದೇವನ ದಿವ್ಯಮೂರ್ತಿ ನಿಟ್ಟಿಸುವಗೆ ೧

ಕಾಮಕ್ರೋಧ ಲೋಭ ಮದ ಮತ್ಸರವಳಿದು
ಕಾಮಜನಕನ ಕಾರುಣ್ಯದಿಂದ
ನಾಮಾಮೃತವನುಂಡು ನವವಿದ ಭಕ್ತಿ
ನೇಮದಿಂದಚ್ಯುತನ ತಿಳಿದು ಭಜಿಪರಿಗೆ ೨

ವರ ಕಾವೇರಿಯೆ ವಿರಜಾನದಿಯೆಂದು
ಪರಮಪದವೆ ರಂಗ ಕ್ಷೇತ್ರವೆಂದು
ಪರವಾಸುದೇವನೆ ರಂಗನಾಯಕನೆಂದು
ಪರಮ ಭಕುತಿಯಿಂದ ಭಜಿಸುವ ಜನರಿಗೆ ೩

ಸ್ನಾನದಾನಾದಿ ಸತ್ಕರ್ಮವ ಮುದದಿಂದ
ಶ್ರೀ ನರಹರಿಗೆ ಸಮರ್ಪಿಸುವ
ಆನಂದ ವೈಕುಂಠ ಲಕ್ಷ್ಮೀಶನಡಿಗಳ
ಸಾನುರಾಗದಿ ನಿತ್ಯ ಧ್ಯಾನಿಪ ಜನರಿಗೆ ೪

ಉಭಯ ಕಾವೇರಿ ಮಧ್ಯದಲಿ ಪವಡಿಸಿ
ಅಭಯವನೀಯುತ ದಾಸರಿಗೆ
ವಿಭವ ಸಂಪದ ಸಾಲೋಕ್ಯ ಪದವಿಯೀವ
ಅಭಿನವ ಪುರಂದರವಿಠಲನ ಭಜಿಪರಿಗೆ ೫

ಇಲ್ಲೇ ವೈಕುಂಠ—ಶ್ರೀರಂಗವು ಭೂವೈಕುಂಠವೆಂದು ಪ್ರತೀತಿ

ನವವಿಧಭಕ್ತಿ—ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ಸಖ್ಯ, ದಾಸ್ಯ, ಆತ್ಮನಿವೇದನಗಳೆಂಬ ಒಂಬತ್ತು ಭಕ್ತಿಯ ಪ್ರಕಾರಗಳು

ವರಕಾವೇರಿಯೆ ವಿರಜಾನದಿಯೆಂದು —'ಕಾವೇರೀ ವಿರಜಾ ಸೇಯಂ ವೈಕುಂಠಂ ರಂಗಮಂದಿರಂ । ಸ ವಾಸುದೇವೋ ರಂಗೇಶಃ ಪ್ರತ್ಯಕ್ಷಂ ಪರಮಂ ಪದಂ ॥' ಎನ್ನುವ ಶ್ಲೋಕದ ಛಾಯೆ ಜೀವವು ಮುಕ್ತಿಗೆ ಅಧಿಕಾರವನ್ನು ಪಡೆಯಲೆಂದು ಕರ್ಮಗಳ ಕೊಳೆಯನ್ನೆಲ್ಲ ಕಳೆದುಕೊಳ್ಳುವುದನ್ನು ಸೂಚಿಸಲು ಅಪ್ರಾಕೃತವಾದ ವಿರಜಾ ನದಿಯಲ್ಲಿ ಸ್ನಾನ ಮಾಡಬೇಕೆಂದೂ, ಅನಂತರ ವೈಕುಂಠವು ತೋರಿಕೊಳ್ಳುವುದೆಂದೂ ನಂಬಿಕೆ

ಸಾಲೋಕ್ಯ—ಒಂದೇ ಲೋಕದಲ್ಲಿ ಎಂದರೆ ವಿಷ್ಣುವಿನೊಂದಿಗೆ ಜೀವವು ವೈಕುಂಠದಲ್ಲಿ ವಾಸಮಾಡುವುದು (ಸಲೋಕ) , ಇದು ಮುಕ್ತಿಯಲ್ಲಿ ಒಂದು ಹೆಜ್ಜೆ (ಪದ) ಉಳಿದ ಹೆಜ್ಜೆಗಳು ಸಾಮೀಪ್ಯ, ಸಾರೂಪ್ಯ ಮತ್ತು ಸಾಯುಜ್ಯಗಳು



ಪೂರ್ವಕಲ್ಯಾಣಿ — ಅಟ್ಟ

ಧೂಪಾರತಿಯ ನೋಡುವ ಬನ್ನಿ, ನಮ್ಮ
ಗೋಪಾಲಕೃಷ್ಣ ದೇವರ ಪೂಜೆಯ — ಪ

ಮದ್ದಳೆ ಝಾಗಟೆ ತಾಳ ದಂಡಿಗೆ ಭೇರಿ
ತದ್ಧಿಮಿ ಧಿಮಿಕೆಂದು ರಭಸಗಳು
ಅದ್ಭುತ ಶಂಖ ನಾದಗಳಿಂದಲಿ ನಮ್ಮ
ಪದ್ಮನಾಭ ದೇವರ ದಿವ್ಯ ಪೂಜೆಯ — ೧

ಅಗರು ಚಂದನ ಧೂಪ ಗುಗ್ಗುಳ ಸಾಮ್ರಾಣಿ
ಘುಮಘುಮಿಸುವ ಧೂಪದಾರತಿಯು
ಮಿಗಿಲಾದ ಏಕಾರತಿ ಭಕ್ತಿಯಲಿ ನಮ್ಮ
ಜಗನ್ನಾಥ ವಿಠಲ ದೇವರ ಪೂಜೆಯ — ೨

ಹರಿ ಸರ್ವೋತ್ತಮನ ಭಕ್ತರಾಧಾರನ
ಪರಮ ಮಂಗಳ ಮೂರ್ತಿ ಪಾವನನ
ಪರದೈವವಾದಂಥ ಶ್ರೀರಂಗನಾಥನ
ಪುರಂದರವಿಠಲನ ದೇವರ ಪೂಜೆಯ — ೩

ಧೂಪಾರತಿ—ನಿರ್ಯಾಸ, ಪರಾಗ, ಕಾಷ್ಠ, ಗಂಧ ಮತ್ತು ಕೃತ್ರಿಮವೆಂಬ ಐದು ಜಾತಿಯ ಸುಗಂಧದ್ರವ್ಯಗಳನ್ನು ಸೇರಿಸಿ ಹೊಗೆ ಹೊರಡಿಸುವುದು ಧೂಪವೆನಿಸಿಕೊಳ್ಳುತ್ತದೆ ಇದಕ್ಕಾಗಿ ಗುಗ್ಗುಲು, ಅಗುರು, ಉಶೀರ, ಶರ್ಕರ, ಮಧುಚಂದನ ಮೊದಲಾದ ಸಾಮಗ್ರಿಗಳನ್ನು ಬಳಸುತ್ತಾರೆ ಹೀಗೆ ಧೂಪವನ್ನು ದೇವರೆದುರು ತೋರಿಸುವುದು, ಪ್ರದಕ್ಷಿಣಾಕಾರವಾಗಿ ಸುತ್ತುವುದು ಧೂಪಾರತಿ.

ಏಕಾರತಿ—ತಟ್ಟೆಯ ಮೇಲೆ ಒಂದು ಬತ್ತಿಯನ್ನಿಟ್ಟು ಆದನ್ನು ದೇವರ ಮುಂದೆ ಬೆಳಗುವುದು

ಕಾನಡ ಅಟ್ಟ

ಅನುಗಾಲವು ಚಿಂತೆ ಜೀವಕೆ, ತನ್ನ
ಮನವು ಶ್ರೀರಂಗನೊಳ್ ಮೆಚ್ಚುವ ತನಕ ಪ

ಸತಿಯು ಇದ್ದರು ಚಿಂತೆ, ಸತಿಯು ಇಲ್ಲದ ಚಿಂತೆ
ಮತಿಹೀನೆ ಸತಿಯಾದರು ಚಿಂತೆಯು
ಪೃಥಿವಿಯೊಳಗೆ ಸತಿ ಅತಿ ಚೆಲ್ವೆಯಾದರೆ
ಮಿತಿ ಮೇರೆಯಿಲ್ಲದ ಮೋಹದ ಚಿಂತೆ ೧

ಪುತ್ರರಿದ್ದರು ಚಿಂತೆ ಪುತ್ರರಿಲ್ಲದ ಚಿಂತೆ
ಅತ್ತು ಅನ್ನಕೆ ಕಾಡುವ ಚಿಂತೆಯು
ತುತ್ತಿನ ಆಸೆಗೆ ತುರುಗಳ ಕಾಯ್ದರು
ಸುತ್ತೇಳು ಕಡೆಯಿಲ್ಲದ ಚಿಂತೆಯು ೨

ಬಡವನಾದರು ಚಿಂತೆ ಬಲ್ಲಿದನಾದರು ಚಿಂತೆ
ಹಿಡಿ ಹೊನ್ನು ಕೈಯೊಳಿದ್ದರು ಚಿಂತೆಯು
ಪೊಡವಿಯೊಳಗೆ ಸಿರಿ ಪುರಂದರವಿಠಲನ
ಬಿಡದೆ ಚಿಂತಿಸಿದರೆ ಚಿಂತೆ ನಿಶ್ಚಿಂತೆ ೩

ಮತಿಹೀನೆ ಸತಿ—ವಿವೇಕವಿಲ್ಲದ ಹೆಂಡತಿ
ಬಲ್ಲಿದ—ಹಣವಂತ , ಬಲವುಳ್ಳವ

ಬಿಲಹರಿ ತ್ರಿವಿಡೆ

ಹರಿಯೊಂದು ಮನದಲಿ ಮರೆದೊಮ್ಮೆ ನೆನೆದರೆ
ದುರಿತ ಪರ್ವತಗಳ ಖಂಡಿಪುದು ವಜ್ರದಂತೆ ಪ

ಮೇರು ಸುವರ್ಣ ದಾನವ ಮಾಡಲು ಪುಣ್ಯ
ನೂರು ಕನ್ಯಾದಾನವ ಮಾಡಲು
ಧಾರುಣಿಯೆಲ್ಲವ ಧಾರೆಯನೆರೆಯಲು
ನಾರಾಯಣ ಸ್ಮರಣೆಗೆ ಸರಿಯಹುದೆ ೧

ಹತ್ತು ಲಕ್ಷ ಗೋದಾನ ಮಾಡಲು ಪುಣ್ಯ
ವ್ರತಗಳ ಅನುದಿನ ಆಚರಿಸಲು
ಶತಕೋಟಿ ಯಜ್ಞವ ಮಾಡಲು ಲಕ್ಷ್ಮೀ
ಪತಿ ನಾಮಸ್ಮರಣೆಗೆ ಸರಿಯೆನ್ನಬಹುದೆ ೨

ಗಂಗೆ ಕಾಳಿಂದಿ ಗೋದಾವರಿ ಕಾವೇರಿ
ತುಂಗಭದ್ರೆಯಲಿ ಸ್ನಾನವ ಮಾಡಲು
ಮಂಗಳ ಮೂರುತಿ ಪುರಂದರವಿಠ್ಠಲ
ರಂಗನ ಸ್ಮರಣೆಗೆ ಸರಿಯೆನ್ನಬಹುದೆ ೩

ವಜ್ರದಂತೆ—ಪರ್ವತವನ್ನು ಸೀಳಲು ಇಂದ್ರನು ಬಳಸಿದ ಆಯುಧ

ಮೇರುಸುವರ್ಣದಾನ—ಬಂಗಾರದ ನಾಣ್ಯಗಳನ್ನು ಬೆಟ್ಟದಂತೆ ಸುರಿದು, ದಾನ ಮಾಡುವುದು

ಧಾರುಣಿಯೆಲ್ಲವ—ಭೂದಾನ

೧೫೬

ಮಧ್ಯಮಾವತಿ

ಅಕೋ ಹಾಂಗಿಹಾನೆ ಇಕೋ ಹೀಂಗಿಹಾನೆ
ಪರಬ್ರಹ್ಮ ನಾರಾಯಣ ಹ್ಯಾಂಗಿಹಾನೆಂದರೆ ಪ

ಕಾಲಿಲ್ಲದೆ ನಡಿಸುವ ಕೈಯಿಲ್ಲದೆ ಹಿಡಿಸುವ
ಹಲ್ಲಿಲ್ಲದೆ ತಿನಿಸುವ ಹೊಟ್ಟಿಲ್ಲದೆ ಉಣಿಸುವ ೧

ಕಣ್ಣಿಲ್ಲದೆ ಕಾಣಿಸುವ ಕಿವಿಯಿಲ್ಲದೆ ಕೇಳಿಸುವ
ಕಣ್ಣಿಗೆ ಕಾಣಿಸದಂತೆ ಒಳಗೆ ಹೊರಗೆ ತುಂಬಿರುವ ೨

ಶ್ವೇತದ್ವೀಪದಲ್ಲಿ ಕುಳಿತಾನಂತಾಸನದಿ ಮಲಗಿದ
ಖ್ಯಾತ ವೈಕುಂಠದಲಿ ನಿಂತ ನಾಥ ಪುರಂದರವಿಠಲ ೩

ಶ್ವೇತದ್ವೀಪ—ಮಹಾಭಾರತದ ಶಾಂತಿಪರ್ವದಲ್ಲಿ ಇದು ವಿಷ್ಣುವಿನ ವಾಸಸ್ಥಾನವೆಂದು ಹೇಳಿದೆ ಇಲ್ಲಿಯೇ ನಾರದರಿಗೆ ನಾರಾಯಣನು ಭಾಗವತಧರ್ಮವನ್ನು ಬೋಧಿಸಿದ್ದು , ಬೋಧಿಸುವಾಗ ಕುಳಿತಿರುವ ಭಂಗಿ

ಅನಂತಾಸನ—ಆದಿಶೇಷನ ಶಯ್ಯೆ , ಇಲ್ಲಿ ಮಲಗಿರುವ ಭಂಗಿ

ವೈಕುಂಠ—ವಿಷ್ಣುವಿನ ನೆಲೆಮನೆ , ಇಲ್ಲಿ ನಿಂತಿರುವ ಭಂಗಿ

ಇವು ಮೂರೂ ವಿಷ್ಣುವಿನ ಸ್ಥಾನಗಳೆಂದು ಪ್ರತೀತಿ

ಮಧ್ಯಮಾವತಿ ಆದಿ

ಪವಡಿಸು ಪರಮಾತ್ಮನೆ, ಸ್ವಾಮಿ ಪ

ಭವರೋಗ ವೈದ್ಯನೆ ಭಕ್ತರ ಪ್ರಿಯನೆ ಅ

ಕುಂದಣದಿ ರಚಿಸಿದ ಸೆಜ್ಜೆ ಮನೆಯಲ್ಲಿ
ಇಂದ್ರನೀಲಮಣಿ ಮಂಟಪದಿ
ಚಂದ್ರಕಾಂತಿಯ ರಾಣದೀವಿಗೆ ಹೊಳೆಯಲು
ಸಿಂಧುತನಯೆ ಆನಂದದಿಂದ ೧

ತೂಗುಮಂಚದಿ ಹಂಸತೂಲದ ಹಾಸಿಗೆ
ನಾಗಸಂಪಿಗೆ ಹೂವಿನ ಒರಗು
ಸಾಗರಸುತೆ ಸಮ್ಮೇಳದಲಿ ನಿಜ
ಭೋಗದಿಂದ ಓಲಾಡುತಲಿ ೨

ಸದ್ದಡಗಿತು ಗಡಿವಾರ ಸಾಗಿತು ಬೀಗ
ಮುದ್ರೆಗಳಾಯಿತು ಬಾಗಿಲಿಗೆ
ತಿದ್ದಿದ ಛಾವಣಿ ಶಂಖದ ಘೋಷಣೆ
ಪದ್ಮನಾಭ ಶ್ರೀ ಪುರಂದರವಿಠಲ ೩

ಕುಂದಣದಿ—ಬಂಗಾರದ ತಗಡಿನಲ್ಲಿ ಮುತ್ತುರತ್ನಗಳನ್ನು ಜೋಡಿಸುವುದು ಕುಂದಣದ ಕೆಲಸವೆನಿಸಿಕೊಳ್ಳುತ್ತದೆ
ರಾಣದೀವಿಗೆ—ಸ್ಥಾನದೀಪಿಕಾ, ಸಮಯ , ಮನೆದೀಪವೂ ಆಗಬಹುದು
ಸಿಂಧುತನಯೆ—ಲಕ್ಷ್ಮಿ
ಗಡಿವಾರ—ಗಡಿಯಾರ; ಗಂಟೆಯನ್ನು ತಿಳಿಸುವ ಸಾಧನ.

# ಶ್ರೀರಂಗಪಟ್ಟಣ

ಮೈಸೂರಿನಿಂದ ಒಂಬತ್ತು ಮೈಲು ದೂರವಿರುವ ಶ್ರೀರಂಗಪಟ್ಟಣವು ಆದಿರಂಗವೆಂದು ಪ್ರತೀತಿ ಕಾವೇರಿಯು ಇಲ್ಲಿ ಇಬ್ಭಾಗವಾಗಿ ಹರಿದು ಮತ್ತೆ ಸೇರಿಕೊಳ್ಳುತ್ತದೆ ಶ್ರೀರಂಗವು ಪೂರ್ವರಂಗವಾದರೆ ಶ್ರೀರಂಗ ಪಟ್ಟಣವು ಪಶ್ಚಿಮರಂಗ ಇಲ್ಲಿನ ರಂಗನಾಥಸ್ವಾಮಿಯನ್ನು ಗೌತಮ ಋಷಿಯು ಪ್ರತಿಷ್ಠೆಮಾಡಿದನಾಗಿ ಇದು ಗೌತಮಕ್ಷೇತ್ರವೆಂದೂ ಹೆಸರಾಗಿದೆ ರಂಗನಾಥನ ಆಲಯವನ್ನು ಮೊಟ್ಟಮೊದಲು ಕಟ್ಟಿಸಿದವಳು ಹಂಬಿ ಎಂಬ ದೇವದಾಸಿ , 817ರಲ್ಲಿ, ಮುಂದೆ 894ರಲ್ಲಿ ತಲಕಾಡು ಗಂಗವಂಶದ ತಿರುಮಲಯ್ಯ (ತಿಮ್ಮರಾಯ) ಎಂಬ ಅರಸನು ಈ ದೇವಾಲಯವನ್ನು ವಿಸ್ತರಿಸಿದನು ಇದು ಈಗಿನ ಸ್ವರೂಪವನ್ನು ತಳೆದದ್ದು 1200ರ ಸುಮಾರಿಗೆ , ಹೊಯ್ಸಳ ರಾಜನಾದ ಉದಯಾದಿತ್ಯನ ಆಸಕ್ತಿಯಿಂದ ಈ ಗುಡಿಯಲ್ಲಿ ಮೂರ್ತಿಯು ಶ್ರೀರಂಗದಲ್ಲಿರುವಂತೆ ಶೇಷಶಾಯಿಯಾಗಿದ್ದರೂ ನಾಭಿಕಮಲವಿಲ್ಲ, ಪಾದದ ಬಳಿ ಶ್ರೀದೇವಿ ಭೂದೇವಿಯರಿಲ್ಲ , ಬದಲಿಗೆ ಕಾವೇರಿಯ ಮೂರ್ತಿಯಿದೆ ಈ ಗುಡಿಯಲ್ಲಿರುವ ಶ್ರೀನಿವಾಸನ ಸನ್ನಿಧಿಯನ್ನು ವ್ಯಾಸರಾಯಸ್ವಾಮಿಗಳೇ ಏರ್ಪಡಿಸಿದರೆಂದು ಪ್ರತೀತಿ



ಶ್ರೀರಂಗಪಟ್ಟಣದ ರಂಗನಾಥ ದೇವಾಲಯ

೧೫೮

ಕೇದಾರಗೌಳ ಝಂಪೆ

ಕೊಟ್ಟ ಸಾಲವ ಕೊಡದೆ ಭಂಡಾಟ ಮಾಡುತಾನೆ ಪ

ಎಷ್ಟು ಬೇಡಿದರೆನ್ನ ಪೋಯೆನ್ನುತಾನೆ ಅ

ಭರದಿ ಕೇಳಲು ಜಲದಿ ಕಣ್ಣು ಬಾಯಿ ಬಿಡುತಾನೆ
ತರುಬಿ ಕೇಳಲು ಕಲ್ಲು ಹೊತ್ತೈದಾನೆ
ಉರುಬಿ ಕೇಳಲು ಊರು ಅಡವಿಯೊಳಗಿರುತಾನೆ
ಇರುಳು ಹಗಲಲ್ಲಿ ಕಾಣಿಸಿಕೊಳ್ಳುತಾನೆ ೧

ಕಂಡು ನಿಲ್ಲಿಸಲೊಂದು ಕಾಲಿನಲ್ಲಿ ನಿಲ್ಲುತಾನೆ
ಕೊಂಡ ಸಾಲಕೆ ಕೊಡಲಿ ಪಿಡಿವುತಾನೆ
ಉಂಡರಾಣೆಯೆನಲು ಉಪವಾಸವೈಧಾನೆ
ಭಂಡತನದಲಿ ರಕ್ಕು ನಡೆಸ್ಯಾಡುತಾನೆ ೨

ಕೆಟ್ಟು ಬೈಯಲು ಲಜ್ಜೆ ಹೇವವನು ತೊರೆವುತಾನೆ
ಕೊಟ್ಟು ಹೋಗನಲು ಕಲಿಯಾಗುತಾನೆ
ಸೃಷ್ಟಿಗೂಡೆಯ ಶ್ರೀರಂಗಪಟ್ಟಣದ ಪುರಂದರ
ವಿಟ್ಠಲೇಶನು ನಮ್ಮ ಪಶ್ಚಿಮದ ರಂಗನಾಥ ೩

ಪೋ ಎನ್ನುತಾನೆ—ಹೋಗೆನ್ನುತಾನೆ
ಭರದಿ ಕೇಳಲು —ಮತ್ಸ್ಯಾವತಾರದಲ್ಲಿ
ತರುಬಿ ಕೇಳಲು —ಕೂರ್ಮಾವತಾರದಲ್ಲಿ
ಉರುಬಿ ಕೇಳಲು —ವರಾಹಾವತಾರದಲ್ಲಿ
ಇರುಳು ಹಗಲಲ್ಲಿ —ನರಸಿಂಹಾವತಾರದಲ್ಲಿ
ಕಂಡು ನಿಲ್ಲಿಸಲೊಂದು ಕಾಲಲಿ—ತ್ರಿವಿಕ್ರಮನಾಗಿ ವಾಮನಾವತಾರದಲ್ಲಿ.
ಕೊಂಡ ಸಾಲಕೆ —ಪರಶುರಾಮಾವತಾರದಲ್ಲಿ

ಉಂಡರಾಣೆ —ರಾಮಾವತಾರದಲ್ಲಿ

ಭಂಡತನದಲಿ —ಕೃಷ್ಣಾವತಾರದಲ್ಲಿ

ಕೆಟ್ಟು ಬೈಯಲು —ಬೌದ್ಧಾವತಾರದಲ್ಲಿ

ಕೊಟ್ಟು ಹೋಗೆನಲು —ಕಲ್ಕ್ಯವತಾರದಲ್ಲಿ

ಪಶ್ಚಿಮದ ರಂಗನಾಥ—ಶ್ರೀರಂಗದಲ್ಲಿ ಪೂರ್ವರಂಗನಾಥನೆಂದೂ ಶ್ರೀರಂಗಪಟ್ಟಣ ದಲ್ಲಿ ಪಶ್ಚಿಮರಂಗನಾಥನೆಂದೂ ಎಣಿಕೆ



೧೩೯

ವಾಸುದೇವ ನಿನ್ನ ಮರ್ಮ ಕರ್ಮಂಗಳ
ದೇಶದೊಳಗೆ ನಾ ಹೇಳಲೋ ಪ

ಬೇಸರದೆ ಎನ್ನ-ಹೃದಯ ಕಮಲದಲ್ಲಿ
ವಾಸವಾಗಿ ಸುಮ್ಮನಿದ್ದು ಕಾಯೋ ಹರಿ ವಾಸುದೇವ ಅ

ತರಳತನದಲ್ಲಿ ತುರುವ ಕಾಯ ಹೋಗಿ
ಒರಳಿಗೆ ಕಟ್ಟಿದ್ದು ಹೇಳಲೋ
ದುರುಳತನದಲ್ಲಿ ಕೆನೆ ಮೊಸರನು ಕದ್ದು
ನಿರುತ ನೀ ತಿಂದದ್ದು ಹೇಳಲೋ ೧

ನೆರೆಹೊರೆ ಮನೆಗಳ ಹೊಕ್ಕು ನೀ ಬೆಣ್ಣೆಯ
ಅರಿಯದಂತೆ ಮೆದ್ದದ್ದು ಹೇಳಲೋ
ದುರುಳನಾವನೆಂದು ಬೆದರಿಸಿದವರಿಗೆ
ಮರುಳುಗೊಳಿಸಿದ್ದು ಹೇಳಲೋ ೨

ಮೌನಗೌರಿವ್ರತಕೋಸ್ಕರ ಮಕ್ಕಳ ಮಾ
ವನ ಕೊಂದದ್ದು ಹೇಳಲೋ
ನೀನಾಗಿ ತುರುಗಳ ಹಿಂಡು ಕಾಯಹೋದ
ಹೀನತನವ ನಾ ಹೇಳಲೋ ೩

ತಾನಾಗಿ ಹಾಲು ಕೊಟ್ಟೇನೆಂದು ಬಂದವಳ
ಪ್ರಾಣವ ಕೊಂದದ್ದು ಹೇಳಲೋ
ನೀನಾಗಿ ನೆರೆಮನೆ ವಾರ್ತೆಗಳೆಲ್ಲ
ನಾನಾಬಗೆ ಮಾಡಿದ್ದು ಹೇಳಲೋ ೪

ದುಷ್ಟ ಹಾವಿನ ಮೇಲೆ ತುಳಿದಂಥ ನಿನ್ನಯ
ದಿಟ್ಟತನವ ನಾ ಹೇಳಲೋ
ನೆಟ್ಟನೆ ಕಂಬವ ತಾಗಿ ದೈತ್ಯನ
ಮೆಟ್ಟಿ ತುಳಿದದ್ದ ನಾ ಹೇಳಲೋ ೫

ಹಿಡಿತುಂಬ ಅವಲಕ್ಕಿ ಸಂಪಾದನೆ ಮಾಡಿ
ದೃಢತರ ಸಿರಿ ಕೊಟ್ಟಿದ್ದ ಹೇಳಲೋ
ಮಡದಿ ಮಾತಿಗೆ ನೀನಂಜಿ ಪಾರಿಜಾತ
ಕಡುಬೇಗ ತಂದದ್ದ ನಾ ಹೇಳಲೋ ೬

ಮಡದಿ ಮಗನ ತಂದು ಗುರುದಕ್ಷಿಣೆ ಕೊಟ್ಟು
ಒಡವನ ಗೆಳೆಯನೆಂದದ್ದ ಹೇಳಲೋ
ಒಡನೆ ಓಡುತ ದೈತ್ಯಗಂಜಿ ಗುಹೆಯೊಳ
ಗಡಗಿಕೊಂಡದ್ದ ನಾ ಹೇಳಲೋ ೭

ಕಟ್ಟಿ ಏಳು ದಿನ ಮಳೆಗಳ ಸುರಿಸಲು
ಬೆಟ್ಟವನೆತ್ತಿದ್ದ ನಾ ಹೇಳಲೋ
ಅಟ್ಟಿಸಿಕೊಂಡು ನೀ ಯಾಗಶಾಲೆಗೆ ಹೋಗಿ
ಹೊಟ್ಟೆಬಾಕನೆಂಬುದ ಹೇಳಲೋ ೮

ಧರೆಯನಾಳುವ ಶ್ರೀರಂಗಪಟ್ಟಣದಲ್ಲಿ
ಸ್ಥಿರವಾಗಿ ನಿಂತಿದ್ದ ಹೇಳಲೋ
ಕರುಣಿಸಿ ಬಾರಯ್ಯ ಪುರಂದರವಿಠಲ
ಪರಮ ದಯಾಳುವೆಂಬುದ ಹೇಳಲೋ ೯

[ಇದರಲ್ಲಿ ಕೃಷ್ಣನ ಬಾಲಲೀಲೆಗಳು ಲೋಕೋಪಕಾರ, ಅವತಾರ ಮಹಿಮೆಗಳ ವರ್ಣನೆಯಿದೆ ]

ದುಷ್ಟಹಾವಿನ ಮೇಲೆ—ಕಾಳಿಂದೀ ಮಡುವಿನಲ್ಲಿ ಕಾಳಿಯ ದಮನದ ಸಂದರ್ಭ
ನೆಟ್ಟನೆ ಕಂಬವ —ನರಸಿಂಹಾವತಾರದಲ್ಲಿ
ಹಿಡಿತುಂಬ ಅವಲಕ್ಕಿ—ಕುಚೇಲೋಪಾಖ್ಯಾನ
ಮಡದಿ ಮಾತಿಗೆ —ಪಾರಿಜಾತ ಹರಣ
ಮಡದಿ ಮಗನ ತಂದು —ಸಾಂದೀಪನೀ ಋಷಿಗಳಲ್ಲಿ
ಕಟ್ಟಿ ಏಳುದಿನ—ಗೋವರ್ಧನೋದ್ಧರಣ

# ಹಂಪಿ

ಬಳ್ಳಾರಿ ಜಿಲ್ಲೆಯಲ್ಲಿ ಹೊಸಪೇಟೆಯಿಂದ ಏಳುಮೈಲು ದೂರದಲ್ಲಿ ರುವ ತುಂಗಭದ್ರಾ ನದಿಯ ದಕ್ಷಿಣ ದಂಡೆಯ ಮೇಲಿರುವ ಹಂಪಿ 1336 ರಿಂದ 1565ರವರೆಗೆ ವೈಭವದಿಂದ ಮೆರೆದ ವಿಜಯನಗರ ಸಾಮ್ರಾಜ್ಯದ ರಾಜಧಾನಿಯಾಗಿದ್ದ ಊರು , ಅದಕ್ಕೆ ಪಂಪಾಕ್ಷೇತ್ರವೆಂದು ಪುರಾಣ ಪ್ರಸಿದ್ಧಿಯೂ ಇದೆ ರಾಮಾಯಣದ ಋಷ್ಯಮೂಕ ಪರ್ವತವಿದ್ದುದು ಇಲ್ಲೇ ಎಂದೂ, ಈಗಿನ ತುಂಗಭದ್ರಾ ನದಿಯನ್ನೇ ಆಗ ಪಂಪಾ ನದಿ ಯೆಂದು ಕರೆಯುತ್ತಿದ್ದರೆಂದೂ ರಾಮನು ಸುಗ್ರೀವನ ಸಖ್ಯವನ್ನು ಬಯಸಿದ್ದು ಇಲ್ಲೇ ಎಂದೂ ಹತ್ತಿರವಿರುವ ಮಾಲ್ಯವಂತವೆಂಬ ಬೆಟ್ಟದಲ್ಲೇ ಹನುಮಂತನು ಸೀತಾದರ್ಶನವನ್ನು ಮಾಡಿ ಲಂಕೆಯಿಂದ ಹಿಂದಿರುಗಿದ ಮೇಲೆ ರಾಮನನ್ನು ಕಂಡು ಸೀತಾವಾರ್ತೆಯನ್ನು ಹೇಳಿದನೆಂದೂ ವಿವರ ಗಳಿವೆ ವಿಜಯನಗರದ ಅರಸರಿಗೆ ಕುಲದೈವವಾದ ಪಂಪಾಪತಿಯ (ವಿರೂಪಾಕ್ಷನ) ದೇವಾಲಯ ಇಲ್ಲಿದೆ ಕೃಷ್ಣದೇವರಾಯನು ಸಿಂಗನಾಯಕನ ಹಳ್ಳಿಯನ್ನು ಈ ಗುಡಿಗೆ ದಾನವಾಗಿ ಕೊಟ್ಟು ರಂಗಮಂಡಪವನ್ನು ಕಟ್ಟಿಸಿದ ಉಲ್ಲೇಖವಿದೆ ಪಂಪಾಪತಿಯ ದೇವಸ್ಥಾನವಲ್ಲದೆ ಅದರ ನೆರೆ ಯಲ್ಲಿರುವ ಹೇಮಕೂಟ ಪರ್ವತವೂ ಕೃಷ್ಣಸ್ವಾಮಿ ದೇವಾಲಯವೂ ವಿಜಯವಿಟ್ಠಲ ದೇವಾಲಯವೂ ಪ್ರಸಿದ್ಧವಾದುವು ಉದಯಗಿರಿ ಜೈತ್ರ ಯಾತ್ರೆ ಮುಗಿಸಿ ಹಂಪಿಗೆ ಹಿಂದಿರುಗಿದಾಗ ಕೃಷ್ಣದೇವರಾಯನು ಅಲ್ಲಿಂದ ತಂದ ಪಂಡರಪುರದ ವಿಟ್ಠಲನ ಮೂರ್ತಿಗೋಸ್ಕರ ವಿಟ್ಠಲಾಲಯವನ್ನು ಕಟ್ಟಿಸಿದನಂತೆ ಆದರೆ ಪಂಢರಪುರದ ಮರಾಠೀಸಂತರು ಕೋರಿಕೊಳ್ಳಲು, ಕೃಷ್ಣದೇವರಾಯನು ವಿಟ್ಠಲನ ಶಿಲಾಮೂರ್ತಿಯನ್ನು ಪಂಢರಪುರಕ್ಕೇ ಹಿಂದಕ್ಕೆ ಕೊಟ್ಟನಂತೆ ಈಗ ವಿಜಯವಿಟ್ಠಲಾಲಯದ ಗರ್ಭಗುಡಿಯಲ್ಲಿ ಮೂರ್ತಿಯಿಲ್ಲ ಆಲಯವೂ ಅಪೂರ್ಣವಾಗಿದೆಯೆಂದು ಹೇಳುತ್ತಾರೆ ಇದರ ಹತ್ತಿರವೇ ಪುರಂದರದಾಸರ ಮಂಟಪ'ವೆಂದು ಹೆಸರಾಗಿರುವ ಸ್ಥಳವನ್ನೂ ತೋರಿಸುತ್ತಾರೆ ಪುರಂದರದಾಸರು ಪಂಪಾಪತಿಯಾದ ವಿರೂಪಾಕ್ಷನನ್ನೇ ತಮ್ಮ ಪದವಲ್ಲಿ ಸ್ತುತಿಸಿದ್ದಾರೆ ಪುರಂದರದಾಸರು ಹಂಪಿಯಲ್ಲೇ ತೀರಿಕೊಂಡರೆಂದು ಪ್ರತೀತಿ ಹಂಪಿಯನ್ನು ರಾಜಧಾನಿ ಯನ್ನಾಗಿ ಮಾಡಿಕೊಂಡವನು ಸಂಗಮ ವಂಶದ ಹರಿಹರ ಕೃಷ್ಣದೇವ ರಾಯನ ಕಾಲದಲ್ಲಿ ಅದರ ವೈಭವ ಮುಗಿಲು ಮುಟ್ಟಿತು ಅವನ ಕಾಲ ದಲ್ಲಿ ಇಲ್ಲಿಗೆ ಬಂದ ಪ್ರವಾಸಿ ಡಾಮಿಂಗೋ ಪೇಯಸ್ ಇದನ್ನು ಮನ ಮುಟ್ಟುವಂತೆ ಬಣ್ಣಿಸಿದ್ದಾನೆ ಅದಕ್ಕೆ ಮೊದಲೇ ಇಮ್ಮಡಿ ದೇವರಾಯನ ಕಾಲದಲ್ಲಿ ಇಲ್ಲಿಗೆ ಬಂದಿದ್ದ ಅಬ್ದುರ್ ರಜಾಕ್ (1443ರ ಏಪ್ರಿಲ್‌ನಿಂದ ಡಿಸೆಂಬರ್ ತಿಂಗಳವರೆಗೆ) ಉಳಿಸಿರುವ ದಾಖಲೆಯಂತೆ ಆಗಲೇ ಇದರ ಯಶಸ್ಸು ನಾಡಿನಲ್ಲೆಲ್ಲ ಹರಡುತ್ತಿದ್ದಿತು 1565ರಲ್ಲಿ ನಡೆದ ರಕ್ಕಸ ತಂಗಡಿ (ತಾಳಿಕೋಟೆ) ಸಮರದಲ್ಲಿ ಈ ನಗರವು ಹಾಳಾಯಿತು ಅಂದಿನಿಂದ ಇದು 'ಹಾಳುಹಂಪಿ'ಯಾಗಿಯೇ ಉಳಿದಿದೆ ಇಲ್ಲಿನ ಶಿಥಿಲಾವಶೇಷಗಳು ಕೂಡ ಆಕರ್ಷಕವಾಗಿವೆ !

ನಾದನಾಮಕ್ರಿಯ ಆದಿ

ಕಂಡೆ ಕರುಣಾನಿಧಿಯ
ಗಂಗೆಯ ಮಂಡೆಯೊಳಿಟ್ಟ ಧೊರೆಯ, ಶಿವನ ಪ

ರುಂಡಮಾಲೆ ಸಿರಿಯ
ನೊಸಲೊಳು ಕೆಂಡಗಣ್ಣಿನ ಬಗೆಯ, ಹರನ ಅ

ಕಪ್ಪುಗೊರಳ ಹರನ ಕಂ
ದರ್ಪ ಪಿತನ ಸಖನ ಮುಪ್ಪುರ ಗೆಲಿದವನ
ಮುನಿನುತ ಸರ್ವಭೂಷಣ ಶಿವನ, ಹರನ ೧

ಭಸಿತ ಭೂಷಿತ ಶಿವನ
ಭಕ್ತರ ವಶದೊಳಗಿರುತಿಹನ ಪಶುಪತಿಯೆನಿಸುವನ
ವಸುಧೆಯೋಳ್ ಶಶಿಶೇಖರ ಶಿವನ, ಹರನ ೨

ಗಜ ಚರ್ಮಾಂಬರನ
ಗೌರೀವರ ತ್ರಿಜಗದೀಶ್ವರನ ತ್ರಿಜಗನ್ಮೋಹನನ
ತ್ರಿಲೋಚನ ತ್ರಿಪುರಾಂತಕ ಶಿವನ, ಹರನ ೩

ಕಾಮಿತ ಫಲವೀವನ
ಭಕ್ತರ ಪ್ರೇಮದಿ ಸಲಹುವನ ರಾಮನಾಮಸ್ಮರನ
ರತಿಪತಿ ಕಾಮನ ಸಂಹರನ ಶಿವನ ೪

ಧರೆಗೆ ದಕ್ಷಿಣಕಾಶಿ
ಎನಿಸುವ ಪುರಪಂಪಾವಾಸಿ ತಾರಕ ಉಪದೇಶಿ
ಪುರಂದರವಿಠಲ ಭಕ್ತರ ಪೋಷಿ ೫

ನೊಸಲೊಳು—ಹಣೆಗಣ್ಣು ಅಗ್ನಿಯೆಂದು ಸೂಚನೆ

ಕಪ್ಪುಗೊರಳ—ವಿಷಕಂಠನಾದುದರಿಂದ

ಕಂದರ್ಪಪಿತನ—ಮನ್ಮಥನ ತಂದೆಯಾದ ವಿಷ್ಣುವಿನ

ಮುಪ್ಪುರ—ಮೂರುಪುರಗಳನ್ನು, ತ್ರಿಪುರವನ್ನು, ತಾರಕಾಸುರನ ಮೂವರು ಮಕ್ಕಳಪುರಗಳನ್ನು

ತಾರಕ ಉಪದೇಶಿ—ತಾರಕವೆಂದರೆ ರಾಮನಾಮ, ಅದನ್ನು ಪಾರ್ವತಿಗೆ ಉಪದೇಶ ಮಾಡಿ "ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ" ಎಂದು ಹೊಗಳಿದ ನೆಂದು ಉಮಾಸಂಹಿತೆ (3,8)



ಮಧ್ಯಮಾವತಿ ಆದಿ

ಸ್ವಾಮಿ ಮುಖ್ಯಪ್ರಾಣ ನೀ ಮಲೆವರ ಗಂಟಲಗಾಣ ಪ

ಸಕಲ ವಿದ್ಯಾಪ್ರವೀಣ ನೀ ಹಿಡಿದೆಯೋ ರಾಮರ ಚರಣ ಅ

ಏಕಾದಶೀಯ ರುದ್ರ ನೀ ಹಿಡಿದೆಯೋ ರಾಮರ ಮುದ್ರ
ಸೇತುವೆಗಟ್ಟಿ ಸಮುದ್ರ ನೀ ಹಾರಿದೆಯೋ ಬಲಭದ್ರ ೧

ಸಂಜೀವಿನಿ ಪರ್ವತವನ್ನು ಅಂಜದೆ ತಂದೆಯೋ ನೀನು
ಅಂಜನೆತನುಸಂಭವನು ನಿನ್ನ ಬೇಡಿಕೊಂಬೆನೊ ನಾನು ೨

ವೈಕುಂಠಸ್ಥಳದಿಂದ ಬಂದು ಪಂಪಾಕ್ಷೇತ್ರದಿ ನಿಂದು
ಮಂತ್ರೋದ್ಧಾರಕನೆಂದು ಪುರಂದರವಿಠಲನೆ ಸಲಹೆಂದು ೩

[ಹಂಪಿಯಲ್ಲಿ ವ್ಯಾಸತೀರ್ಥರು ಪ್ರತಿಷ್ಠೆಮಾಡಿದ ಯಂತ್ರೋದ್ಧಾರಕ ಪ್ರಾಣದೇವರನ್ನು ಕುರಿತ ಸ್ತುತಿ ಇದು ಈ ಯಂತ್ರದ ನಡುವೆ ಯೋಗಮುದ್ರೆಯಲ್ಲಿ ಕುಳಿತ ಹನುಮಂತನಿದ್ದಾನೆ, ಯಂತ್ರವನ್ನು ಸುತ್ತರಿದು ನಿರ್ದಿಷ್ಟ ಗ್ರಂಥಿಸ್ಥಳಗಳಲ್ಲಿ ವಾನರ ಪರಿವಾರಮೂರ್ತಿಗಳಿವೆ ಹನುಮಂತನ ಸುತ್ತ ಷಟ್ಕೋಣಯಂತ್ರವಿದೆ (ಯುಗನದ್ಧ ತ್ರಿಕೋಣದ್ವಯ) ವೃತ್ತದೊಳಗೆ ಗ್ರಂಥಾಕ್ಷರಗಳಲ್ಲಿ ಮಂತ್ರೋಲ್ಲೇಖನವಿದೆ, ಇದರಿಂದ ಯಂತ್ರೋದ್ಧಾರ ಸಾಧ್ಯವಾಗಿದೆ ಆದುದರಿಂದಲೇ ಇದು ಯಂತ್ರೋದ್ಧಾರಕ ಯಂತ್ರ ]

ಮಲೆವರ —ಸೆಣಸುವವರ

ಏಕಾದಶೀಯ ರುದ್ರ—ಭಾಗವತದ ಪ್ರಕಾರ (3, 12, 12) ಹನ್ನೊಂದನೆಯ ರುದ್ರ ಧೃತವ್ರತ, ಹನುಮಂತನು ರುದ್ರಾಂಶನಾದುದರಿಂದಲೂ, ರಾಮ ಸೇವೆಯನ್ನು ವ್ರತದಂತೆ ಹಿಡಿದುದರಿಂದಲೂ ಈ ವಿಶೇಷಣ ಅವನಿಗೆ ಒಪ್ಪುತ್ತದೆ

# ಹರಿಹರ

ಚಿತ್ರದುರ್ಗ ಜಿಲ್ಲೆಯಲ್ಲಿ ತುಂಗಭದ್ರಾ ನದಿಯ ಬಲದಂಡೆಯ ಮೇಲಿರುವ ಊರು , ಇದು ಗುಹಾರಣ್ಯಕ್ಷೇತ್ರವೆಂದು ಪ್ರತೀತಿ ಗುಹ ನೆಂಬ ರಾಕ್ಷಸನನ್ನು ವಿಷ್ಣುವೂ ಶಿವನೂ ಸೇರಿ (ಹರಿಹರನಾಗಿ) ಕೊಂದ ಸ್ಥಳವೆಂದು ಪುರಾಣದ ಕಥೆ ಹರಿಹರೇಶ್ವರನಿಗೆ ಇಲ್ಲೊಂದು ಗುಡಿಯಿದೆ ಇದನ್ನು ಹೊಯ್ಸಳರಾಜ ಇಮ್ಮಡಿ ನರಸಿಂಹನ ಮಂತ್ರಿ ಪೋಲಾಳ್ವನು 1223ರಲ್ಲಿ ಕಟ್ಟಿಸಿದನು ಗರ್ಭಗುಡಿಯಲ್ಲಿರುವ ಶಂಕರನಾರಾಯಣ (ಹರಿಹರ) ಮೂರ್ತಿಯು ಸ್ವಯಂಭುವವೆಂದು ಸ್ಥಳಪುರಾಣ ಹೇಳುತ್ತದೆ ಕೂರ್ಮಪೀಠದ ಮೇಲೆ ಆರಡಿ ಎತ್ತರಕ್ಕೆ ನಿಂತಿರುವ ಈ ಮೂರ್ತಿ ಒಂದು ಕೈಯಲ್ಲಿ ತ್ರಿಶೂಲವನ್ನೂ ಇನ್ನೊಂದರಲ್ಲಿ ಚಕ್ರವನ್ನೂ ಧರಿಸಿದೆ , ಕೊರಳಲ್ಲಿ ರುಂಡಮಾಲೆಯೂ ಇದೆ, ವೈಜಯಂತಿಯೂ ಇದೆ ಬಲಗಡೆ ತಲೆಯ ಮೇಲೆ ಚಂದ್ರ, ಗಂಗೆ, ಜಟೆ ದೇವರ ಬಲಭಾಗದಲ್ಲಿ ಗೌರಿ, ಗಣೇಶ, ಎಡ ಭಾಗದಲ್ಲಿ ಲಕ್ಷ್ಮಿ ಮತ್ತು ಋಷ್ಯಶೃಂಗ ಮುನಿ ಹೀಗೆ ಶಿವ, ವಿಷ್ಣು ಎರಡೂ ರೂಪಗಳನ್ನು ಅಳವಡಿಸಿಕೊಂಡಿರುವ ಮೂರ್ತಿ ಸ್ವಾರಸ್ಯವಾಗಿದೆ ಹರಿಹರದ ಈ ಮೂರ್ತಿಯನ್ನು ವಾದಿರಾಜಸ್ವಾಮಿಗಳು ತಮ್ಮ ಸಂಸ್ಕೃತ ಕಾವ್ಯವಾದ ತೀರ್ಥಪ್ರಬಂಧ ದಲ್ಲಿ ಉಲ್ಲೇಖಿಸಿರುವುದಲ್ಲದೆ, ಬಿಡಿಯಾಗಿ ಕನ್ನಡದ ಪದಗಳಲ್ಲೂ ಸ್ತುತಿಸಿದ್ದಾರೆ ಕನಕದಾಸರೂ ಹರಿಹರನನ್ನು ಕುರಿತು ಹಾಡಿದ್ದಾರೆ ವಿಜಯದಾಸರ ಹರಿಹರಕ್ಷೇತ್ರ ಸುಳಾದಿ ಯೇ ಒಂದಿದೆ

೧೬೨

ಮುಖಾರಿ ಆದಿ

ಕಾರುಣ್ಯ ಮೂರುತಿಯೆ ಕಂಗಳು ಮೂರುಳ್ಳ ದೊರೆಯೆ ಪ

ಧಾರಿಣಿಯೊಳು ನಿನಗೆಣೆಯೋ ಗುರುದೇವ ಶಿಖಾಮಣಿಯೆ ಅ

ಗುಹಾಸುರಮರ್ದನನೇ ದೇವ ಖಗವೃಷವಾಹನನೆ
ಗಜಚರ್ಮ ಪೀತಾಂಬರನೆ ಮಹಾದೇವ ಮಾಧವನೆ ೧

ತ್ರಿಪುರಾವಳಿ ಸಂಹಾರನೆ ತ್ರೈಲೋಕ್ಯ ಪಾವನನೆ
ಅಪಾರ ಮಹಿಮನೆ ಪ್ರಸನ್ನ ಶ್ರೀ ಹರಿಹರನೆ ೨

ತುಂಗಭದ್ರದಡಿಯ ತಾಳಿಪ್ಪೆ ಗಂಗೆಯ ಜಡೆಯ
ಪುರಂದರವಿಠಲನ ಪ್ರಿಯ ನೀ ಸಲಹಯ್ಯ ಎನ್ನೊಡೆಯ ೩

ಕಾರುಣ್ಯಮೂರುತಿಯೆ—ಹರಿಯನ್ನು ಸೂಚಿಸುತ್ತದೆ
ಕಂಗಳು ಮೂರುಳ್ಳ ದೊರೆಯೆ—ಹರ
ಖಗವೃಷವಾಹನನೆ—ಹರಿಯ ವಾಹನ ಗರುಡ (ಖಗ) ಮತ್ತು ಹರನ ವಾಹನ ಬಸವ (ವೃಷ)
ಗಜಚರ್ಮ ಪೀತಾಂಬರನೆ—ಹರನ ಉಡುಗೆ ಗಜಚರ್ಮ , ಹರಿಯದು ಪೀತಾಂಬರ
ತ್ರಿಪುರಾವಳಿ ಸಂಹಾರನೆ—ತ್ರಿಪುರಗಳನ್ನು ನಾಶಮಾಡಿದ ಹರ
ತ್ರೈಲೋಕ್ಯಪಾವನನೆ—ತನ್ನ ಪಾದಗಳಿಂದ ಗಂಗೆಯನ್ನು ಒದಗಿಸಿ, ಮೂರು ಲೋಕಗಳನ್ನು ಪಾವನಗೊಳಿಸಿದವನು ಹರಿ

# ಹೊನ್ನೂರುಪುರ–ಹೊನ್ನಹೊಳೆ

ದಾಸರ ಪದವೊಂದರಲ್ಲಿ "ಹೊನ್ನೂರುಪುರವಾಸ ನೆಂದೂ ಇನ್ನೊಂದ ರಲ್ಲಿ "ಹೊನ್ನ ಹೊಳೆಯಲಿ ಎಂದೂ ಒಕ್ಕಣೆಗಳಿವೆ ಇವು ಶಿವಮೊಗ್ಗ ಜಿಲ್ಲೆಯಲ್ಲಿ ಭದ್ರಾನದಿಯ ಬಲದಂಡೆಯ ಮೇಲಿರುವ ಹೊಳೆ ಹೊನ್ನೂರೆಂಬ ಹಳ್ಳಿಯನ್ನು ಸೂಚಿಸುತ್ತವೆ ಶಿವಮೊಗ್ಗೆಯಿಂದ ಈಶಾನ್ಯ ದಿಕ್ಕಿನಲ್ಲಿ ಒಂಭತ್ತು ಮೈಲಿ ದೂರವಿರುವ ಇಲ್ಲಿ ಮತ್ತು ಶಿವಮೊಗ್ಗೆ ಯಿಂದ ಹರಿಹರಕ್ಕೆ ಹೋಗುವ ದಾರಿಯಾಗಿ ಇಪ್ಪತ್ತುನಾಲ್ಕು ಮೈಲು ದೂರವಿರುವ ಹೊನ್ನಾಳಿಯಲ್ಲಿ ಮೊದಲಿಗೆ ಬಂಗಾರವನ್ನು ಅಗೆದು ತೆಗೆಯುವ ಉದ್ಯಮ ಇದ್ದುದು ಹೊನ್ನಹೊಳೆ, ಹೊನ್ನಾಳಿ ಹೊನ್ನೂರು, ಹೊನ್ನೂರುಪುರ ಎಂಬ ಹೆಸರುಗಳಿಗೆ ಕಾರಣವಾಯಿತು ಚಾಳುಕ್ಯರ ಸಾಮಂತರಾಗಿ ಆಳುತ್ತಿದ್ದ ಸಿಂದರ ಸಿಂದವಾಡಿ ಪ್ರಾಂತ್ಯಕ್ಕೆ ಸೇರಿದ್ದು ಮುಂದೆ ಬನವಾಸಿ, ಹೊಯ್ಸಳ, ಕಳಚೂರ್ಯ, ದೇವಗಿರಿ ಯಾದವ ಮತ್ತು ವಿಜಯನಗರಗಳ ಸೀಮೆಯೊಳಗೆ ಸೇರಿದ್ದು ಹದಿನಾರನೆಯ ಶತಮಾನದಲ್ಲಿ ಮೂಗಿದೊರೆ ಮಾರನಾಯಕನ ವಶವಾಯಿತು ಹೊಳೆ ಹೊನ್ನೂರಿನ ಜಾತ್ರೆ ಹೆಸರಾಗಿದ್ದಿತು ಇದರ ಹತ್ತಿರ, ಹೊನ್ನಾಳಿಗೆ ನೆರೆಯಾಗಿ, ಬೆಲಗವತ್ತಿ (ಬೆಲಗುತ್ತಿ) ಎಂಬಲ್ಲಿ ಚೆನ್ನಕೇಶವ ದೇವಾಲಯ ವಿದೆ ಬಹುಶಃ ದಾಸರು ಇಲ್ಲಿಗೆ ಬಂದಾಗ ಈ ಪದಗಳನ್ನು ರಚಿಸಿರಬೇಕು ಎರಡನೆಯ ಪದದಲ್ಲಿ 'ಚೆನ್ನ' ಎಂಬ ವಿಶೇಷಣವಿರುವುದನ್ನು ಗಮನಿಸ ಬೇಕು

## ೧೬೩

ಮೋಹನ ಖಂಡಚಾಪು

ಕಂಡು ಕಂಡು ನೀಯೆನ್ನ ಕೈಬಿಡುವರೆ
ಪುಂಡರೀಕಾಕ್ಷ ಪುರುಷೋತ್ತಮ ಹರೇ ಪ

ಬಂಧುಗಳು ಎನಗಿಲ್ಲ ಬದುಕಿನಲಿ ಸುಖವಿಲ್ಲ
ನಿಂದೆಯಲಿ ನೊಂದೆನೈ ನೀರಜಾಕ್ಷ
ತಂದೆತಾಯಿಯು ನೀನೆ ಬಂದುಬಳಗವು ನೀನೆ
ಎಂದೆಂದಿಗೂ ನಿನ್ನ ನಂಬಿದೆನೋ ಕೃಷ್ಣ ೧

ಕ್ಷಣವೊಂದು ಯುಗವಾಗಿ ತೃಣಕಿಂತ ಕಡೆಯಾಗಿ
ಎಣಿಸಲಾರದ ಭವದಿ ನೊಂದಿಹೆ ನಾನು
ಸನಕಾದಿ ಮುನಿವಂದ್ಯ ವನಜಸಂಭವ ಜನಕ
ಫಣಿಶಾಯಿ ಪ್ರಹ್ಲಾದಗೊಲಿದ ಶ್ರೀಕೃಷ್ಣ ೨

ಭಕ್ತವತ್ಸಲನೆಂಬ ಬಿರುದ ಪೊತ್ತಾ ಮೇಲೆ
ಭಕ್ತರಾಧೀನನಾಗಿರಬೇಡವೆ
ಮುಕ್ತಿದಾಯಕ ನೀನು ಹೊನ್ನೂರುಪುರವಾಸ
ಶಕ್ತಗುರು ಪುರಂದರವಿಠಲ ೩



ಆರಭಿ ಆದಿ

ಮುರಹರ ನಗಧರ ನೀನೆ ಗತಿ ಪ
ಧರಣೀ ಲಕ್ಷ್ಮೀಕಾಂತ ನೀನೆ ಗತಿ ಅ

ಶಕಟಮರ್ದನ ಶರಣಾಗತವತ್ಸಲ
ಮಕರ ಕುಂಡಲಧರ ನೀನೆ ಗತಿ
ಅಕಳಂಕಚರಿತ ಆದಿನಾರಾಯಣ
ರುಕುಮಿಣಿಪತಿ ಕೃಷ್ಣ ನೀನೆ ಗತಿ ೧

ಮನೆಮನೆಗಳ ಪೊಕ್ಕು ಕೆನೆ ಹಾಲು
ಬೆಣ್ಣೆಯಪ್ರಮಿತ ಮೆದ್ದ ಹರಿ ನೀನೆ ಗತಿ ೨

ಪನ್ನಗಶಯನ ಸುಪರ್ಣಗಮನ
ಪೂರ್ಣಚರಿತ ಹರಿ ನೀನೆ ಗತಿ
ಹೊನ್ನಹೊಳೆಯಲಿ ಪುರಂದರವಿಟ್ಠಲ
ಚೆನ್ನ ಲಕ್ಷ್ಮೀಕಾಂತ ನೀನೆ ಗತಿ ೩

ಬೆಣ್ಣೆಯಪ್ರಮಿತ—ಅಪರಿಮಿತವಾಗಿ, ಎಂದರೆ ಬೇಕಾದಷ್ಟು, ಬೆಣ್ಣೆಯನ್ನು



# ವಿವಿಧ ಕ್ಷೇತ್ರಗಳು

ದಾಸರ ಕೆಲವು ಪದಗಳಲ್ಲಿ ಹಲವಾರು ಕ್ಷೇತ್ರಗಳನ್ನು ಒಟ್ಟಿಗೆ ಉಲ್ಲೇಖಿಸಿರುವುದಿದೆ ಎಲ್ಲ ಕ್ಷೇತ್ರಗಳ ದೈವಗಳೂ ಅರ್ಚಾವತಾರಗಳಲ್ಲಿ, ಪುರಾಣದ ಪ್ರಸಂಗಗಳಲ್ಲಿ ಬೇರೆಬೇರೆ ರೂಪಗಳನ್ನು ತಳೆದರೂ ಒಂದೇ ದೈವದ ಹಲವು ಮಹಿಮೆಗಳೆಂದು ದಾಸರ ಶ್ರದ್ಧೆ

ಮತ್ತೆ ಕೆಲವು ಪದಗಳಲ್ಲಿ ಕ್ಷೇತ್ರಾಟನೆ ಬರಿಯ ಬಾಹ್ಯಕ್ರಿಯೆಯೆಂದೂ ಎಲ್ಲ ಕ್ಷೇತ್ರಗಳ ಸ್ವಾರಸ್ಯವೂ ವ್ಯಕ್ತಿಯ ದೇಹದಲ್ಲಿಯೇ ಅಡಗಿವೆಯೆಂದೂ ನಿರೂಪಣೆಯಿದೆ ಕ್ಷೇತ್ರಯಾತ್ರೆಯೆಂಬುದು ಸಾಂಕೇತಿಕವಾಗಿರಬೇಕು, ಆಧ್ಯಾತ್ಮಿಕ ಪ್ರಸಕ್ತಿಯಾಗಿರಬೇಕು, ಹಾಗೆ ಸಾಧನೆಗೆ ನೆರವಾಗಬೇಕು , ಲೌಕಿಕ ಪ್ರವಾಸದಂತಲ್ಲ ಕಡೆಯಲ್ಲಿ ಕಾಣಿಸಿರುವ ಪದಗಳು ಈ ಧೋರಣೆ ಯನ್ನು ಹಿಡಿದಿವೆ

## ೧೬೫

ಶಂಕರಾಭರಣ — ಆದಿ

ರಂಗ ಬಾರೋ ಪಾಂಡುರಂಗ ಬಾರೋ ಶ್ರೀ — ಪ
ರಂಗ ಬಾರೋ ನರಸಿಂಹ ಬಾರೋ — ಅ

ಕಂದ ಬಾರೋ ಎನ್ನ ತಂದೆ ಬಾರೋ
ಇಂದಿರಾರಮಣ ಮುಕುಂದ ಬಾರೋ — ೧

ಅಪ್ಪ ಬಾರೋ ತಿಮ್ಮಪ್ಪ ಬಾರೋ ಕಂ
ದರ್ಪನಯ್ಯನೆ ಕಂಚಿ ವರದ ಬಾರೋ — ೨

ಅಣ್ಣ ಬಾರೋ ಎನ್ನ ಚಿಣ್ಣ ಬಾರೋ
ಪುಣ್ಯಮೂರ್ತಿ ಮಹಿಷಪುರಿ ಚೆನ್ನ ಬಾರೋ — ೩

ವಿಷ್ಣು ಬಾರೋ ಉಡುಪಿ ಕೃಷ್ಣ ಬಾರೋ ಎ
ನ್ನಿಷ್ಟಮೂರ್ತಿ ಪುರಂದರವಿಠಲ ಬಾರೋ — ೪



ಕಲ್ಯಾಣಿ ಆದಿ

ಆರಿಗೆ ವಧುವಾದೆ ಅಂಬುಜಾಕ್ಷಿ
ಕ್ಷೀರಾಬ್ಧಿಕನ್ನಿಕೆ ಶ್ರೀ ಮಹಾಲಕುಮಿ ಪ

ಶರಧಿಬಂಧನ ರಾಮಚಂದ್ರ ಮೂರುತಿಗೋ
ಪರಮಾತ್ಮ ಶ್ರೀ ಅನಂತಪದ್ಮನಾಭನಿಗೋ
ಸರಸಿಜನಾಭ ಜನಾರ್ದನ ಮೂರುತಿಗೋ
ಎರಡು ಹೊಳೆಯ ರಂಗಪಟ್ಟಣವಾಸಗೋ ೧

ಚೆಲುವ ಬೇಲೂರ ಚೆನ್ನಿಗರಾಯನಿಗೋ
ಕೆಳದಿ ಹೇಳುಡುಪಿನ ಕೃಷ್ಣರಾಯನಿಗೋ
ಇಳೆಯೊಳು ಪಂಢರಪುರ ನಿಲಯ ವಿಠಲೇಶಗೋ
ನಳಿನಾಕ್ಷಿ ಹೇಳು ಬದರಿ ನಾರಾಯಣಗೋ ೨

ಮಲಯಜಗಂಧಿ ಬಿಂದುಮಾಧವ ರಾಯಗೋ
ಸುಲಭದ ವರ ಪುರುಷೋತ್ತಮನಿಗೋ
ಫಲದಾಯಕ ನಿತ್ಯಮಂಗಳನಾಯಕಗೋ
ಚೆಲುವೆ ನಾಚದೆ ಪೇಳು ಶ್ರೀ ವೆಂಕಟೇಶನಿಗೊ ೩

ವಾಸವಾರ್ಚಿತ ಕಂಚಿ ವರದರಾಜ ಮೂರುತಿಗೋ
ಅಸುರಾರಿ ಶ್ರೀ ಮುಷ್ಣದಾದಿ ವರಾಹನಿಗೋ
ಶೇಷಶಾಯಿಯಾದ ಶ್ರೀರಂಗನಾಯಕನಿಗೋ
ಸಾಸಿರನಾಮದೊಡೆಯ ಅಳಗಿರೀಶಗೋ ೪

ಶರಣಾಗತರ ಪೊರೆವ ಶಾರ್ಙ್ಗಪಾಣಿಗೋ
ವರಗಳೀವ ಶ್ರೀನಿವಾಸ ಮೂರುತಿಗೋ
ಕುರುಕುಲಾಂತಕ ರಾಜಗೋಪಾಲ ಮೂರುತಿಗೋ
ಸ್ಥಿರವಾದ ಪುರಂದರವಿಠಲರಾಯನಿಗೋ ೫

ಶರಧಿಬಂಧನ —ಸೇತುವಿನಲ್ಲಿರುವ ಶ್ರೀರಾಮ

ಅನಂತಪದ್ಮನಾಭ —ಅನಂತಶಯನ

ಎರಡು ಹೊಳೆಯು —ಉಭಯ ಕಾವೇರಿಯ ಶ್ರೀರಂಗಪಟ್ಟಣ

ಕೆಳದಿ—ಗೆಳತಿಯೆ

ಬಿಂದುಮಾಧವ —ಕಾಶಿಯಲ್ಲಿರುವ ವಿಷ್ಣುಸನ್ನಿಧಿ

ಪುರುಷೋತ್ತಮ —ಪುರಿಜಗನ್ನಾಥ ಕ್ಷೇತ್ರ

ಅಳಗಿರೀಶ —ವೆಂಕಟೇಶ್ವರ (ತಿರುಮಲೆ)

ಶಾರ್ಙ್ಗಪಾಣಿ —ಕುಂಭಘೋಣದಲ್ಲಿ ವಿಷ್ಣುಮೂರ್ತಿ

ರಾಜಗೋಪಾಲ —ಮನ್ನಾರುಗುಡಿ



## ೧೩೭

ಕಾಂಬೋದಿ ಝಂಪೆ

ಮರೆಯದೆಲೆ ಮನದಲ್ಲಿ ಸಿರಿವರನ ಚರಣವನು
ಸ್ಮರಿಸುವಂಥವರಿಗೆ ನರರನ್ನಬಹುದೆ ಪ

ಮುರಹರಗೆ ಎರಗುವಾ ಶಿರ ದ್ವಾರಕಾಪುರವು
ಹರಿಕಥೆಯ ಕೇಳುವಾ ಕರ್ಣ ಗೋಕರ್ಣ
ಬಿರುದು ಪೊಗಳುವ ಜಿಹ್ವೆ ಸುರರ ಕ್ಷೀರಾರ್ಣವವು
ಸಿರಿವರನ ಪೂಜಿಪ ಕರವು ರಾಮೇಶ್ವರವು ೧

ಸೃಷ್ಟೀಶ ನಿರ್ಮಾಲ್ಯ ಘ್ರಾಣಿಪ ನಾಸಿಕವು ಕಾಶಿ
ವಿಷ್ಣುವನು ನೋಡುವ ದೃಷ್ಟಿ ಶ್ರೀಮುಷ್ಣ
ಅಷ್ಟಮದ ಜರಿದ ಕಾಯವಯೋಧ್ಯ ಮಧುರೆಯು
ಕೃಷ್ಣನ ಪಾಡುವ ಕಂಠವೇ ಶ್ರೀ ವೈಕುಂಠ ೨

ಧರೆಯೊಳಗೆ ಶ್ರೀ ಪುರಂದರವಿಠಲರೇಯನ
ಪರಮ ಭಾಗವತರ ಉದರ ಬದರಿ
ಪರಕೆ ನಡೆಸುವ ಜಂಘೆ ಹರಿವ ಗಂಗೋತ್ತುಂಗೆ
ಪರಿಯಲೊಪ್ಪುವ ಅಂಗ ಮೇಲು ಶ್ರೀರಂಗ ೩



ಯದುಕುಲ ಕಾಂಬೋದಿ ರುಂಪೆ

ಹರಿಭಕುತಿ ಉಳ್ಳವರ ಶರೀರವೆ ಕುರುಕ್ಷೇತ್ರ ಪ

ಅವರು ನರರೆಂದು ಬಗೆವವರೆ ನರಕವಾಸಿಗಳು ಅ

ಸದಮಲನ ನೆನೆಸುವ ಹೃದಯು ಕಾಶೀಪುರವು
ಮಧುವೈರಿ ನೆನೆವ ಮನ ಮಣಿಕರ್ಣಿಕೆಯು
ಪದುಮನಾಭನ ಪಾಡುವ ವದನವೆ ವೈಕುಂಠ
ಸದಮಲನ ಬಣ್ಣಿಸುವ ಜಿಹ್ವೆ ಶ್ರೀಮುಷ್ಣ ೧

ನರಹರಿಯನೀಕ್ಷಿಸುವ ನಯನ ದ್ವಾರಾವತಿಯು
ಸಿರಿಧರಗೆ ಶರಣೆಂಬ ಶಿರವೆ ಬದರಿ
ಮುರಹರನ ಕಥೆಯು ಕೇಳುವ ಕಿವಿಯೆ ಕೇದಾರ
ಹರಿಯ ನಿರ್ಮಾಲ್ಯ ಘ್ರಾಣಿಪ ಮೂಗು ಮಧುರೆ ೨

ಲಕ್ಷ ಪ್ರದಕ್ಷಿಣೆ ಮಾಡುವಾ ಚರಣ ಮಾಯಾವತಿಯು
ಲಕ್ಷ್ಮೀಪತಿಯು ಪೂಜಿಸುವ ಕರವೆ ಕಂಚಿ
ಶಿಕ್ಷಿಸುವುದು ಸುಕೃತ ದುಷ್ಕೃತ ಆಲಿಸಿ ಕೇಳೊ
ಪಕ್ಷಿವಾಹನ ಪುರಂದರವಿಠಲನು ಕೊಡುವ ಮುಕುತಿ ೩



# ಪದಾರಂಭದ ಅಕಾರಾದಿ

# ಪುರಂದರ ಸಾಹಿತ್ಯ ದರ್ಶನ

ಪುರಂದರದಾಸರಿಗೆ ಕನ್ನಡ ಸಾಹಿತ್ಯ ಇತಿಹಾಸದಲ್ಲೂ, ಕರ್ನಾಟಕ ಸಂಗೀತ ಪರಂಪರೆಯಲ್ಲೂ ಹಿರಿಯ ಸ್ಥಾನವಿದೆ ಅವರ ಕಾಲವಾಗಿ ಸುಮಾರು ಐನೂರು ವರ್ಷಗಳು ಉರುಳಿದ್ದರೂ, ಅವರನ್ನು ಕುರಿತಂತೆ ಜನಪ್ರೀತಿ ಅಚ್ಚಳಿಯದೆ ಉಳಿದುಕೊಂಡಿದೆ ಅವರು ವಿಜಯನಗರ ಸಾಮ್ರಾಜ್ಯದ ಏರಿಳಿತಗಳನ್ನು ಕಣ್ಣಾರೆ ಕಂಡವರು, ಜನರ ಸುಖದುಃಖ ಗಳಲ್ಲಿ ನೇರವಾಗಿ ಪಾಲ್ಗೊಂಡವರು, ತಮ್ಮ ಜೀವಿತಕಾಲದಲ್ಲೇ ಪ್ರಸಿದ್ಧರಾಗಿದ್ದವರು, ಜನರಿಗೆ ಅಧ್ಯಾತ್ಮದ ತಾತ್ಪರ್ಯವನ್ನೂ ಬದುಕಿನ ಮೌಲ್ಯಗಳನ್ನೂ ಮನದಟ್ಟು ಮಾಡಿಸಿಕೊಡಲು ತಮ್ಮ ಜೀವನ ವನ್ನು ಮುಡಿಪಾಗಿಟ್ಟವರು ಧರ್ಮದಲ್ಲೂ ನಿತ್ಯಜೀವನದಲ್ಲೂ ಇದ್ದ (ಇರುವ) ಬೂಟಕತನ, ಕಪಟ, ಆಡಂಬರ, ದುರಾಚಾರಗಳನ್ನು ಖಂಡಿಸಿದರು ಜಾತಿಮತಗಳನ್ನು ಕಡೆಗಣಿಸಿ ಮಾನವಜನ್ಮ ದೊಡ್ಡ ದೆಂದೂ ಅದನ್ನು ಹಾನಿಮಾಡಿಕೊಳ್ಳಬಾರದೆಂದೂ ಊರೂರು ತಿರುಗಿ ಕೇರಿ ಕೇರಿಗಳಲ್ಲಿ ಅಲೆದಾಡಿ, ಮನೆಮನೆಗಳ ಮುಂದೆ ನಿಂತು ತಿಳಿಯ ಪಡಿಸಿದರು

ಅವರ ಐದುನೂರನೆಯ ಹುಟ್ಟುಹಬ್ಬದ ಸಂದರ್ಭದಲ್ಲಿ ಕರ್ನಾಟಕ ಸರ್ಕಾರವು ಅವರ ಸಮಗ್ರ ಸಾಹಿತ್ಯವನ್ನು ನಾಲ್ಕು ಸಂಪುಟ ಗಳಲ್ಲಿ ಪ್ರಕಟಿಸಿದೆ ಅವರ ಕೃತಿಗಳಲ್ಲಿ ಈಗ ದೊರಕುವ ಸುಮಾರು ಒಂದು ಸಾವಿರವನ್ನು ಪರಿಶೀಲಿಸಿ ಪಾಠಶುದ್ಧಿಯ ಕಡೆ ಗಮನವಿಟ್ಟು, ಅಗತ್ಯವಾದ ವಿವರಣೆಗಳೊಂದಿಗೆ, ವಸ್ತುವೈವಿಧ್ಯವನ್ನನುಸರಿಸಿ ವಿಂಗಡಿಸಿ ಓರಣವಾಗಿ ಈ ಸಂಪುಟಗಳಲ್ಲಿ ಕೊಡಲಾಗಿದೆ ಪ್ರತಿ ಸಂಪುಟಕ್ಕೂ ವಿಸ್ತಾರವಾದ ವಿದ್ವತ್ಪೂರ್ಣವಾದ ಪ್ರಸ್ತಾವನೆಯಿದೆ

ಸಂಪುಟ ೧ ಜೀವನ ದರ್ಶನ (ಮಹಿಮಾದರ್ಶನ, ಜೀವನ ದರ್ಶನ, ಕ್ಷೇತ್ರಸಂದರ್ಶನ)

ಸಂಪುಟ ೨ ಅಧ್ಯಾತ್ಮ ದರ್ಶನ (ದೇವತಾದರ್ಶನ, ಮಾಹಾತ್ಮ್ಯ ದರ್ಶನ, ಸಾಧನ ದರ್ಶನ)

ಸಂಪುಟ ೩ ಸಮಾಜ ದರ್ಶನ (ವ್ಯಕ್ತಿನೀತಿ, ಸಮಾಜ ಚಿಂತನ, ಮನೋಬೋಧೆ)

ಸಂಪುಟ ೪ ಕೀರ್ತನ ದರ್ಶನ (ಕೃಷ್ಣಲೀಲೆ, ಸುಳಾದಿಗಳು, ಉಗಾಭೋಗಗಳು, ಸಂಕೀರ್ಣ ಪ್ರಕರಣ)

ಪುರಂದರದಾಸರನ್ನು ಕುರಿತಂತೆ ಇದೊಂದು ವಿಶ್ವಕೋಶ